# ಬುಡಕಟ್ಟುಗಳ ಸಾಮಾಜಿಕ ಬದಲಾವಣೆ

## ಬೆಂಗಳೂರು ಗ್ರಾಮಾಂತರ ಪರಿಸರವನ್ನು ಅನುಲಕ್ಷಿಸಿ
## (ಇರುಳಿಗರು ಮತ್ತು ಹಕ್ಕಿಪಿಕ್ಕಿಗಳನ್ನು ಕುರಿತು)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
ವೆಂಕಟೇಶ

ಮಾರ್ಗದರ್ಶಕರು
ಡಾ. ಹಿ.ಚಿ. ಬೋರಲಿಂಗಯ್ಯ
ಪ್ರಾಧ್ಯಾಪಕರು,
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ - ೫೮೩ ೨೭೬.

ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ - ೫೮೩ ೨೭೬.

# ಬುಡಕಟ್ಟುಗಳ ಸಾಮಾಜಿಕ ಬದಲಾವಣೆ

## ಬೆಂಗಳೂರು ಗ್ರಾಮಾಂತರ ಪರಿಸರವನ್ನು ಅನುಲಕ್ಷಿಸಿ
## (ಇರುಳಿಗರು ಮತ್ತು ಹಕ್ಕಿಪಿಕ್ಕಿಗಳನ್ನು ಕುರಿತು)

**ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ**


ಸಂಶೋಧಕ

**ವೆಂಕಟೇಶ**

ಮಾರ್ಗದರ್ಶಕರು

**ಡಾ .ಹಿ.ಚಿ. ಬೋರಲಿಂಗಯ್ಯ**

ಪ್ರಾಧ್ಯಾಪಕರು,
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ – ೫೮೩೨೭೬.



ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ –೫೮೩ ೨೭೬.

## ಮಾರ್ಗದರ್ಶಕರ ಪ್ರಮಾಣಪತ್ರ

ಶ್ರೀ ವೆಂಕಟೇಶರವರು "ಬುಡಕಟ್ಟುಗಳ ಸಾಮಾಜಿಕ ಬದಲಾವಣೆ" (ಬೆಂಗಳೂರು ಗ್ರಾಮಾಂತರ ಪರಿಸರದ ಇರುಳಿಗರು ಮತ್ತು ಹಕ್ಕಿಪಿಕ್ಕಿಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಹಂಪಿ-ವಿದ್ಯಾರಣ್ಯ
ದಿನಾಂಕ : ೧೮-೦೪-೨೦೧೧

ಡಾ.ಹಿ.ಚಿ. ಬೋರಲಿಂಗಯ್ಯ
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು,
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ-೫೮೩೨೭೬.

## ಸಂಶೋಧಕರ ಪ್ರಮಾಣ ಪತ್ರ

ಶ್ರೀ ವೆಂಕಟೇಶ ಆದ ನಾನು "ಬುಡಕಟ್ಟುಗಳ ಸಾಮಾಜಿಕ ಬದಲಾವಣೆ" (ಬೆಂಗಳೂರು ಗ್ರಾಮಾಂತರ ಪರಿಸರದ ಇರುಳಿಗರು ಮತ್ತು ಹಕ್ಕಿಪಿಕ್ಕಿಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನೆಯ ಮಹಾಪ್ರಬಂಧವನ್ನು ಡಾ.ಹಿ.ಚಿ.ಬೋರಲಿಂಗಯ್ಯ, ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ-೫೮೩೨೭೬, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೮-೦೪-೨೦೧೧

ವೆಂಕಟೇಶ

ಸಂಶೋಧಕರು,

ಬುಡಕಟ್ಟು ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ-೫೮೩೨೭೬.

## ಪರಿವಿಡಿ

# ಅಧ್ಯಾಯ –೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪ್ರಸ್ತಾವನೆ :**

ಭಾರತವು ವಿವಿಧ ಸಮುದಾಯಗಳನ್ನು ಒಳಗೊಂಡ ನಾಡಾಗಿದೆ. ಕರ್ನಾಟಕವು ಹತ್ತು ಹಲವು ಭಾಷೆಗಳನ್ನು, ಜಾತಿಗಳನ್ನು, ಧರ್ಮಗಳನ್ನು ಮತ್ತು ವೃತ್ತಿಗಳನ್ನು ಒಳಗೊಂಡ ಸಮುದಾಯಗಳನ್ನು ತನ್ನ ಒಡಲಿನಲ್ಲಿ ಇಟ್ಟುಕೊಂಡಿದೆ. ಪ್ರತಿಯೊಂದು ಸಮುದಾಯಗಳು ತನ್ನದೇ ಆದ ಚಹರೆಗಳನ್ನು ಹೊಂದಿವೆ. ಬುಡಕಟ್ಟು ಸಮುದಾಯಗಳಲ್ಲಿ ಸಾಮ್ಯೈಕ್ಯತೆ ಕಂಡು ಬಂದರೂ ಸಂಸ್ಕೃತಿಗಳು, ಆಚಾರ–ವಿಚಾರಗಳು, ರೀತಿ–ನೀತಿಗಳು ಮತ್ತು ಸಂಪ್ರದಾಯಗಳು ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ಈ ದೇಶದಲ್ಲಿ ಹಲವಾರು ಬುಡಕಟ್ಟುಗಳು ಕಂಡುಬರುತ್ತವೆ. ಕರ್ನಾಟಕವು ಸಹ ಇದರಿಂದ ಭಿನ್ನವಾಗಿಲ್ಲ. ಸಂವಿಧಾನಾತ್ಮಕವಾಗಿ ಕರ್ನಾಟಕದಲ್ಲಿ ೫೦ ಬುಡಕಟ್ಟು ಸಮುದಾಯಗಳು ಮಾನ್ಯತೆಯನ್ನು ಪಡೆದುಕೊಂಡಿವೆ. ಬೆಂಗಳೂರು ಜಿಲ್ಲೆ ಮತ್ತು ಗ್ರಾಮಾಂತರ ಜಿಲ್ಲೆಯಲ್ಲಿ ಮೇದರು, ಕಣಿಯನ್ನರು, ಸೋಲಿಗರು, ಕಾಡುಕುರುಬರು, ಯರವರು, ಕೋಟಾಗಳು, ಇರುಳಿಗರು, ಜೇನುಕುರುಬರು, ಹಕ್ಕಿಪಿಕ್ಕಿಗಳು, ಗೌಡಾಲರು, ಮುಂತಾದ ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ. ಈ ಬುಡಕಟ್ಟು ಸಮುದಾಯಗಳಲ್ಲಿ ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯಗಳನ್ನು, ಪ್ರಮುಖವಾಗಿ ಬೆಂಗಳೂರು ಗ್ರಾಮಾಂತರ ಪರಿಸರವನ್ನು ನನ್ನ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ನಗರೀಕರಣವು ಬುಡಕಟ್ಟು ಸಮುದಾಯಗಳ ಕಡೆ ಮುಖಮಾಡಿ ತಮ್ಮತ್ತ ಸೆಳೆಯುತ್ತಿವೆ. ಇರುಳಿಗರು ನಗರೀಕರಣದತ್ತ ಮುಖಮಾಡಿ ನಗರದಲ್ಲಿ ಬಂದು ವಾಸಿಸುವ, ಅಲೆಮಾರಿಗಳಾಗಿ ಹಾಗೂ ಅರೆ ಅಲೆಮಾರಿಗಳಾಗಿ ಒಂದೆಡೆ ನೆಲೆ ನಿಂತಿರುವ ಹಕ್ಕಿಪಿಕ್ಕಿ ಸಮುದಾಯಗಳು ಇಲ್ಲಿ ಮುಖ್ಯವಾಗಿವೆ. ಆದರೆ ಇವರು ತಮ್ಮ ಮೂಲ ವೃತ್ತಿಗಳನ್ನು ಅನುಸರಿಸಿಕೊಂಡು ಇದರ ಜೊತೆಗೆ ರಾಜಕೀಯವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವುದು, ಅನೇಕ ಕ್ಷೇತ್ರಗಳಲ್ಲಿ ಸಾಧನೆಗೈದು ತಮ್ಮದೇ ಆದ ಕೊಡುಗೆ ನೀಡಿರುವುದು ತಿಳಿದುಬರುತ್ತದೆ.

ಇರುಳಿಗರು ಹಾಗೂ ಹಕ್ಕಿಪಿಕ್ಕಿ ಸಮುದಾಯಗಳನ್ನು ಅಧ್ಯಯನ ಮಾಡುವುದು ಬಹಳ ಅಗತ್ಯವಿದೆ. ಏಕೆಂದರೆ ಪಾಶ್ಚಿಮಾತ್ಯೀಕರಣ ಮತ್ತು ಪೌರ್ವಾತ್ಯ ಸಂಸ್ಕೃತಿಗಳ ಪ್ರಭಾವದಿಂದ ಈ ಸಮುದಾಯಗಳು ಬದಲಾವಣೆಗೆ ಒಳಗಾಗುತ್ತಿರುವುದನ್ನು ಗಮನಿಸಬಹುದಾಗಿದೆ. ಆದರೂ ಸಹ ರಾಜಕೀಯವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಇನ್ನೂ ಬದಲಾವಣೆಯಾಗಬೇಕಾಗಿದೆ. ಇಂದಿನ ತಾಂತ್ರಿಕ ಯುಗದಲ್ಲಿ ಮುಂದುವರೆಯುತ್ತಿರುವುದರಿಂದ ಅವರ ಜೀವನ ನಿರ್ವಹಣೆ ಕಷ್ಟವಾಗಿದೆ. ಅನೇಕ ರೀತಿಯ ಸಮಸ್ಯೆಗಳನ್ನು ಅವರು ಎದುರಿಸುತ್ತಿದ್ದಾರೆ. ಕಾರಣ ಇಂದಿನ ಪರಿಸ್ಥಿತಿಯಲ್ಲಿ

ಕಾಡುಗಳ ನಾಶ, ಕಚ್ಚಾ ಪದಾರ್ಥದ ಕೊರತೆ ಮತ್ತು ನೈಸರ್ಗಿಕ ಸಂಪತ್ತಿನ ಅಭಾವವು ಅವರ ಈ ಸಮಸ್ಯೆಗಳಿಗೆ ಕಾರಣವಾಗಿದೆ.

ಇಂದಿನ ಆಧುನಿಕ ಪ್ರಪಂಚದಲ್ಲಿ ಬಿದಿರಿನ ಅಭಾವ, ಅವುಗಳ ಕೊರತೆ, ಬೇಡಿಕೆ ಕಡಿಮೆಯಾಗುತ್ತಿರುವುದು ಮತ್ತು ಇಂದಿನ ಪ್ಲಾಸ್ಟಿಕ್‌ನಿಂದ ಕೂಡಿದ ವಸ್ತುಗಳನ್ನು ಜನರು ಹೆಚ್ಚು ಉಪಯೋಗ ಮಾಡುವುದರಿಂದ ಇವರ ವೃತ್ತಿಗೆ ಬೇಡಿಕೆ ಇಲ್ಲದಂತಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳ ಸಾಮಾಜಿಕ-ಆರ್ಥಿಕ ಸ್ಥಿತಿಗಳನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದ ಮೂಲಕ ಅಧ್ಯಯನ ಮಾಡುವ ಪ್ರಯತ್ನವಾಗಿದೆ.

ಭಾರತವು ವಿವಿಧ ಬುಡಕಟ್ಟು ಸಮುದಾಯಗಳಿಂದ ಕೂಡಿದ ರಾಷ್ಟ್ರವಾಗಿದ್ದು, ಅವುಗಳು ವಿಭಿನ್ನರೂಪ ಹಾಗೂ ದೈಹಿಕ ರಚನೆಯಿಂದದೊಳಗೊಂಡಿದ್ದು, ಅನೇಕ ಬಗೆಯ ಜೀವನಕ್ರಮಗಳುಳ್ಳ ಸಮುದಾಯಗಳು ಸಮ್ಮಿಳಿತವಾಗಿವೆ. ಸಾಮಾಜಿಕ ಅಸಮಾನತೆಗಳು ಮತ್ತು ಅಸಮಾನತೆಯನ್ನು ಹೋಗಲಾಡಿಸಲು ಕೈಗೊಳ್ಳುವ ಕ್ರಮಗಳು ಇವತ್ತಿನ ಸಮಾಜದ ಸಮಾನಾಂಶಗಳಾಗಿವೆ. ಈ ಸಂಬಂಧದ ವೈಜ್ಞಾನಿಕ ಅಧ್ಯಯನ ಆರಂಭವಾಗಿರುವುದು ಇತ್ತೀಚಿನ ಬೆಳವಣಿಗೆ. ಒಂದು ಸಾಮಾಜಿಕ ಸ್ಥಿತಿಯಿಂದ ಮತ್ತೊಂದು ಸಾಮಾಜಿಕ ಸ್ಥಿತಿಗೆ ಕಸುಬು, ಸಾಮಾಜಿಕ ಸ್ಥಾನಮಾನ, ಐಶ್ವರ್ಯ ಮತ್ತು ಅಧಿಕಾರ ಈ ಅಂಶಗಳು ಪ್ರಮುಖ ಬದಲಾವಣೆಗೆ ಕಾರಣವಾಗಿವೆ. ಸ್ಥಿತ್ಯಂತರಗೊಳ್ಳುವ ಮಾನವ ಗುಂಪುಗಳ ಸಾಮಾಜಿಕ ಚಲನೆ ಪ್ರಕ್ರಿಯೆ ಕುತೂಹಲಕರ ವಿಷಯವಾಗಿದ್ದು ಅಧ್ಯಯನಕ್ಕೆ ಯೋಗ್ಯವಾಗಿದೆ.

ಬುಡಕಟ್ಟು ಸಮುದಾಯಗಳು ಭಾರತದ ಭಾಗವಾಗಿ ಬದುಕಬೇಕಾದರೆ ಅವರಿಗೆ ಬೇಕಾದ ಶೈಕ್ಷಣಿಕ ಪಾಠಶಾಲೆಯನ್ನು ಮತ್ತು ರಸ್ತೆಯನ್ನು ಮೊದಲು ಕೊಡೋಣ ಎಂಬ ಅಂಶವನ್ನು ನೆಹರೂರವರು ಪ್ರಸ್ತಾಪಿಸಿದ್ದಾರೆ. ಬುಡಕಟ್ಟು ಸಮುದಾಯಗಳು ತಮ್ಮ ಜಮೀನನ್ನು ಅವರೇ ಉತ್ತಿ ಬಿತ್ತಿ ಬೆಳೆಯನ್ನು ತೆಗೆಯುವ ಪ್ರಜ್ಞೆ ಬಂದಾಗ, ಭಾರತದ ಅಭಿವೃದ್ಧಿಯಾಗುತ್ತದೆ ಎಂಬ ಮಾತುಗಳು ಒಂದೆಡೆಯಾದರೆ, ಪ್ರಸ್ತುತ ಆಧುನಿಕ ಯುಗದಲ್ಲಿ ಬದುಕುತ್ತಿರುವ ನಾವೆಲ್ಲರು ಜಾಗತಿಕ ಅರ್ಥ ವ್ಯವಸ್ಥೆಯಲ್ಲಿ ಅಥವಾ ಮಾರುಕಟ್ಟೆಯ ಆರ್ಥಿಕ ನೀತಿ ಎಂದು ನಾವು ಕರೆಯುವ ಈ ನೀತಿಯಿಂದ ಅನೇಕ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ. ಈ ಆರ್ಥಿಕ ನೀತಿಯಲ್ಲಿ ನಾವು ಯಶಸ್ಸನ್ನು ಪಡೆದುಕೊಳ್ಳಬೇಕಾದರೆ ಕೆಲವೊಂದು ಅರ್ಹತೆಗಳು ಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ. ಬಲವಿದ್ದವನು ಬದುಕಬಲ್ಲ. ಇದು ಮಾರುಕಟ್ಟೆ ನೀತಿಯ ಹಿಂದೆ ಕೆಲಸ ಮಾಡುತ್ತಿದೆ. ಆದರೆ ಈ ಮಾರುಕಟ್ಟೆ ಆರ್ಥಿಕತೆಯ ವಲಯದಿಂದ ಬುಡಕಟ್ಟು ಪ್ರದೇಶಗಳು ಛಿನ್ನವಾಗಿವೆ. ಇವತ್ತಿನ ನಮ್ಮ ಮುಖ್ಯ ಕರ್ತವ್ಯವೇನೆಂದರೆ, ಸಂವಿಧಾನವೇ ಹೇಳುವಂತೆ ಮಾರುಕಟ್ಟೆಯ ಆರ್ಥಿಕ ನೀತಿಯ ಆಕ್ರಮಣದಿಂದ ಈ ಬುಡಕಟ್ಟು ಸಮುದಾಯದ ಪ್ರದೇಶಗಳನ್ನು ರಕ್ಷಿಸಬೇಕಾಗಿದೆ. ಬುಡಕಟ್ಟುಗಳ ಭೂಮಿಗಳನ್ನು ಆಕ್ರಮಿಸಿಕೊಂಡು ಅವರನ್ನು ಒಕ್ಕಲೆಬ್ಬಿಸುವ ವ್ಯವಸ್ಥೆಯನ್ನು ನಾವು ನಿಯಂತ್ರಿಸಬೇಕಾಗಿದೆ.

ಬುಡಕಟ್ಟು ಜನರ ಆರ್ಥಿಕ ಚಟುವಟಿಕೆಗಳನ್ನು ಹಾಳು ಮಾಡುವ ಕಾರ್ಯಾಚರಣೆಯನ್ನು ನಾವು ಸಹಿಸುವುದಿಲ್ಲ. ಬುಡಕಟ್ಟುಗಳು ಶಾಂತಿ ನೆಮ್ಮದಿಯಿಂದ ಮುಂದುವರೆಯಬೇಕೆಂದು ಅಂದು ನೆಹರು ಹೇಳಿದಂತೆ ಮೌಲ್ಯಗಳು ಇಂದು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿವೆ.

ಇಲ್ಲಿಗರ ಸಂಸ್ಕೃತಿಯು ಮೂಲ ಸಂಸ್ಕೃತಿ ಎಂದರೆ Primitive ಎನ್ನಬಹುದಾದದ್ದು. ಇದರಲ್ಲಿ ಬಹು ಹಿಂದಿನ ಸಾಮಾಜಿಕ ವ್ಯವಸ್ಥೆಗಳ ಪಳೆಯುಳಿಕೆಗಳನ್ನು ಕಾಣಬಹುದು. ಇತರ ಧರ್ಮ ಸಂಸ್ಕೃತಿಗಳ ಒಡನಾಟವಿದ್ದರೂ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸಿಕೊಳ್ಳುವ ಮಟ್ಟಿಗೆ ಅನ್ಯರ ಪ್ರಭಾವಕ್ಕೆ ಒಳಗಾಗಿರುವುದಿಲ್ಲ. ವನವಾಸಿಗಳಾದ ಇವರ ಮೇಲೆ ಕ್ರಿಶ್ಚಿಯನ್ ಪಾದ್ರಿಗಳು, ಆಂಗ್ಲರ ಆಡಳಿತಗಳು, ಒಡೆತನಗಳು, ಧರ್ಮ ಪ್ರಚಾರಕರು ಪ್ರಭಾವ ಬೀರಲಾಗಿಲ್ಲ. ಈ ಬುಡಕಟ್ಟು ಸಮುದಾಯವು ಯಾವ ಕಾಲಕ್ಕೂ ಯಾರ ಆಡಳಿತಕ್ಕೂ ಒಳಗಾಗದೆ ಇರುವುದರ ಪ್ರಯುಕ್ತ ಇವರ ಸಾಮಾಜಿಕ ವ್ಯವಸ್ಥೆಗೆ ವಿಶಿಷ್ಟತೆಯಿದೆ.

ಬಹುಕಾಲ ಅನ್ಯರ ಸಂಪರ್ಕವಿಲ್ಲದೆ ಗುಡ್ಡಗಾಡುಗಳಲ್ಲಿ ವಾಸವಾಗಿದ್ದ ಈ ಜನರು ತಮ್ಮ ಮೂಲ ಸಂಸ್ಕೃತಿಯನ್ನು ತಮಗೆ ಅರಿವಿಲ್ಲದೇ ಉಳಿಸಿಕೊಂಡು ಬರಲು ಸಾಧ್ಯವಾಗಿದೆ. ಇವರ ಸಾಮಾಜಿಕ ವ್ಯವಸ್ಥೆಗೆ ವೇದೋಪನಿಷತ್ತುಗಳು, ಪುರಾಣಗಳು, ಧರ್ಮಗಳು, ಶಾಸ್ತ್ರಗಳು ಮತ್ತು ಪರಂಪರೆ ಇರುವುದಿಲ್ಲ. ಇವರ ನಿಯಮಗಳಿಗೆ ಹಿಂದೂ ವೈದಿಕ ಧರ್ಮ ಶಾಸ್ತ್ರದ ಪ್ರಭಾವ ಇರಲು ಸಾಧ್ಯವಿಲ್ಲ. ವರ್ತಮಾನ ಕಾಲದಲ್ಲಿಯೂ ತಮ್ಮ ಬುಡಕಟ್ಟಿನ ನಿಯಮಗಳಿಗೆ ಬದ್ಧರಾಗಿ ಬದುಕು ನಡೆಸುತ್ತಿರುವುದನ್ನು ನಾವು ಕಾಣಲು ಸಾಧ್ಯವಾಗಿದೆ.

ಒಂದು ಸಮುದಾಯದ ಜೀವನ ಶೈಲಿ, ಸಂಸ್ಕೃತಿಯು ಪರಂಪರೆಯಲ್ಲಿನ ಮೌಲ್ಯಗಳನ್ನು ಆಧರಿಸಿ ರೂಪುಗೊಂಡಿರುತ್ತದೆ. ಸಂಸ್ಕೃತಿಯು ಆಂತರಿಕ ಮತ್ತು ಬಾಹ್ಯ ಒತ್ತಡಗಳಿಂದಾಗಿ ಬದಲಾಗುವ ಸಾವಯವ ಸಾರಭೂತವಾದ್ದರಿಂದ ಆಯಾ ಬದಲಾವಣೆಗಳಿಗೆ ತಕ್ಕಂತೆ ಜೀವನ ವಿಧಾನವೂ ಆಗಾಗ ಮಾರ್ಪಾಡಿಗೆ ಒಳಗಾಗುತ್ತದೆ.೧ ಇರುಳಿಗರು ಕೂಡ ಈ ಹೇಳಿಕೆಯಂತೆಯೇ ತಮ್ಮ ಮೂಲ ಮೌಲ್ಯಗಳನ್ನು ಉಳಿಸಿಕೊಳ್ಳುವುದರ ಜೊತೆಗೆ ಕಾಲ, ದೇಶ ಪರಿಸರಕ್ಕನುಗುಣವಾಗಿ ಬದಲಾವಣೆಗೆ ಒಳಗಾಗಿದ್ದಾರೆ.

ಮಾನವ ಸಂಪತ್ತಿನ ಅಭಿವೃದ್ಧಿ ಎಂದರೆ ಅಂತಃಕರಣದ ಸಂವರ್ಧನೆ ಭೌತಿಕ ಸಂಪತ್ತಿನ ಅಭಿವೃದ್ಧಿಗಿಂತ ಅಭೌತಿಕ ಜ್ಞಾನ ಕ್ರಮಗಳ ವಿಸ್ತರಣೆ ತುಂಬ ಮುಖ್ಯ. ಸಾಮಾಜಿಕ ಸಂಬಂಧಗಳು ಬಲಗೊಳ್ಳುವುದು, ಮಾನವ ಸಂಪತ್ತಿನ ಅಂತಃಕರಣದಿಂದಲೇ, ಅಂತಃಕರಣವಿಲ್ಲದ ಯಾವ ಆರ್ಥಿಕ ವ್ಯವಸ್ಥೆಯೂ ಅಭಿವೃದ್ಧಿಯಲ್ಲ. ಯೂರೋ ಕೇಂದ್ರಿತ ಆರ್ಥಿಕ ದಿಗ್ವಿಜಯಗಳೆಲ್ಲವೂ ಅನೈತಿಕವಾದವು. ಗಾಂಧೀಜಿಯವರ ಆರ್ಥಿಕ ಸೂತ್ರಗಳು ಅಂತಃಕರಣದ ಮೂಲದಿಂದಲೇ ಹುಟ್ಟಿಕೊಂಡವಾಗಿದ್ದವು. ಮಾವೊತ್ಸೆತುಂಗ್ ಕೂಡ ಸಾಂಸ್ಕೃತಿಕ ಕ್ರಾಂತಿಯ ಮೂಲಕ

ಚೀನಾದ ಆರ್ಥಿಕ ಅಭಿವೃದ್ಧಿಯನ್ನು ಸುಭದ್ರಗೊಳಿಸಿದ. ಹನ್ನೆರಡನೆ ಶತಮಾನದಲ್ಲಿ ಘಟಿಸಿದ ಕರ್ನಾಟಕದ ಎಲ್ಲಾ ತಳಸಮುದಾಯಗಳ ಜಾತ್ಯಾತೀತವಾದ ಕರಕುಶಲ ದೇಶಿಯ ಉತ್ಪಾದನಾ ಜ್ಞಾನ ಈ ಕಾಲಕ್ಕೂ ಅಗತ್ಯವಾಗಿ ಬೇಕಾಗಿದೆ. ಸಂಸ್ಕೃತಿಗಳ ಅಭಿವೃದ್ಧಿ ಎಂದರೆ ಆಯಾ ಸಮುದಾಯಗಳ ಭಾಷೆಯ ಅಭಿವೃದ್ಧಿಯೂ ಹೌದು. ಅಂತೆಯೇ ಜೀವನ ಮೌಲ್ಯಗಳ ಉನ್ನತೀಕರಣವೂ ಹೌದು. ಗಾಂಧೀಜಿಯವರ ಆದರ್ಶ ರಾಜ್ಯದಲ್ಲಿ ಇದ್ದದ್ದು ಪ್ರಾದೇಶಿಕವಾದ ತಳಸಮುದಾಯಗಳ ಸಂಸ್ಕೃತಿ ನಿಷ್ಠವಾದ ತಿಳುವಳಿಕೆಯ ಸಾಂಸ್ಕೃತಿಕ ಕ್ರಾಂತಿಯ ಮೂಲಕವೇ ನಮ್ಮ ದೇಶದ ಎಲ್ಲಾ ಬುಡಕಟ್ಟುಗಳ ಬಗ್ಗೆ ಪುನರ್‌ರಚಿಸಿ ನವೀಕರಿಸಬೇಕು. ಸಂಸ್ಕೃತಿಯು ಕೂಡ ವಿಜ್ಞಾನ ಮತ್ತು ತಂತ್ರಜ್ಞಾನಗಳಷ್ಟೇ ಮುಖ್ಯ ಎಂಬ ವಿವೇಕ ನಮ್ಮ ರಾಜಕಾರಣಕ್ಕೆ ಮನವರಿಕೆ ಆಗಬೇಕು. ಸಂಸ್ಕೃತಿ ಮತ್ತು ಅದರ ಸಮಾಜಗಳು ಆಧುನೀಕತೆಯ ಜೊತೆ ಮುಖಾಮುಖಿಯಾಗುವಾಗ ತನ್ನ ಅಸ್ತಿತ್ವದ ಅನನ್ಯತೆಯನ್ನು ಕಾಲಕಾಲಕ್ಕೆ ಸಮಕಾಲೀನಗೊಳಿಸಿಕೊಳ್ಳುತ್ತ ಬಲಗೊಳಿಸಬೇಕು. ಸಂಸ್ಕೃತಿಗಳ ಸೃಜನಶೀಲವಾದ ಆವಿಷ್ಕಾರಗಳು ಮತ್ತು ಆಲೋಚನೆ ಕಾಲಾಂತರದಿಂದ ವಿಕಾಸಗೊಳ್ಳುತ್ತ ಬಂದಿರುತ್ತವೆ. ಈ ಪಥದಲ್ಲೇ ಸಂಕೀರ್ಣಗೊಂಡ ಭಾರತೀಯ ಸಮಾಜಗಳ ಭಿನ್ನ ಕಾಲ ಮತ್ತು ಅವಕಾಶಗಳನ್ನು ಆಧುನಿಕೋತ್ತರ ಜಗತ್ತಿನ ಪ್ರಗತಿಯ ಮುಖಾಮುಖಿಗಳಲ್ಲಿ ಪರಿಶೀಲಿಸಿ ಪರಿಷ್ಕರಿಸಿಕೊಳ್ಳಬೇಕಾಗುತ್ತದೆ.

ನಮ್ಮ ಸಾಮಾಜಿಕ ಸಂರಚನೆಯೊಳಗೆ ಮಾನವನ ಪ್ರತಿಭಾಶಕ್ತಿಯ ಜೀವ ನೆಲೆಗಳಿಂದ ಇರುಳಿಗರು ಹಾಗೂ ಹಕ್ಕಿಪಿಕ್ಕಿಗಳು ತಮ್ಮದೇ ಅನನ್ಯತೆಯಲ್ಲಿ ಬದುಕುತ್ತ ಬಂದಿದ್ದಾರೆ. ನಮ್ಮ ಅಭಿವೃದ್ಧಿಯ ನಿರ್ವಚನ ಆರ್ಥಿಕಾಭಿವೃದ್ಧಿಯನ್ನು ಪರಿಗಣಿಸುತ್ತದೆ. ನಗರೀಕರಣ, ಕೈಗಾರೀಕರಣ ಈ ಪರಿಭಾಷೆಯಲ್ಲಿ ಬುಡಕಟ್ಟುಗಳ ಅಭಿವೃದ್ಧಿ ಎಂದರೆ ಕಾಡಿನ ಒಳಗೆ ಹಾಗೂ ಅಂಚು ವಾಸಿಗಳಾಗುವುದಕ್ಕೆ ತಕ್ಕ ಭೂಮಿಯನ್ನು ಸೃಷ್ಟಿಸುವುದು. ಇರುಳಿಗರ ಸಂದರ್ಭದಲ್ಲಿ ಕಾಡಾಡಿಗಳಾಗಿದ್ದ ಅವರಿಗೆ ನಾಡೊಳಗೆ ಸರಕಾರಿ ವಸತಿ ಯೋಜನೆಯಡಿಯಲ್ಲಿ ಸೂರು ಕಟ್ಟಿಕೊಟ್ಟು ಫಲಾನುಭವಿಗಳನ್ನಾಗಿ ಮಾಡುವುದು. ಇದು ಇರುಳಿಗರಿಗೆ, ಹಕ್ಕಿಪಿಕ್ಕಿಗಳಿಗೆ ಇದ್ದ ಜೀವನೋಪಾಯದ ಶಕ್ತಿ ಮೂಲಗಳು ಉದಾ:– ವೈದ್ಯ, ಕಾಡುತ್ಪತ್ತಿ, ಬೀಳು ಬಿದಿರಿನ ಕಲೆಗಾರಿಕೆ, ಕುಣಿತ, ಎಲ್ಲವನ್ನು ನಾಶಮಾಡಿ ಅವರನ್ನು ಪರತಂತ್ರಕ್ಕೆ ಒಡ್ಡುತ್ತದೆ. ಈ ಬಗೆಯ ಅಸಹಾಯಕತೆ ಅವರ ಆತ್ಮವಿಶ್ವಾಸವನ್ನು ಕಳೆಯುತ್ತದೆ. ಎಲ್ಲರಿಗೂ ಸೂರು, ಭೂಮಿ, ಹಾಗೂ ಆಕಳುಗಳನ್ನು ನೀಡುವ ಯೋಜನೆಗಳು ಸಮಸ್ಯೆಗೆ ಯಾವ ಪರಿಹಾರವನ್ನು ಒದಗಿಸುತ್ತಿಲ್ಲ. ಆರ್ಥಿಕತೆಯ ಆಚೆಗೆ ಮಾನವನ ಬದುಕನ್ನು ಸಂಪನ್ನಗೊಳಿಸಿದ ಸಾಂಸ್ಕೃತಿಕ ಆಯಾಮವಿದೆ. ಹೀಗಾಗಿ ಪಶ್ಚಿಮದ ಅಭಿವೃದ್ಧಿ ಎಂದರೆ ಆರ್ಥಿಕ ಚೈತನ್ಯ ಎನ್ನುವ ಪರಿಕಲ್ಪನೆ ನಮ್ಮ ಸಂದರ್ಭಕ್ಕೆ ಒಗ್ಗುವುದಿಲ್ಲ. ಆದ್ದರಿಂದ ನಮ್ಮ ಅಭಿವೃದ್ಧಿಯಲ್ಲಿ ಆರ್ಥಿಕ ಚಲನಗಳ ಜೊತೆಗೆ ನಾವು ಸಾಂಸ್ಕೃತಿಕವಾಗಿ, ಸಾಮಾಜಿಕ ಅಂಶಗಳನ್ನು ಇಟ್ಟುಕೊಂಡೇ ನೋಡಬೇಕು. ಒಂದು ಸಮುದಾಯದ ಅಭಿವೃದ್ಧಿಯಲ್ಲಿ ಆರ್ಥಿಕತೆ ಒಂದು ಪ್ರಮುಖ ಅಂಶವಾಗಿದೆ.

ಆರ್ಥಿಕೇತರ ಅಂಶಗಳಾದ "ಬದುಕಿನ ಧೋರಣೆ, ದುಡಿಮೆ, ಅಧಿಕಾರ, ನೌಕರಶಾಹಿ, ಆಡಳಿತ ವ್ಯವಸ್ಥೆ, ಯತಾಸ್ಥಿತಿಯಲ್ಲ ಹಾಗೂ ಕ್ರಿಯಾಶೀಲ ಪ್ರಜ್ಞೆಯನ್ನು ಮೂಡಿಸುತ್ತವೆ. ನೂರಾರು ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಅಭಿವೃದ್ಧಿಯನ್ನು ನಿರ್ಧರಿಸುವ ಚಲನೆಗಳಾಗಿವೆ.೨ ಆರ್ಥಿಕತೆಗೆ ನೀಡಿದ ಅತಿಯಾದ ಮಹತ್ವ ನಮ್ಮ ಬುಡಕಟ್ಟು ಸಮುದಾಯದ ಸಾಮಾಜಿಕ ಸಾಂಸ್ಕೃತಿಕ ಬದುಕಿಗೆ ಹೊಸ ಸಂಘರ್ಷವನ್ನುಂಟುಮಾಡಿದೆ. ಹಾಗಾಗಿ ಅಭಿವೃದ್ಧಿ ಎಂದರೆ ಆರ್ಥಿಕ ಚೈತನ್ಯ ಎನ್ನುವ ಪಶ್ಚಿಮದ ಪರಿಕಲ್ಪನೆ. ಇದು ಭಾರತೀಯರ ಬಹು ಆಯಾಮದ ಸಾಂಸ್ಕೃತಿಕ ಸಂದರ್ಭಕ್ಕೆ ಹೊಂದುವುದಿಲ್ಲ. ಒಂದು ಬುಡಕಟ್ಟಿನ ಸಾಮಾಜಿಕ, ಸಾಂಸ್ಕೃತಿಕ ಅಗತ್ಯ ಮತ್ತು ಅನುಭವ ಇನ್ನೊಂದು ಬುಡಕಟ್ಟಿಗಿಂತ ಬೇರೆಯಾಗಿರುತ್ತದೆ. ಹೀಗಾಗಿ ಬುಡಕಟ್ಟು ಒಂದರ ಅಭಿವೃದ್ಧಿ ಕ್ರಿಯಾಶೀಲ ಯೋಜನೆಗಳನ್ನು ಅದರ ಸಂಸ್ಕೃತಿಯ ಒಳಗಡೆ ಅವರ ಬದುಕಿನ ವಿನ್ಯಾಸದ ನೆಲೆಯಲ್ಲಿ ಹುಟ್ಟು ಹಾಕಬೇಕು.

ನಮ್ಮ ಅಭಿವೃದ್ಧಿಯ ಪರಿಕಲ್ಪನೆ ಪಶ್ಚಿಮದಿಂದ ಸ್ವೀಕರಿಸಲಾಗಿದೆ. ಅದು ಇಡಿಯಾಗಿ ಆರ್ಥಿಕ ನೆಲೆಯನ್ನು ಆಧರಿಸಿದ್ದಾಗಿದೆ. ಇಂತಹ ಅಭಿವೃದ್ಧಿ ಯೋಜನೆಗಳಲ್ಲಿ ನಮ್ಮ ಸಾಂಸ್ಕೃತಿಕ ಬಹುರೂಪಗಳ ಕಡೆಗೆ ಒಂದು ದೃಷ್ಟಿಯೂ ಇಲ್ಲ. ಇದು ಪ್ರಗತಿಯ ನೆಪದಲ್ಲಿ ನಮ್ಮ ಬುಡಕಟ್ಟುಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳನ್ನು ಹಾಗೂ ಅವರ ಶಕ್ತಿ ಮೂಲಗಳನ್ನು ನಾಶಮಾಡಿದೆ.

ಬುಡಕಟ್ಟು ಸಮುದಾಯಗಳ ಬದುಕು ಅತ್ಯಂತ ದಯನೀಯವಾಗಿದೆ. ಈ ಸಂದರ್ಭದಲ್ಲಿ ಅವರ ಬಗೆಗಿನ ಅಧ್ಯಯನಗಳು ಅವರಲ್ಲಿ ಸಾಮಾಜಿಕ ಎಚ್ಚರವನ್ನುಂಟು ಮಾಡುವಂತಿರಬೇಕು. ಬುಡಕಟ್ಟು ಸಮುದಾಯಗಳು ಸಹ ತಮ್ಮ ಕೀಳರಿಮೆ, ಆಂತರಿಕ ಭೀತಿಯಿಂದ ಹೊರಬರಬೇಕು. ಸಾಮಾಜಿಕವಾಗಿ ತಮ್ಮನ್ನು ತಾವು ಹೆಮ್ಮೆಯಿಂದ ಗುರುತಿಸಿಕೊಳ್ಳುವಂತಾಗಬೇಕು. ತಮ್ಮ ಸಂಸ್ಕೃತಿಯ ಮಾನವೀಯತೆಯನ್ನು ಉಳಿಸಿಕೊಂಡು ಮಾನವನ ಸಮಾಜದ ನಿರ್ಮಾಣದಲ್ಲಿ ನಿರ್ಭಿತಿಯಿಂದ ಬುಡಕಟ್ಟು ಸಮುದಾಯಗಳು ತೊಡಗಿಸಿಕೊಳ್ಳಬೇಕಾಗಿದೆ. ಸ್ಪರ್ಧಾತ್ಮಕವಾದ ಈ ಜಗತ್ತು ಮನುಷ್ಯರ ನಡುವಿನ ಕನಿಷ್ಠ ಸೌಜನ್ಯ ಮತ್ತು ಹೃದಯ ಸಂವಾದದ ಸಾಧ್ಯತೆಯನ್ನು ಇಲ್ಲವಾಗಿಸಿದೆ. ಮಾನವನ ಪ್ರೇಮ ಮತ್ತು ನಿಷ್ಠುರ ಸಮಾನತೆಯ ಅಡಿಗಲ್ಲಾಗುವ ಹೊಸ ಸಾಂಸ್ಕೃತಿಕ ಪರಿಸರವನ್ನು ಕಟ್ಟುವ ನಿರಂತರ ಪ್ರಯತ್ನ ಎಲ್ಲಾ ಪ್ರಾಮಾಣಿಕ ಜನಪದ ಸಂಘಟನೆಗಳ ಕಾರ್ಯ ಯೋಜನೆಯಲ್ಲಿರಬೇಕಾಗಿದೆ. ವೈಜ್ಞಾನಿಕ ಶಿಕ್ಷಣ ಮತ್ತು ಪ್ರಗತಿಯಿಂದ ಸಾಮಾಜಿಕ ಜವಾಬ್ದಾರಿಯ ವಾತಾವರಣ ನಿರ್ಮಾಣವಾಗಬೇಕಾಗಿದೆ. ಹಾಗಾದಾಗ ಮಾತ್ರ ಬುಡಕಟ್ಟು ಸಮುದಾಯಗಳು ತಮ್ಮಿಷ್ಟದಂತೆ ಬದುಕಲು ಸಾಧ್ಯವಾಗುತ್ತದೆ.

ನಮ್ಮ ಅಭಿವೃದ್ಧಿ ಯೋಜನೆಗಳು ಅವರನ್ನು ನಾಗರೀಕರನ್ನಾಗಿ ಮಾಡುತ್ತಿದೆಯೇ ಹೊರೆತು, ಅವರ ಸಾಂಸ್ಕೃತಿಕ ಸಾಧ್ಯತೆಗಳೊಂದಿಗೆ ಮುಖಾಮುಖಿಯಾಗುವುದಿಲ್ಲ. ಅವರ ಬದುಕಿನಲ್ಲಿ ಉಂಟಾಗುವ ಈ ನಗರೀಕರಣ ಅವರ ಬುಡಕಟ್ಟಿನ ಅನನ್ಯತೆಯನ್ನು ಮುಚ್ಚಿ ಹಾಕಿ ಮುಖ್ಯವಾಹಿನಿಯೊಂದಿಗೆ ಬೆರೆಯುವಂತೆ ಮಾಡುತ್ತದೆ. ಇದು ನಮ್ಮ

ಸಾಂಸ್ಕೃತಿಕ ಅನನ್ಯತೆ ಮತ್ತು ಬಹುತ್ವಗಳನ್ನು ನಾಶ ಮಾಡುತ್ತದೆ. ಹಾಗಾದರೆ ಬುಡಕಟ್ಟುಗಳ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು ಅವರ ಅಭಿವೃದ್ಧಿಯನ್ನು ಸಾಧಿಸುವುದು ಹೇಗೆ? ಇದು ಬಹಳ ಸೂಕ್ಷ್ಮವಾದ ಪ್ರಶ್ನೆ. ನಮ್ಮ ಮುಂದಿರುವ ಆರ್ಥಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಈ ಪ್ರಶ್ನೆಯನ್ನು ಬಿಡಿಸಿಕೊಳ್ಳುವುದು ಹೇಗೆ? ಬುಡಕಟ್ಟುಗಳ ಅಭಿವೃದ್ಧಿ ಹಾಗೂ ಸಾಂಸ್ಕೃತಿಕ ಬದುಕಿಗೆ ಪುನಶ್ಚೇತನ ನೀಡುವ ಮೂಲಕವೇ ಅವರ ಆರ್ಥಿಕ ಅಭಿವೃದ್ಧಿ ಸಾಧ್ಯವಾಗುವಂತಾಗಬೇಕು. ಇಲ್ಲಿ ಪುನಶ್ಚೇತನ ನೀಡುವುದೆಂದರೇನು? ಅವರ ಸಂಗೀತ, ಕುಣಿತ, ವಾದ್ಯ, ಭಾಷೆ, ಜ್ಞಾನ, ಕೌಶಲ್ಯಗಳನ್ನು ಇತ್ಯಾತ್ಮಕವಾಗಿ ಕಟ್ಟಿಕೊಡುವುದು. ಇರುಳಿಗರಲ್ಲಿ ಹಾಗೂ ಹಕ್ಕಿಪಿಕ್ಕಿಗಳಲ್ಲಿ ಪಾರಂಪರಿಕ ವೈದ್ಯಜ್ಞಾನ, ಬೇಟೆ ತಂತ್ರ, ರಂಗಸಾಮರ್ಥ್ಯ, ಕಲೆ, ಭಾಷಾ ಸಂಪತ್ತನ್ನು, ಪ್ರಸ್ತುತ ಅಗತ್ಯದ ಸಾಧ್ಯತೆಯಾಗಿ ನಿರ್ಮಾಣ ಮಾಡುವುದು. ಇದು ಸಾಹಿತ್ಯ, ಜಾನಪದ ಉತ್ಸವಗಳಲ್ಲಿ ಹಬ್ಬ ಜಾತ್ರೆಯಂತಹ ಸಂದರ್ಭಗಳಲ್ಲಿ ಅವರನ್ನು ಪ್ರದರ್ಶನದ ರಂಗಿನ ವಸ್ತುವಾಗಿಸುವ ಅಥವಾ ವಿದ್ವಾಂಸರ ಅಧ್ಯಯನದ ಸರಕಾಗಿಸುವ ಅಥವಾ ರಾಜಕಾರಣಿಗಳ ಪ್ರತಿಷ್ಠೆ ಪ್ರಚಾರಕ್ಕೆ ಪ್ರಯೋಗ ಪಶುವಾಗಿಸುವ ಪ್ರಕ್ರಿಯೆಯದಲ್ಲ. ನಿರಂತರ ಯೋಜನೆಯ ಮೂಲಕ ಅದು ಅವರ ಬದುಕಿಗೆ ಹೊಸ ಜೀವಶಕ್ತಿ ತುಂಬುವಲ್ಲಿ ಆತ್ಮವಿಶ್ವಾಸವನ್ನು ಕಟ್ಟಿಕೊಡುವಂತಾಗಬೇಕಾಗಿದೆ.

ಪುನಶ್ಚೇತನದ ದಾರಿಯಲ್ಲಿ ಹೊರಟಾಗ ಇನ್ನೊಂದು ಇಕ್ಕಟ್ಟು ಎದುರಾಗುತ್ತದೆ. ಪ್ರಸ್ತುತ ನಮ್ಮ ಶೈಕ್ಷಣಿಕ ವ್ಯವಸ್ಥೆ, ಉದ್ಯೋಗನೀತಿಗಳು ಪಾಶ್ಚಾತ್ಯ ಮಾದರಿಯಲ್ಲಿಯೇ ರೂಪಿತವಾದುವುಗಳು. ಇಂಥ ವ್ಯವಸ್ಥೆ ಬುಡಕಟ್ಟೊಂದರ ಸಾಂಸ್ಕೃತಿಕ ಪುನಶ್ಚೇತನಕ್ಕೆ ಅನುಕೂಲವಾಗಿದೆಯೇ? ನಮ್ಮ ಒಟ್ಟು ವ್ಯವಸ್ಥೆಯೇ ಪಶ್ಚಿಮಮುಖಿಯಾಗಿರುವಲ್ಲಿ ಬುಡಕಟ್ಟೊಂದನ್ನು ಅದರದೇ ಆದ ಅನನ್ಯತೆಯಲ್ಲಿ ಉಳಿಸುವ ಪ್ರಯತ್ನ ಅರ್ಥಪೂರ್ಣವಾದೀತೆ? ಇದು ವ್ಯವಸ್ಥೆಯ ಸಾಂಪ್ರದಾಯಿಕ ಪರಿಸರಕ್ಕೆ ಅವರನ್ನು ಜೋಡಿಸಿಬಿಟ್ಟಂತೆಯೇ ಆಗುತ್ತದೆ. ಈ ಮಾತನ್ನು ಇನ್ನೊಂದು ನೆಲೆಯಲ್ಲಿಯೂ ವಿಸ್ತರಿಸಬಹುದು. ಬುಡಕಟ್ಟಿನ ಪಾರಂಪರಿಕ ಕಲಾವಿದನೊಬ್ಬನಿಗೆ ಅಥವಾ ಅವನ ಜ್ಞಾನಶಕ್ತಿಗೆ ಇಂದಿನ ಉದ್ಯೋಗ ನೀತಿ ಎಷ್ಟರ ಮಟ್ಟಿಗೆ ಆಶಾದಾಯಕವಾಗಿದೆ? ಯಾಕೆಂದರೆ ಎಲ್ಲವನ್ನು ಅಕ್ಷರ ಆಳುತ್ತಿರುವ ಈ ಹೊತ್ತಿನಲ್ಲಿ ಅವನಲ್ಲಿರುವ ದೇಶಿಯ ಜ್ಞಾನ ಅಥವಾ ಕಲೆ ಅವನ ಹಸಿವು ಮತ್ತು ನಿರೀಕ್ಷೆಯನ್ನು ಹಿಂಗಿಸಲು ಸಮರ್ಥವಾಗಿದೆಯೇ? ಇಲ್ಲಿನ ವೈರುಧ್ಯ ಎಂದರೆ ಬುಡಕಟ್ಟೊಂದರ ಸಾಂಸ್ಕೃತಿಕ ವೈಶಿಷ್ಟ್ಯವನ್ನು ಉಳಿಸುವ ಪ್ರಯತ್ನಗಳು ಅವನನ್ನು ಆರ್ಥಿಕ ಚೈತನ್ಯದಿಂದ ವಂಚಿಸುತ್ತವೆ. ಅವರನ್ನು ಮುಖ್ಯವಾಹಿನಿಗೆ ಸೇರಿಸುವ, ಆರ್ಥಿಕ ಚೈತನ್ಯ ನೀಡುವ ಪ್ರಯತ್ನ, ಅವರ ಸಾಂಸ್ಕೃತಿಕ ವಿಶಿಷ್ಟತೆಯನ್ನು ನಾಶಮಾಡುತ್ತವೆ. ಇಂತಹ ವೈರುಧ್ಯದಲ್ಲಿ ಬುಡಕಟ್ಟುಗಳು ಇಂದು ಬದುಕುತ್ತಿವೆ.

ಇರುಳಿಗರನ್ನು ಮತ್ತು ಹಕ್ಕಿಪಿಕ್ಕಿ ಸಮುದಾಯಗಳನ್ನು ಹೆಚ್ಚೆಚ್ಚು ನಾಗರೀಕರನ್ನಾಗಿ ಮಾಡುವ ಸರ್ಕಾರ ಅದೇ ಹೊತ್ತಿಗೆ ಅವರ ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಪ್ರವೃತ್ತಿಯ ದ್ವಂದ್ವ, ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯದ ಸಂಘರ್ಷವನ್ನು ಚೆನ್ನಾಗಿ

ಸಂಕೇತಿಸುತ್ತದೆ. ಅಭಿವೃದ್ಧಿಯ ಈ ಉತ್ಸಾಹ ಮತ್ತು ಕಾಳಜಿಯ ಒಳಸತ್ಯವನ್ನು ನಾವು ಗ್ರಹಿಸಬೇಕಾಗಿದೆ. ಕಾಡಿನ ನೆಲೆ ತಪ್ಪಿಸಿ ಅಭಿವೃದ್ಧಿ ಯೋಜನೆಯ ಆಕರ್ಷಕ ಆಮಿಷವನ್ನು ಒಡ್ಡಿದ್ದು ಇರುಳಿಗ ಮತ್ತು ಹಕ್ಕಿಪಿಕ್ಕಿ ಅಥವಾ ಅಂತಹ ಬುಡಕಟ್ಟುಗಳ ಅಭಿವೃದ್ಧಿಗಾಗಿ ಅಲ್ಲ. ಕಾಡಿನ ಸಂಪತ್ತು ಹಾಗೂ ಸಂಪನ್ಮೂಲಗಳನ್ನು ವಿದೇಶಿ ಬಹುರಾಷ್ಟ್ರೀಯ ಕಂಪನಿಗಳಿಗೆ ಹಾಗೂ ದೇಶಿಯಾ ದೊರೆಗಳ "ಅಭಿವೃದ್ಧಿ"ಗೆ ಕೈಗಾ, ಕೊಜೆಂಟ್ರಿಕ್ಸ್‌ಗಳಂತಹ ಅಭಿವೃದ್ಧಿ ಯೋಜನೆಗಳನ್ನು ಈ ನೆಲೆಯಿಂದ ಕಂಡುಕೊಳ್ಳಬೇಕಾಗಿದೆ. ಆಗ ನಮ್ಮ ಬುಡಕಟ್ಟು ಅಭಿವೃದ್ಧಿ ಯೋಜನೆಗಳ ಒಳದಾರಿಯನ್ನು ಅರ್ಥೈಸಿಕೊಳ್ಳುವುದು ಸಾಧ್ಯವಾಗುತ್ತದೆ.

ಇಡಿಯಾಗಿ ನಮ್ಮ ದೇಶವನ್ನು ಪಾಶ್ಚಿಮಾತ್ಯಕ್ಕೆ (ಪಶ್ಚಿಮಕ್ಕೆ) ಒತ್ತೆಯಿಟ್ಟಿರುವ ಈ ಸಂದರ್ಭದಲ್ಲಿ ನಮ್ಮ ಜೀವನ ವಿಧಾನ, ನೀತಿಗಳು ಪಶ್ಚಿಮದಲ್ಲಿ ಅಚ್ಚುಗೊಳ್ಳುತ್ತವೆ. ಇದು ಬುಡಕಟ್ಟೊಂದಕ್ಕೆ ತನ್ನ ಅಗತ್ಯವನ್ನು ಕಂಡುಕೊಳ್ಳುವ ಮತ್ತು ಅನುಭೋಗಿಸುವ ಸಾಮಾನ್ಯ ಆಯ್ಕೆಯ ಹಕ್ಕನ್ನು ನೀಡಲಾಗಿಲ್ಲ.

ಸಾಮಾಜಿಕ ಅಧ್ಯಯನಗಳು ಇಂದು ಬೃಹತ್ ಸವಾಲುಗಳನ್ನು ಎದುರಿಸುತ್ತಿವೆ. ಒಂದೆಡೆ ಸಂಪನ್ಮೂಲಗಳ ಕೊರತೆ, ಮತ್ತೊಂದೆಡೆ ತಾರತಮ್ಯದ ಧೋರಣೆ. ಇಂತಹ ಪರಿಸ್ಥಿತಿಯಲ್ಲಿ ನಾವು ಮಾಡಬೇಕಾಗಿದ್ದು ಏನು? ಈಗ ಹೊಂದಾಣಿಕೆಯಲ್ಲ ನಮಗಿರುವ ಆಯ್ಕೆ. ನಾವೀಗ ಹೋರಾಟವನ್ನು ಮಾಡಬೇಕಿದೆ. ಹೋರಾಟ ಯಾವುದಕ್ಕಾಗಿ? ಸಾಮಾಜಿಕ ಅಧ್ಯಯನಗಳಿಗೆ, ಶಿಕ್ಷಣ ವ್ಯವಸ್ಥೆಯ ಒಳಗೆ ಮತ್ತು ಹೊರಗೆ ಅದಕ್ಕೆ ಅರ್ಹ ಮತ್ತು ಅಗ್ರಸ್ಥಾನ ದೊರಕಿಸಲು ಮತ್ತು ದೇಶದ ಅಭಿವೃದ್ಧಿಗಾಗಿ ಯೋಜನೆಗಳನ್ನು, ನೀತಿಗಳನ್ನು ರೂಪಿಸುವಾಗ ಮಾನವ ಸಮಾಜವನ್ನು ಅಧ್ಯಯನ ವಿಷಯವಾಗಿ ಹೊಂದಿರುವ ಎಲ್ಲಾ ಶಾಸ್ತ್ರಗಳಿಗೆ ಪ್ರಾತಿನಿಧ್ಯತೆ ನೀಡಬೇಕೆಂಬ ಕೂಗು ಆಗಬೇಕಾಗಿದೆ. ಸಾಮಾಜಿಕ ಅಧ್ಯಯನಗಳಿಗಾಗಿ ಬೆಂಬಲ ದೊರೆಯಲೇಬೇಕೆಂಬ ಒತ್ತಾಯವನ್ನು ತರುವುದಷ್ಟೇ ಸಾಲದು, ನಮಗೆ ಬೆಂಬಲ ಸಿಗುವ ದಾರಿಗಳನ್ನೂ ನಾವು ಹುಡುಕಬೇಕು. ಏಕಮುಖ ದೃಷ್ಟಿಕೋನದಿಂದ ಅಭಿವೃದ್ಧಿ ಸಾಧ್ಯವಿಲ್ಲ. ವಿಷಯಗಳನ್ನು ಅಂತರ್‌ಶಾಸ್ತ್ರೀಯ ಹಾಗೂ ಬಹುಮುಖ ದೃಷ್ಟಿಕೋನದಿಂದ ಅರ್ಥ ಮಾಡಿಕೊಳ್ಳುವುದು ಅನಿವಾರ್ಯ ಎಂಬುದನ್ನು ನಾವು ತೋರಿಸಬೇಕು.

ಈಗಾಗಲೇ ಈ ಚಿಂತನೆ ಸಾಕಷ್ಟು ನಡೆದಿದ್ದು, ಇದಕ್ಕೆ ಒಂದು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಮಾನ್ಯತೆಯೂ ದೊರೆತಿದೆ. ಸಮಾಜ ಅಧ್ಯಯನದ ಅನಿವಾರ್ಯತೆಯನ್ನು ಸ್ಥಾಪಿಸುವುದು ನಮ್ಮ ಜವಾಬ್ದಾರಿ. ಅಂತಹ ಸಾಮರ್ಥ್ಯಗಳನ್ನು ನಾವು ಬೆಳೆಸಿಕೊಳ್ಳಬೇಕು. ಪ್ರಶ್ನೆಯನ್ನು ಕೇಳುವ ಎದೆಗಾರಿಕೆ, ಕಂಡದ್ದನ್ನು ಕಂಡ ಹಾಗೆ ಹೇಳುವ ಧೈರ್ಯ ಮತ್ತು ಸಾಮಾಜಿಕ ಕಳಕಳಿ ಈ ಗುಣಗಳು ಸಾಮಾಜಿಕ ಅಧ್ಯಯನಗಳಲ್ಲಿ ಮೂಡಿ ಬರಬೇಕಾಗಿದೆ. ವ್ಯವಸ್ಥೆಯನ್ನು ಮೆಚ್ಚಿಸುವುದಕ್ಕಿಂತ, ವ್ಯವಸ್ಥೆಯ ಗುಣಮಟ್ಟವನ್ನು ಹೆಚ್ಚಿಸುವುದರತ್ತ ನಮ್ಮ ಗಮನ ಹರಿಯಬೇಕು. ಹಾಗೆಯೇ ವಿಮರ್ಶೆಗೆ, ನಮ್ಮ ಸಂಶೋಧನೆಯನ್ನು ತೆರೆದಿರಿಸಿಕೊಳ್ಳಬೇಕಾಗಿದೆ. ಯಾವುದೋ ಒಂದು ವಿಷಯವನ್ನು ಕುರಿತು ೩-೪ ವರ್ಷಗಳ ಕಾಲ ಸಂಶೋಧನೆಯನ್ನು ಕೈಗೊಂಡ ಮಾತ್ರಕ್ಕೆ ನಾವು ಪರಿಣಿತರಾಗುವುದಿಲ್ಲ. ಇತ್ತೀಚೆಗಂತೂ ಅಂಗ ಪರಿಣಿತರು, ಬಡತನ

ಪರಿಣಿತರು, ಪರಿಸರದ ಪರಿಣಿತರು ಮುಂತಾದ ಹಣೆಪಟ್ಟಿಗಳನ್ನು ಕಟ್ಟಿ ಕೊಂಡಿದ್ದಾರೆ. ಸಾವಿರಾರು ರೂಪಾಯಿಗಳನ್ನು ಸಲಹಾ ಶುಲ್ಕವಾಗಿ ಈ ಹುದ್ದೆಗಳಿಗೆ ನಿಗದಿಪಡಿಸಿ, ಸಂಶೋಧಕರಲ್ಲಿಯೇ 'ಪ್ರತಿಷ್ಠಿತ ವರ್ಗ'ವೊಂದರ ಸೃಷ್ಟಿಗೆ ಪ್ರಾಯೋಜಿತ ಸಂಶೋಧನೆಗಳು ಕಾರಣವಾಗಿವೆ. ಸಂಶೋಧನೆ ಇಂದು ಒಂದು ವೃತ್ತಿಯಾಗಿ ಮಾರ್ಪಾಟಾಗಿ ಪ್ರವೃತ್ತಿಗಳು ಕಡಿಮೆಯಾಗುತ್ತಿವೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ನಿಬಂಧದಲ್ಲಿ ಇರುಳಿಗರ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಾಮಾಜಿಕ ಬದಲಾವಣೆಗಳ ವಿವರಣಾತ್ಮಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಹಿನ್ನೆಲೆಯಾಗಿ ಬುಡಕಟ್ಟುಗಳ ಸ್ವರೂಪ, ಬುಡಕಟ್ಟುಗಳ ಅಧ್ಯಯನ ಕ್ರಮ, ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಬುಡಕಟ್ಟುಗಳ ಬಗ್ಗೆ ನಡೆದಿರುವ ಕೆಲಸ ಇವುಗಳ ಬಗ್ಗೆ ಸ್ಥೂಲವಾದ ವಿವರಣೆಯನ್ನು ಕೊಡಲಾಗಿದೆ. ಕನ್ನಡದಲ್ಲಿ ಈ ಸಂಬಂಧವಾದ ಬರಹಗಳು ಹೆಚ್ಚಾಗಿಲ್ಲದಿರುವುದರಿಂದ ಈ ವಿಷಯಗಳ ಬಗ್ಗೆ ಕೊಟ್ಟಿರುವ ವಿವರಗಳು ನಿಷ್ಪ್ರಯೋಜಕವಾಗಲಾರವು ಎಂದು ಭಾವಿಸಿದ್ದೇನೆ. ಈ ವಿವರಗಳು ಪ್ರಸ್ತುತ ನಿಬಂಧಕ್ಕೆ ಅಗತ್ಯವಾದ ತಾತ್ವಿಕ ಹಿನ್ನೆಲೆಯನ್ನು ರೂಪಿಸುತ್ತವೆ ಎಂದು ಹೇಳಬಹುದು.

ಎರಡನೆಯ ಅಧ್ಯಾಯ ಇರುಳಿಗರ ಮತ್ತು ಹಕ್ಕಿಪಿಕ್ಕಿಗಳ ಸಮಾಜ ಮತ್ತು ಸಂಸ್ಕೃತಿಯ ಒಂದು ಪಕ್ಷಿನೋಟವಾಗಿದೆ. ಈ ಎರಡು ಅಧ್ಯಾಯಗಳನ್ನು ಈ ನಿಬಂಧದ ವಿವರಣಾತ್ಮಕ ಭಾಗವಾಗಿದೆ. ಯಾವುದೇ ಒಂದು ಬುಡಕಟ್ಟಿನ ಸಾಮಾಜಿಕ ಬದಲಾವಣೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಬುಡಕಟ್ಟಿನ ಪುರಾಣಗಳ ಮತ್ತು ಐತಿಹ್ಯಗಳ ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಯಾವುದೇ ಬುಡಕಟ್ಟು ಸಮುದಾಯಗಳ ಸಂಶೋಧನೆಯಲ್ಲಿ ಎರಡು ಕ್ರಮಗಳನ್ನು ಅನುಸರಿಸಬಹುದು.

೧. ಆಳವಾದ ಅಧ್ಯಯನ. ೨. ವಿಸ್ತಾರವಾದ ಅಧ್ಯಯನ

ಮೊದಲನೆಯ ಬಗೆಯ ಅಧ್ಯಯನ ಬುಡಕಟ್ಟು ಜನ ಕಡಿಮೆ ಸಂಖ್ಯೆಯಲ್ಲಿದ್ದಾಗ ಸಾಧ್ಯವಾಗುತ್ತದೆ. ಆದರೆ ಬುಡಕಟ್ಟಿನ ಜನ ಸಂಖ್ಯೆ ಹೆಚ್ಚಾಗಿದ್ದಾಗ ಸಾಮಾನ್ಯವಾಗಿ ವಿಸ್ತಾರವಾದ ಅಧ್ಯಯನ ಕ್ರಮವನ್ನೇ ಅನುಸರಿಸಬೇಕಾಗುವುದು ಅನಿವಾರ್ಯವಾಗುತ್ತದೆ.

ಇರುಳಿಗರು ಹಾಗೂ ಹಕ್ಕಿಪಿಕ್ಕಿ ಸಮುದಾಯವು ಚಲನಶೀಲವಾಗಿದ್ದು ಅಧ್ಯಯನಕ್ಕೆ ವಿಪುಲ ಅವಕಾಶವನ್ನು ಹೊಂದಿವೆ. ಒಂದು ಸಮುದಾಯದ ವೃತ್ತಿ, ಆಚಾರ-ವಿಚಾರಗಳು ಮತ್ತು ಸಾಮಾಜಿಕ ವಿದ್ಯಮಾನಗಳು ಆ ಸಮುದಾಯದ ಜನಪದ ಸಾಹಿತ್ಯ ಮುಂತಾದವುಗಳಲ್ಲಿ ಭಾಷೆ ಬಳಕೆಯಾಗುವ ರೀತಿಯನ್ನು ತಿಳಿಯಲು ನೆರವಾಗುತ್ತದೆ. ಭಾಷಾಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರ ಕಕ್ಷೆಯಲ್ಲಿ ಅಂತರ್‌ಶಾಸ್ತ್ರೀಯ ಅಧ್ಯಯನಕ್ಕೆ

ಒಳಗಾಗಿ ಬಹುಮುಖಿ ಆಯಾಮವನ್ನು ಪಡೆದುಕೊಳ್ಳಬೇಕಾಗುತ್ತದೆ. ಆಗ ಮಾತ್ರ ಸಮಗ್ರ ಅಧ್ಯಯನ ಪ್ರಾಪ್ತಿಯಾಗುತ್ತದೆ.

ಇರುಳಿಗರು ಹಾಗೂ ಹಕ್ಕಿಪಿಕ್ಕಿ ಸಮುದಾಯವನ್ನು ಕುರಿತು ಸಮಾಜಶಾಸ್ತ್ರ, ಸಾಮಾಜಿಕ ವಿಜ್ಞಾನ ಹಾಗೂ ಮಾನವಶಾಸ್ತ್ರಗಳ ತತ್ವಗಳ ಹಿನ್ನೆಲೆಯಲ್ಲಿ ಬಹುಮಟ್ಟಿಗೆ ಪೂರ್ಣ ಪ್ರಮಾಣದ ಕೃತಿ ರಚನೆಯು ಈವರೆಗೂ ನಡೆದಿಲ್ಲ. ಈ ಸಮುದಾಯವನ್ನು ಕೇಂದ್ರವಾಗಿಟ್ಟುಕೊಂಡು ನಡೆದ ಈ ಅಧ್ಯಯನ ಮೊದಲನೆಯ ಪ್ರಯತ್ನವಾಗಿದೆ.

ಈ ಬುಡಕಟ್ಟು ಸಮುದಾಯಗಳ ಬಗ್ಗೆ ಹಲವಾರು ಬಿಡಿಲೇಖನಗಳು ಪ್ರಕಟವಾಗಿದ್ದು, ಅಧ್ಯಯನದ ದೃಷ್ಟಿಯಿಂದ ಅತ್ಯಂತ ಉಪಯುಕ್ತವಾಗಿದೆ. ಆದರೆ ಗುಡ್ಡಗಾಡುಗಳಲ್ಲಿ ವಾಸಿಸುವ ಇರುಳಿಗರು ಹಾಗೂ ಅಲೆಮಾರಿಗಳಾಗಿದ್ದ ಹಕ್ಕಿಪಿಕ್ಕಿಗಳ ಬಗ್ಗೆ ಮಾಹಿತಿ, ಅವರ ಜೀವನಕ್ರಮದ ಬಗ್ಗೆಯಾದರೂ, ಅವರ ಅಭಿವೃದ್ಧಿಯಲ್ಲಿ ಸರಕಾರ ಒದಗಿಸುವ ಮತ್ತು ಇಂಥ ಸರ್ಕಾರಿ ಕಲ್ಯಾಣ ಕಾರ್ಯಕ್ರಮಗಳು ಕಾರ್ಯಗತವಾಗಿದ್ದುದರ ಬಗ್ಗೆ ಮಾಹಿತಿ ಸ್ವಲ್ಪ ಅಥವಾ ಇಲ್ಲವೇ ಇಲ್ಲ ಎನ್ನಬಹುದು. ಈ ದಿಶೆಯಲ್ಲಿ ಸಂಶೋಧನೆಯ ಅವಶ್ಯಕತೆ ಮಾನವ ವೈಜ್ಞಾನಿಕ ದೃಷ್ಟಿಯಿಂದ ಮುಖ್ಯ ಅಂಶವಾಗಿದೆ.

ಮಾನವ ಸಮಾಜವನ್ನು ಗಮನಿಸಿದಾಗ ಅನೇಕ ರೀತಿಯ ವೈವಿಧ್ಯತೆಗಳು ಗೋಚರವಾಗುತ್ತದೆ. ಒಂದು ಕಡೆ ನಾಗರೀಕತೆಯಲ್ಲಿ ಉತ್ಕೃಷ್ಟ ಮಟ್ಟವನ್ನು ತಲುಪಿದ ಜನ ಸಮುದಾಯ, ಮತ್ತೊಂದೆಡೆ ಕಾಡು ಮೇಡುಗಳಲ್ಲಿ, ಗಿರಿಕಂದರಗಳಲ್ಲಿ, ವಾಸಿಸುವ ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ. ಭಾರತವು ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ಅನೇಕ ಬುಡಕಟ್ಟು ಸಮುದಾಯಗಳನ್ನು ತನ್ನ ಒಡಲಿನಲ್ಲಿ ಇಟ್ಟಿಕೊಂಡಿದೆ. ಬುಡಕಟ್ಟು ಸಮುದಾಯಗಳ ಅಧ್ಯಯನ ಇಂದು ಕ್ರಮಬದ್ಧ ಹಾಗೂ ಮಂದಗತಿಯ ಬೆಳವಣಿಗೆಯಲ್ಲಿ ಸಾಗುತ್ತಿದೆ. ಭಾರತೀಯ ಸಮಾಜವನ್ನು ಅರ್ಥಮಾಡಿಕೊಳ್ಳಬೇಕಾದರೆ ಬುಡಕಟ್ಟು ಸಮುದಾಯಗಳ ಅಧ್ಯಯನದ ಅತ್ಯವಶ್ಯಕತೆ ಇದೆ.

ಪರಿಶಿಷ್ಟ ಪಂಗಡವೆಂದು ಕರೆಯಿಸಿಕೊಳ್ಳುವ ಈ ಬುಡಕಟ್ಟು ಸಮುದಾಯಗಳು ಭಾರತದಾದ್ಯಂತ ಹರಡಿಕೊಂಡಿವೆ. ಈ ಸಮುದಾಯಗಳು ಅನಾದಿಕಾಲದಿಂದಲೂ ಸಾಮಾಜಿಕವಾಗಿ ಅಸಮಾನತೆ, ಆರ್ಥಿಕ ಶೋಷಣೆ, ಶೈಕ್ಷಣಿಕವಾಗಿ ಹಿಂದುಳಿದಿದ್ದು ಹಲವಾರು ರೀತಿಯ ಶೋಷಣೆಗೆ ಗುರಿಯಾಗಿವೆ. ಭಾರತದಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರುವ ಉದ್ದೇಶದಿಂದ ಸಂವಿಧಾನದ ಕಾಯ್ದೆಯಡಿಯಲ್ಲಿ ಮೀಸಲಾತಿ, ಕಾನೂನು ರಕ್ಷಣೆ, ಹಾಗೂ ಹಲವಾರು ರೀತಿಯ ಅಭಿವೃದ್ಧಿಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಾ ಬಂದಿವೆ. ಈ ಹಿನ್ನೆಲೆಯಲ್ಲಿ ಪರಿಶಿಷ್ಟ ಪಂಗಡದ ಜನರು ಬದಲಾಗುತ್ತಿರುವ ಸಾಮಾಜಿಕ. ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮಾಡುವಾಗ ಅವರ ಜೀವನಮಟ್ಟ, ಶೈಕ್ಷಣಿಕ ಸ್ಥಿತಿ. ರಾಜಕೀಯವಾಗಿ ಪಾಲ್ಗೊಳ್ಳುವಿಕೆ. ಆರ್ಥಿಕ ಮಟ್ಟ ಮುಂತಾದವುಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ. ಈ ನಿಟ್ಟಿನಲ್ಲಿ ಪರಿಶಿಷ್ಟ ಪಂಗಡಗಳ ಬದಲಾಗುತ್ತಿರುವ

ಸ್ಥಿತಿಗತಿಗಳನ್ನು ತಿಳಿಯಲು ಮೇಲಿನ ಅಂಶಗಳನ್ನು ದಾಖಲಿಸಿ ಸಮಾಜಶಾಸ್ತ್ರೀಯ ಅಧ್ಯಯನಕ್ಕೆ ಒಳಪಡಿಸಿ ಫಲಿತಾಂಶ ದಾಖಲಿಸಿ ಮಾಹಿತಿಯನ್ನು ವಿಶ್ಲೇಷಿಸುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗಿದೆ.

* ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಾಲ್ಕು ತಾಲ್ಲೂಕಿನ ಇರುಳಿಗ ಹಾಗೂ ಹಕ್ಕಿಪಿಕ್ಕಿ ಬುಡಕಟ್ಟುಗಳ ಜೀವನ ಕ್ರಮವನ್ನು ಆಯಾ ಪರಿಸರದ ಹಿನ್ನೆಲೆಯಲ್ಲಿ ವರ್ಣಿಸುವುದು.

* ಭಾರತ ಮತ್ತು ಕರ್ನಾಟಕ ಸರ್ಕಾರ ಅನೇಕ ಸಂವಿಧಾನಾತ್ಮಕ ಸೌಲಭ್ಯಗಳನ್ನು ಅವರಿಗೆ ಒದಗಿಸಿವೆ. ಅವು ಯಾವುವು? ಎಂಬುದರ ಬಗ್ಗೆ ವಿವರವಾಗಿ ಅಧ್ಯಯನ ಮಾಡುವುದು.

* ಸರ್ಕಾರ ಕೈಗೊಂಡ ಅನೇಕ ಕಲ್ಯಾಣ ಕಾರ್ಯಕ್ರಮಗಳು ಬುಡಕಟ್ಟು ಸಮುದಾಯದವರಿಗೆ ಎಷ್ಟರ ಮಟ್ಟಿಗೆ ತಲುಪಿದೆ ಎಂಬುದನ್ನು ಚರ್ಚಿಸುವುದು.

* ಈ ಕಲ್ಯಾಣ ಕಾರ್ಯಕ್ರಮಗಳನ್ನು ಯಾವ ರೀತಿಯಾಗಿ ಬುಡಕಟ್ಟು ಸಮುದಾಯದವರು ಉಪಯೋಗಿಸಿಕೊಂಡು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ಎಷ್ಟರ ಮಟ್ಟಿಗೆ ಸುಧಾರಿಸಿಕೊಳ್ಳಲು ಪ್ರಯತ್ನಿಸಿವೆ, ಎಂಬುದನ್ನು ಲಭ್ಯವಿರುವ ಮಾಹಿತಿಗಳೊಂದಿಗೆ ವಿಸ್ತೃತವಾಗಿ ವಿವರಿಸುವುದು.

* ಬುಡಕಟ್ಟು ಸಮುದಾಯಗಳಾದ ಇರುಳಿಗ ಮತ್ತು ಹಕ್ಕಿಪಿಕ್ಕಿಯ ಸಮುದಾಯದ ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ಅಧ್ಯಯನ ಮಾಡುವುದು.

* ಬುಡಕಟ್ಟುಗಳ ಸಾಮಾಜಿಕ ಅಂತಸ್ತಿನ ಸುಧಾರಣೆಯಲ್ಲಿ ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳ ಪಾತ್ರವನ್ನು ಅಭ್ಯಸಿಸುವುದು.

* ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಂಬಂಧಿಸಿದಂತೆ ಶಿಕ್ಷಣ, ನಗರೀಕರಣ, ಕೈಗಾರೀಕರಣ, ಆಧುನೀಕರಣ, ಪಾಶ್ಚಾತ್ಯೀಕರಣ, ಜಾಗತಿಕರಣ ಮುಂತಾದ ಸಾಮಾಜಿಕ ಪ್ರಕ್ರಿಯೆಗಳ ಪ್ರಭಾವವನ್ನು ತಿಳಿಯುವುದು.

* ಈ ಸಮುದಾಯಗಳ ಸಾಮಾಜಿಕ, ಆರ್ಥಿಕ, ಅಂತಸ್ತಿನಲ್ಲಿ ಸಾಮಾಜಿಕ ನ್ಯಾಯದ ಪಾತ್ರವನ್ನು ತಿಳಿಯುವುದು.

* ಬುಡಕಟ್ಟು ಸಮುದಾಯದ ಗತ ಇತಿಹಾಸವನ್ನು ಮೌಖಿಕ ಸಾಕ್ಷ್ಯಾಧಾರಗಳ ಮೂಲಕ ಮರು ರಚಿಸುವ ಮೂಲಕ ಜನರು ಕಳೆದುಕೊಂಡಿರುವ ಆತ್ಮವಿಶ್ವಾಸವನ್ನು ಗುರುತಿಸುವುದು.

* ಜಾನಪದ ಅಧ್ಯಯನಕಾರರ ಶೋಧನೆಗಳು ಅವರ ಸಾಂಸ್ಕೃತಿಕ ಬದುಕಿನ ಅವಮಾನಕ್ಕೆ ಕಾರಣವಾಗಬಾರದು. ಈ ಎಚ್ಚರವನ್ನು ಇಟ್ಟುಕೊಂಡೇ ಬುಡಕಟ್ಟು ಸಮುದಾಯದ ಜಾನಪದ ಸಂಗತಿಗಳನ್ನು ಅಧ್ಯಾಯನ ನಡೆಸುವುದು.

* ಗತಾನುಗತವಾಗಿ ಅವರ ಬದುಕಿನೊಂದಿಗೆ ಅಂಟಿಕೊಂಡು ಬಂದಿರುವ ಅವೈಚಾರಿಕ ನಂಬಿಕೆಗಳನ್ನು ಅವರಿಂದ ಕದಲಿಸಬೇಕು. ಜೊತೆಗೆ ಅವರ ಬದುಕಿನ ಅವಿಭಾಜ್ಯ

ಅಂಗವಾಗಿರುವ ಕರಕುಶಲ ಕೌಶಲ್ಯ, ಕುಣಿತ, ಸಂಗೀತಗಳನ್ನು ಪುನರ್ ನವೀಕರಿಸಿ ಅವುಗಳಿಗೆ ಗೌರವ ಬರುವಂತೆ ಮಾಡುವ ಬಗ್ಗೆ ಚಿಂತಿಸುವುದು.

ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಇವರು ನಂಬಿಕೊಂಡು ಬಂದಿರುವ ಆಚಾರ-ವಿಚಾರಗಳು, ಆಚರಣೆಗಳು, ನಂಬಿಕೆಗಳು, ಸಂಪ್ರದಾಯಗಳು ಮರೆಯಾಗುತ್ತಿವೆ. ಅವುಗಳಿಂದ ಯಾವ ಪ್ರಯೋಜನವು ಇಲ್ಲವೆಂಬ ನಿಲುವು ತಾಳಲಾಗಿದೆ. ಹಿಂದಿನ ವ್ಯವಸ್ಥೆಯನ್ನು ಅಲ್ಲಗಳೆದು ಇಂದಿನ ಯುವ ಶಕ್ತಿಗಳ ಆಲೋಚನೆ ಮಾಡುವ ಹಂತ ತಲುಪಿದ್ದಾರೆ. ಇಪ್ಪತ್ತು ವರ್ಷಗಳ ಹಿಂದಿನ ಸ್ಥಿತಿ ಈಗಿರುವ ಬುಡಕಟ್ಟುಗಳಲ್ಲಿ ಕಾಣುವುದಿಲ್ಲ ಸಂಪೂರ್ಣ ಅಲ್ಲದಿದ್ದರೂ ಬದಲಾಗುತ್ತಿರುವ ಹಂತದಲ್ಲಿದ್ದಾರೆಂದು ಹೇಳಬಹುದು.

ಸಮೂಹ ಸಂವಹನ ಮಾಧ್ಯಮಗಳನ್ನು ಬಳಕೆ ಮಾಡಿಕೊಳ್ಳುವುದರಿಂದ ಆಧುನೀಕತೆಯ ಗಾಳಿ ಈ ಜನರ ಮೇಲೂ ತೀವ್ರವಾದ ಪ್ರಭಾವ ಬೀರಿದೆ. ಇನ್ನುಳಿದ ಸಮಾಜದವರಂತೆ ಈ ಸಮಾಜವು ಪರಿವರ್ತನೆಗೊಳ್ಳುತ್ತಿವೆ. ಸಮಕಾಲೀನ ಸಮಾಜದ ಆಚಾರ-ವಿಚಾರ ಸಂಪ್ರದಾಯಗಳಿಂದ ಹಿಂದಿನ ಪರಂಪರೆ ಉಳಿಸಿಕೊಂಡು ಬರಬೇಕೆಂಬ ಆಸಕ್ತಿ ಖಂಡಿತವಾಗಿಯೂ ಉಳಿದಿಲ್ಲ.

ಒಟ್ಟು ಸಮಾಜದ ಸ್ಥಿತಿಗತಿಗಳ ದೃಷ್ಟಿಯಿಂದ ನೋಡಿದಾಗ ಬುಡಕಟ್ಟು ಸಮುದಾಯಗಳದ್ದು ಬಹಳ ಶೋಚನಿಯ ಸ್ಥಿತಿ ಎಂಬುದು ನಿಜ. ಜೀವನವೇ ಒಂದು ಪ್ರವಾಸವೆಂದು ತಿಳಿದು ಸದಾ ಕಾಲ ಅನ್ವೇಷಣೆಯಲ್ಲೇ ಇರಬೇಕಾದ ಸ್ಥಿತಿ ಇವರದು. ನೆಲೆ ನಿಂತವರಿಗೆ ಜೀವನದಲ್ಲಿ ಒಂದು ಯೋಚನೆ, ಒಂದು ಯೋಜನೆ ಇರಲು ಸಾಧ್ಯ, ಬದುಕೇ ಒಂದು ಪ್ರಶ್ನೆಯಾಗಿದ್ದರೆ ಪರಿಹಾರದ ಹುಡುಕಾಟಕ್ಕೆ ಶಕ್ತಿ ಯುಕ್ತಿಗಳು ಮೀಸಲಾಗಿಡಬೇಕಾದ ಪರಿಸ್ಥಿತಿ ಉಂಟಾಗುತ್ತದೆ. ಈ ನಿಟ್ಟಿನಿಂದ ಎಲ್ಲಾ ಜನ ಸಮುದಾಯಗಳಿಗಿಂತ ಒತ್ತಡದ ಮಡಿಲಲ್ಲೇ ಕಾಲ ಕಳೆಯ ಬೇಕಾದವರು ಬುಡಕಟ್ಟು ಸಮುದಾಯಗಳು.

ಸಮಕಾಲೀನ ಸಮಾಜ ಹತ್ತು ಹಲವು ಸಮಸ್ಯೆಗಳನ್ನು ಎದುರಿಸುತ್ತಿದೆ. ಯಾವುದೇ ಜನರ ಗುಂಪಿಗೆ ಅಥವಾ ಜೀವನದ ಸ್ತರಗಳಿಗೆ ಸಂಬಂಧಿಸಿದಂತೆ ಸಮಸ್ಯೆ ಇಲ್ಲದಿರುವ ಪರಿಸ್ಥಿತಿ ಇಲ್ಲ. ಒಂದೊಂದು ತರಹದ ಜನ ಸಮುದಾಯ ಒಂದೊಂದು ರೀತಿಯ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಗುಡ್ಡಗಾಡಿನ ಬುಡಕಟ್ಟುಗಳ ವಿಷಯದಲ್ಲಿ ನೈಸರ್ಗಿಕ ಸಮಸ್ಯೆಗಳ ಜೊತೆಗೆ ನಾಗರೀಕತೆಯ ಮತ್ತು ವ್ಯಾಪರೀಕರಣ ಫಲವಾಗಿ ಉಂಟಾಗಿರುವ ಪರಿಸರ ಮಾಲಿನ್ಯ, ಅರಣ್ಯನಾಶ, ಕಾಡುಗಳ್ಳರ ಹಾವಳಿ ಮುಂತಾದವು ಪ್ರಭಾವ ಬೀರುತ್ತದೆ.

ಸಮಕಾಲೀನ ಸಮಾಜ ಉಂಟು ಮಾಡಿರುವ ಹೊಸ ಸಮಸ್ಯೆಗಳ ನಡುವೆಯೂ ಅಲೆಮಾರಿಗಳು ತಮ್ಮ ಕಾಲ ಮೇಲೆ ತಾವೇ ನಿಂತು, ಕಲೆಗಳನ್ನು ಕಾಪಾಡುವ ಹೊಣೆಗಾರಿಕೆಯನ್ನು ಹೊತ್ತಿರುವುದು ಸೋಜಿಗದ ಸಂಗತಿ. ಕರಕುಶಲ ಕಲೆಗಳು,

ಹಾಡುಗಾರಿಕೆ, ಕಥನ ಕಲೆ, ಪ್ರದರ್ಶನ ಕಲೆಗಳು ಮುಂತಾದ ಕ್ಷೇತ್ರಗಳಲ್ಲಿ ಬುಡಕಟ್ಟುಗಳು ತಮ್ಮ ಅನುಭವವನ್ನು ತಲೆ ತಲೆಮಾರುಗಳ ಸಾಂಸ್ಕೃತಿಕ ಸಂಪತ್ತನ್ನು ಕಾಪಾಡಿಕೊಂಡು ಬರುತ್ತಿದ್ದಾರೆ. ಇದನ್ನು ಮುಂದುವರಿಸುವ ಜವಾಬ್ದಾರಿ ಸಮಾಜದ್ದು ಮತ್ತು ಸರ್ಕಾರದ್ದು, ಇದರ ಜೊತೆಗೆ ಬುಡಕಟ್ಟುಗಳ ಜೀವನಮಟ್ಟವನ್ನು ಹೆಚ್ಚಿಸುವ ಮತ್ತು ಭದ್ರತೆಯನ್ನು ಕಲ್ಪಿಸುವ ಹೊಣೆಗಾರಿಕೆಯನ್ನು ವಹಿಸಬೇಕಾಗಿದೆ.

ಬುಡಕಟ್ಟು ಸಮಾಜದಲ್ಲಿ ಬದಲಾದ ರಾಜಕೀಯ, ಆರ್ಥಿಕ ಕಾರಣಗಳು ಹಾಗೂ ವಿಜ್ಞಾನ-ತಂತ್ರಜ್ಞಾನಗಳ ಬೆಳವಣಿಗೆಗಳಿಂದ ಪರಿಸರದ ಮೇಲೆ ಪ್ರಭಾವ ಉಂಟುಮಾಡಿರುವಂತೆ ಸಮಾಜದ ಮೇಲು ಅಗಾದ ಪರಿಣಾಮಗಳು ಉಂಟಾಗಿವೆ. ಆದುದರಿಂದ ನೈಸರ್ಗಿಕ ಮೂಲಗಳಿಂದ ಈ ಬುಡಕಟ್ಟು ಸಮುದಾಯಗಳು ತಯಾರಿಸುತ್ತಿದ್ದ ಅವರ ಕಲಾ ನೈಪುಣ್ಯ ಮಾಯವಾಗುತ್ತಿವೆ. ಆದರೆ ಬುಡಕಟ್ಟು ಸಮುದಾಯಗಳ ಕರಕೌಶಲ್ಯ ಸಾಮಗ್ರಿಗಳು, ಮಾದರಿಗಳು ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಲಾಭಕೋರರಿಗೆ ಹಣ ಗಳಿಸಿಕೊಡುತ್ತವೆ.

ಎಲ್ಲಾ ಸಮುದಾಯಗಳು ಇಂದು ನೆಲೆಕಳೆದುಕೊಳ್ಳುತ್ತಿವೆ. ಊರುಗಳಲ್ಲಿ ಅವರು ಒಂದಾಗಿದ್ದಾರೆ. ತಮ್ಮ ಜ್ಞಾನ ಪರಂಪರೆಯ ಮೇಲೆ ಒಂದು ಬಹಳ ದೊಡ್ಡದಾಗಿರುವಂತಹ ಪರದೆಯನ್ನು ಎಳೆದುಕೊಂಡು ಬಿಟ್ಟಿದ್ದಾರೆ. ಇವತ್ತು ಆಧುನೀಕತೆಗೆ ನಮ್ಮ ಜನ ಆಕರ್ಷಿತರಾಗುತ್ತಿದ್ದಾರೆ, ದಿನೇ ದಿನೇ ನಮ್ಮ ಜ್ಞಾನ ಪರಂಪರೆ ಒಂದೊಂದಾಗಿ ಕೊಂಡಿ ಕಳಚಿಕೊಳ್ಳುತ್ತಾ ಇವೆ, ಎಂಬ ಆತಂಕ ನಮ್ಮೆಲರಲ್ಲಿ ಕೂಡ ಇವತ್ತಿದೆ. ಸ್ವತಂತ್ರ ಭಾರತದ ಸಾರ್ವಜನಿಕ ವಲಯಗಳು ಭರದಿಂದ ಖಾಸಗೀಕರಣ ಯಾಂತ್ರೀಕರಣಕ್ಕೆ ಬಲಿಯಾಗುತ್ತಿರುವುದರಿಂದ ಕೆಲಸದ ಅವಕಾಶಗಳಂತೂ ಕಡಿಮೆಯಾಗುತ್ತಿರುವುದು ಸರಿಯೇ ಮುಕ್ತ ಮಾರುಕಟ್ಟೆಯ ಅಂತರಾಷ್ಟ್ರೀಯ ಮಟ್ಟದ ಸ್ಪರ್ಧೆಯಲ್ಲಿ ನಿರ್ದಿಷ್ಟ ರೂಪದ ಚಾಕಚಕ್ಯತೆಗಳು ಮಾತ್ರ ವ್ಯಾಪಾರಿ ಮೌಲ್ಯಗಳಿಸುತ್ತಿವೆ.

ಹೀಗಾಗಿ ಗಣಕಯಂತ್ರ ಅಭಿಯಂತರು, ಮಾಹಿತಿ ತಂತ್ರಜ್ಞಾನಿಗಳು, ವೈದ್ಯರು, ನಿರ್ವಹಣಾ ಪರಿಣಿತರು, ಜಾಹಿರಾತುದಾರರು, ಸೌಂದರ್ಯವರ್ಧಕ ಗಿರಾಕಿಗಳು ಮುಂತಾದವರು ಹೆಚ್ಚಿನ ಲಾಭ ಮತ್ತು ಪ್ರಸಿದ್ಧಿಯ ಹಸ್ತಾಂತರದಿಂದಾಗಿ ಮುಂದುವರಿದ ರಾಷ್ಟ್ರಗಳತ್ತ ಹರಿದು ಹೋಗುತ್ತಿದ್ದಾರೆ. ಅಲ್ಲಿಯೂ ಖಾಯಂ ಸೂರು ಕೆಲಸದ ರಕ್ಷಣೆಯ ಭರವಸೆ ಇಲ್ಲದೆ ಕಂಪನಿಗಳಿಂದ ಕಂಪನಿಗಳಿಗೆ, ಗುಡ್ಡಗಾಡು ಮತ್ತು ಗ್ರಾಮಾಂತರ ಪ್ರದೇಶಗಳಿಂದ ಹೈಟೆಕ್ ಸಿಟಿಗಳತ್ತ ಗುಳೆ ಹೊರಡುತ್ತಿದ್ದಾರೆ. ಹೀಗೆ ಜೀವನೋಪಾಯಕ್ಕಾಗಿ ಐಷರಾಮಿ ಬದುಕಿಗಾಗಿ ಬಡಿದಾಡುವ ಬುಡಕಟ್ಟು ಸಮುದಾಯಗಳು ಕೂಡ ಗಂಭೀರ ಪ್ರಮಾಣದ ಮಾನಸಿಕ ಕ್ಷೋಭೆ, ಸಿನಿಕಥನ, ಆಕ್ರಮಣ ಶೀಲ ಪ್ರವೃತ್ತಿಗಳಿಗೆ ಬಲಿಯಾಗುತ್ತಿದ್ದಾರೆ.

ಜಾಗತೀಕರಣದ ಪ್ರವಾಹದಲ್ಲಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಅನನ್ಯತೆ ಅಳಿಸಿ ಹೋಗಬಾರದು ಎಂಬುದು ಎಷ್ಟು ಮುಖ್ಯವೋ ಅವುಗಳು ರಾಷ್ಟ್ರ ಪ್ರಭುತ್ವವನ್ನು ಒಪ್ಪಿಕೊಂಡು ಜನ ತಾಂತ್ರಿಕ ಬಹುಸಂಸ್ಕೃತಿ ವ್ಯವಸ್ಥೆಯಲ್ಲಿ ಬದುಕನ್ನು

ರೂಪಿಸಿಕೊಳ್ಳಬೇಕಾದುದು ಅಷ್ಟೇ ಮುಖ್ಯವಾದುದ್ದಾಗಿದೆ. ಬುಡಕಟ್ಟುಗಳು ರಾಷ್ಟ್ರೀಯ ಪ್ರವಾಹದಲ್ಲಿ ಮುಳುಗಿ ಹೋಗಬೇಕು ಎಂಬುದೇ ಅಭಿವೃದ್ಧಿಯಲ್ಲ. ಅವುಗಳ ಅನನ್ಯತೆಯ ಒಡಲಲ್ಲೆ ಅವರ ಬದುಕು ಉತ್ತಮವಾಗುವಂತೆ ಮಾಡುವುದೇ ಅಭಿವೃದ್ಧಿ.೩

## ಇಲ್ಲಿಯವರೆಗೆ ನಡೆದ ಅಧ್ಯಯನ ಸಮೀಕ್ಷೆ

ಕರ್ನಾಟಕದಲ್ಲಿ ವಿಶೇಷವಾಗಿ ಬುಡಕಟ್ಟುಗಳು ಪಶ್ಚಿಮ ಸಹ್ಯಾದ್ರಿ ಆವೃತ್ತವಾದ ದಟ್ಟಕಾಡು ಮತ್ತು ಅರಣ್ಯಗಳಲ್ಲಿ ಕಂಡು ಬರುತ್ತಾರೆ. ಇಂತಹ ಪ್ರದೇಶಗಳು, ಉತ್ತರ ಕನ್ನಡ, ದಕ್ಷಿಣ ಕನ್ನಡ, ಕೊಡಗು, ಮೈಸೂರು, ಚಾಮರಾಜನಗರ, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳಲ್ಲಿಯೂ ಇವೆ.

ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳ ಬಗ್ಗೆ ಸಾಹಿತ್ಯ ಅಷ್ಟಾಗಿ ಇರಲಿಲ್ಲ. ಅದೂ ಅಲ್ಲದೆ ೧೯೫೬ರವರೆಗೆ ಅಂದರೆ ರಾಜ್ಯಗಳ ಪುನರ್ವಿಂಗಡಣೆಯಾಗುವ ತನಕ ಕರ್ನಾಟಕ ನಾಲ್ಕು ಭಾಗಗಳಲ್ಲಿ ಹರಡಿ ಹಂಚಿ ಹೋಗಿತ್ತು. ಆದರೆ ಜಾತಿ ಮತ್ತು ಬುಡಕಟ್ಟು ಸಮುದಾಯಗಳ ಬಗ್ಗೆ ವಿವಿಧ ಮಾಹಿತಿಗಳನ್ನು ನೀಡುವ ಅಧ್ಯಯನಗಳು ಪ್ರಕಟವಾಗಿದ್ದವು. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ಧಾರವಾಡ, ಬಿಜಾಪುರ, ಬೆಳಗಾವಿ ಮತ್ತು ಉತ್ತರ ಕನ್ನಡ ಇಲ್ಲಿರುವ ಸಮುದಾಯಗಳ ಬಗ್ಗೆ Enthoven (೧೯೮೯:೧೨) ರವರು ಬರೆದಿದ್ದಾರೆ. ಹೈದರಬಾದು ಕರ್ನಾಟಕದ ಮೂರು ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ಮತ್ತು ರಾಯಚೂರುಗಳಲ್ಲಿರುವವರ ಬಗ್ಗೆ Hassan ಎಂಬುವವರು ಬರೆದಿರುವರು. ಹಳೆ ಮೈಸೂರಿನ ೯ ಜಿಲ್ಲೆಗಳಲ್ಲಿರುವವರ ಬಗ್ಗೆ ಎಚ್.ವಿ.ನಂಜುಂಡಯ್ಯ ಮತ್ತು ಅನಂತ್‌ಕೃಷ್ಣಅಯ್ಯರ್ ಅವರು ಬಣ್ಣಿಸಿದ್ದಾರೆ. ದಕ್ಷಿಣ ಕನ್ನಡ ಮತ್ತು ಬಳ್ಳಾರಿಗಳು ಆಗ ಮದ್ರಾಸ್ ಪ್ರಾಂತ್ಯದಲ್ಲಿದ್ದ ಕಾರಣ ಅಲ್ಲಿರುವ ಬುಡಕಟ್ಟು ಸಮುದಾಯಗಳ ಸಮಗ್ರ ಚಿತ್ರಣವನ್ನು ಮುಖ್ಯವಾಗಿ Thurston ನ ಗ್ರಂಥದಲ್ಲಿ ಕಾಣಬಹುದು. ಹಳೆ ಮೈಸೂರಿನ ಪಶ್ಚಿಮ ಘಟ್ಟ ಪ್ರದೇಶದ ಅರಣ್ಯ ಪ್ರದೇಶಗಳಲ್ಲಿ ತೀರಾ ಹಿಂದುಳಿದ ಅತಿ ಕಡಿಮೆ ಜನ ಸಂಪರ್ಕವಿರುವ ಅರಣ್ಯದಿಂದಲೇ ಜೀವನ ನಿರ್ವಹಣೆ ಸಾಗಿಸುವ ಕೆಲವು ಬುಡಕಟ್ಟು ಸಮುದಾಯಗಳು ಇವೆ. ಲೂಯಿಜ್ (೧೯೬೩) ಅವರು ಹಿಂದಿನ ಮೈಸೂರು ಪ್ರಾಂತ್ಯದಲ್ಲಿರುವ ಅನೇಕ ಬುಡಕಟ್ಟುಗಳ ಬಗ್ಗೆ ಬರೆದಿರುವರು. ಆದರೆ ಇದರ ಅಧ್ಯಯನ ನಂಜುಂಡಯ್ಯ ಮತ್ತು ಅನಂತಕೃಷ್ಣಅಯ್ಯರ್ ಅಲ್ಲದೆ ಥರಸ್ಟನ್ ಅವರ ಪುಸ್ತಕದಲ್ಲಿರುವ ವಿವರಗಳ ಮೇಲೆಯೇ ಅವಲಂಬಿತವಾಗಿದೆ. ಕರ್ನಾಟಕದ ಬುಡಕಟ್ಟುಗಳ ಬಗ್ಗೆ ನಡೆದ ಕೆಲವು ಅಧ್ಯಯನಗಳ ಹೆಸರುಗಳನ್ನು ಇಲ್ಲಿ ಕೊಡಬಹುದು. ಹಕ್ಕಿಪಿಕ್ಕಿ (ಮೆನನ್) (೧೯೭೩) ಜೇನುಕುರುಬ, ಮಿಶ್ರ ಸೋಲಿಗರು, ಮೊರಬ್ (೧೯೭೭) ಇತ್ಯಾದಿಗಳು ಆಂಗ್ಲ ಭಾಷೆಯಲ್ಲಿದೆ. ಆದರೆ ಕನ್ನಡದಲ್ಲಿ ಅನೇಕ ಅಧ್ಯಯನಗಳಿವೆ ಗೊಂಡರು (ಷರೀಫ್) (೧೯೮೭), ಸೋಲಿಗರ (ನಾಗರಾಜ) (೧೯೮೫), ಕೊರಗರು (೧೯೮೨),೨೩. ಹರೀಶ್ (೧೯೮೮) ಬುಡಕಟ್ಟುಗಳ ಅಧ್ಯಯನ ನಡೆಸಿ ಉತ್ತಮ ಮಾಹಿತಿಯನ್ನು ನೀಡುವಲ್ಲಿ ಡಾ.ಹಿ.ಚಿ.ಬೋರಲಿಂಗಯ್ಯ, ಡಾ.ಮೈತ್ರಿ. ಡಾ.ಕೇಶವನ್‌ಪ್ರಸಾದ್. ಡಾ.ಗಂಗಾಧರ್‌ದೈವಜ್ಞ,

ಡಾ.ಚಲುವರಾಜ್, ಡಾ.ಪ್ರಭಾಕರ್‌ರವರು ನಡೆಸಿರುವ ಅಧ್ಯಯನಗಳು ಸೂಕ್ತ ಮಾಹಿತಿ ನೀಡುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪಿಹೆಚ್.ಡಿ ಪದವಿಗಾಗಿ ಕನ್ನಡ, ಜಾನಪದ, ಸಮಾಜಶಾಸ್ತ್ರ ಹಾಗೂ ಮಾನವಶಾಸ್ತ್ರ ವಿಭಾಗಗಳಲ್ಲಿ ಬುಡಕಟ್ಟುಗಳ ಬಗ್ಗೆ ಕೆಲವು ಅಧ್ಯಯನಗಳು ನಡೆಯುತ್ತಿವೆ. ಇವುಗಳಲ್ಲಿ ಪ್ರಬಂಧ ಮತ್ತು ಮಹಾಪ್ರಬಂಧಗಳಲ್ಲಿ ಪ್ರಕಟವಾಗಿದೆ.

ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳನ್ನು ಕುರಿತಂತೆ ಉಪಸಂಸ್ಕೃತಿ ಮಾಲೆಯಲ್ಲಿ ಸಿದ್ದಗಂಗಯ್ಯಕಂಬಾಳುರವರು ಇರುಳಿಗರ (ಉಪಸಂಸ್ಕೃತಿ ಮಾಲೆ,) ಹಕ್ಕಿಪಿಕ್ಕಿ ಸಮುದಾಯವನ್ನು ಕುರಿತಂತೆ ಡಾ. ಚೆಲುವರಾಜು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇರುಳಿಗರನ್ನು ಕುರಿತಂತೆ ಎಂ.ಭೈರೇಗೌಡ ಅಧ್ಯಯನ ಮಾಡಿರುತ್ತಾರೆ. ಆದರೆ ಪ್ರಸ್ತುತ ನನ್ನ ಮಹಾಪ್ರಬಂಧದ ಅಧ್ಯಯನವು ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯದ ಸಾಮಾಜಿಕ ಬದಲಾವಣೆಯನ್ನು ಕುರಿತಂತೆ ಆಗಿರುತ್ತದೆ.

ಭಾರತವು ವಿವಿಧ ಬುಡಕಟ್ಟು ಸಮುದಾಯಗಳಿಂದ ಕೂಡಿದ ರಾಷ್ಟ್ರವಾಗಿದೆ. ಅವುಗಳಲ್ಲಿ ವಿಭಿನ್ನರೂಪ, ದೈಹಿಕ ರಚನೆಯಿಂದೊಳಗೊಂಡಿದ್ದು ಅನೇಕ ಜೀವನ ಕ್ರಮಗಳುಳ್ಳ ಸಮುದಾಯಗಳ ಸಮ್ಮಿಳಿತವಾಗಿದೆ. ಪ್ರಾದೇಶಿಕತೆ, ಭಾಷೆ, ಜೀವನಕ್ರಮ ಮುಂತಾದ ವಿಷಯಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಐತಿಹಾಸಿಕ ಮತ್ತು ಪರಿಸರದ ಕಾರಣಗಳಿಂದ ಕೆಲವು ಸಮುದಾಯಗಳು ತೀರಾ ಹಿಂದುಳಿದಿವೆ. ಅರಣ್ಯ, ಗುಡ್ಡಗಾಡು ಪ್ರದೇಶಗಳಲ್ಲಿ ಅತಿ ಕೆಳಸ್ತರದ ಜೀವನವನ್ನು ನಡೆಸುತ್ತಲಿದ್ದಾರೆ. ಸ್ವಾತಂತ್ರ್ಯ ಪಡೆದ ನಂತರ ಭಾರತ ಸರ್ಕಾರವು ಇವರ ಅಭಿವೃದ್ಧಿಗಾಗಿ ಸತತವಾಗಿ ಶ್ರಮವಹಿಸುತ್ತಾ ಬಂದಿದೆ. ಮೊಟ್ಟ ಮೊದಲು ಅದು ತನ್ನ ರಾಜ್ಯಾಂಗದ ವ್ಯವಸ್ಥೆ ವಿಷಯದ ಬಗ್ಗೆ ಪ್ರಾಮುಖ್ಯತೆ ಕೊಡಲಾಯಿತು. ಅನೇಕ ಕಾರ್ಯಕ್ರಮಗಳನ್ನು ಇಂತಹ ಜನಸಮುದಾಯಗಳ ರಕ್ಷಣೆ–ಸುರಕ್ಷತೆಗಾಗಿ ಅಳವಡಿಸಲಾಯಿತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳನ್ನು ಪ್ರೇರೇಪಿಸಿ ಕಾರ್ಯ ಪ್ರವೃತರಾಗಲು ಅನುವು ಮಾಡಿಕೊಟ್ಟಿತು. ಇಂತಹ ಸಮುದಾಯಗಳಲ್ಲಿ ಇರುಳಿಗರು ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಾಮಾಜಿಕ ಬದಲಾವಣೆಯನ್ನು (ಬೆಂಗಳೂರು ಗ್ರಾಮಾಂತರ ಪರಿಸರವನ್ನು ಅನುಲಕ್ಷಿಸಿ) ಅಧ್ಯಯನ ಮಾಡುವುದು ಅವಶ್ಯಕವಾಗಿದೆ. ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿರುವ ಬುಡಕಟ್ಟು ಸಮುದಾಯಗಳ ಬಗ್ಗೆ ಸ್ಥೂಲ ಪರಿಚಯದೊಂದಿಗೆ ಈ ಸಂಶೋಧನೆಯ ರೂಪು–ರೇಷೆ, ಉದ್ದೇಶ ಇತ್ಯಾದಿಗಳ ಬಗ್ಗೆ ವಿವರಿಸುತ್ತಾ ಈ ಪ್ರಯತ್ನವನ್ನು ಮಾಡಲಾಗಿದೆ.

**ಅಧ್ಯಯನದ ವಿಧಾನಗಳು :**

ಬುಡಕಟ್ಟು ಸಮುದಾಯಗಳ ಅಭಿವೃದ್ಧಿ ಮತ್ತು ಬದಲಾವಣೆ ಆ ಸಮುದಾಯಗಳ ಸಾಮಾಜಿಕ–ಆರ್ಥಿಕ ಜೀವನವನ್ನು ಸುಧಾರಿಸುವಲ್ಲಿ ಕೈಗೊಂಡ ಕಲ್ಯಾಣ ಕಾರ್ಯಕ್ರಮಗಳನ್ನು ಅಧ್ಯಯನ ನಡೆಸಲು ಕೆಲವು ವಿಧಾನಗಳನ್ನು ಅನುಸರಿಸಲಾಗಿದೆ. ಇರುಳಿಗರು ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ಕರ್ನಾಟಕದ ಹಲವಾರು

ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಇವರ ವಾಸಪ್ರದೇಶದ ವ್ಯಾಪ್ತಿ ಹೆಚ್ಚಾಗಿವೆ. ಇವರ ಹಾಡಿಗಳು ಹೆಚ್ಚಾಗಿರುವುದರಿಂದ ಜನಸಂಖ್ಯೆಯೂ ಹೆಚ್ಚಾಗಿದೆ. ಈ ಕಾರಣದಿಂದ ಆಳವಾದ ಅಧ್ಯಯನಕ್ಕಿಂತ, ಈ ಬುಡಕಟ್ಟು ಸಮುದಾಯಗಳ ಅಧ್ಯಯನಕ್ಕೆ ವಿಸ್ತಾರವಾದ ಅಧ್ಯಯನ ಹೆಚ್ಚು ಅನುಕೂಲಕರವಾಗಿದೆ. ಬೆಂಗಳೂರು ಜಿಲ್ಲೆ ಮತ್ತು ರಾಮನಗರ ಜಿಲ್ಲೆಯಲ್ಲಿ ವಾಸವಾಗಿರುವ ಇರುಳಿಗ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಹಾಡಿಗಳನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಆಯ್ಕೆ ಮಾಡಿದ ಈ ಪ್ರದೇಶಗಳನ್ನು ಭೇಟಿಮಾಡಿ, ಇರುಳಿಗ ಮತ್ತು ಹಕ್ಕಿಪಿಕ್ಕಿಯವರೊಡನೆ ಹಲವಾರು ದಿನಗಳಲ್ಲಿ ಕಳೆದು ಅವರ ಜೀವವಾದ ಆತ್ಮೀಯವಾದ ಪರಿಚಯ ಮಾಡಿಕೊಂಡು, ಈ ನಿಬಂಧಕ್ಕೆ ಬೇಕಾದ ವಿಷಯಗಳನ್ನು ಕ್ಷೇತ್ರಕಾರ್ಯ ವಿಧಾನದಿಂದ (Field work Method) ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಬುಡಕಟ್ಟು ಸಮುದಾಯಗಳ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಿಷಯಗಳಲ್ಲಿ ಪರಿಣಿತಿ ಪಡೆದಿರುವವರೊಂದಿಗೆ ಸಂಭಾಷಣೆ ನಡೆಸಲಾಗಿದೆ.

ಈ ಸಂಭಾಷಣೆಗಳನ್ನು ಹಾಗೂ ವಿವಿಧ ಸಂಪ್ರದಾಯಗಳಿಗೆ ಸಂಬಂಧಿಸಿದ ಹಾಡುಗಳನ್ನು ಟೇಪ್‌ರೆಕಾರ್ಡರ್ ಮೂಲಕ ಸಂಗ್ರಹಿಸಲಾಗಿದೆ. ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯಗಳ ಸಾಮಾಜಿಕ ಬದಲಾವಣೆಯ ಅಧ್ಯಯನವನ್ನು ಸಂಭಾಷಣೆಯ ಮೂಲಕ ನಡೆಸಲಾಗಿದೆ. ಸರ್ಕಾರವು ಹಮ್ಮಿಕೊಂಡಿರುವ ಸರ್ಕಾರಿ ಯೋಜನೆಗಳು ಇವರನ್ನು ತಲುಪುತ್ತಿರುವುದನ್ನು, ಅಧ್ಯಯನದ ಮೂಲಕ ಸಂಗ್ರಹಿಸಲಾಗಿದೆ. ಇವುಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಗಳ ಪಾತ್ರ, ಸಮಾಜ ಸುಧಾರಕರು ಭಾಗವಹಿಸುವಿಕೆ ಮುಂತಾದವುಗಳನ್ನು ಅಧ್ಯಯನ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಮೊಟ್ಟ ಮೊದಲು ಬುಡಕಟ್ಟು ಸಮುದಾಯಗಳು ಮತ್ತು ಗಿರಿಜನ ವಾಸಿಸುವ ಪ್ರದೇಶಗಳ ಬಗ್ಗೆ ಪ್ರಕಟಿಸಲ್ಪಟ್ಟ ಮತ್ತು ಲಭ್ಯವಿದ್ದ ಆಕರ ಗ್ರಂಥಗಳು, ವರದಿಗಳು ಮತ್ತು ಬಿಡಿ ಲೇಖನಗಳು ಇತ್ಯಾದಿಗಳನ್ನು ಬಳಸಿಕೊಂಡಿದ್ದು ಆಕರ ಗ್ರಂಥದಲ್ಲಿ ಕೊಡಲಾಗಿದೆ. ಮುಖ್ಯವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ಪ್ರಮುಖವಾಗಿದ್ದು. ಅವರ ಬಗ್ಗೆ ಸರ್ಕಾರವು ಸಾಕಷ್ಟು ಆಸಕ್ತಿ ವಹಿಸಿ, ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದನ್ನು ನನ್ನ ಅಧ್ಯಯನದ ವಿಧಾನದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಕ್ಷೇತ್ರಕಾರ್ಯ :**

ಬುಡಕಟ್ಟು ಸಮುದಾಯಗಳ ಅಧ್ಯಯನ, ಅಧ್ಯಯನದ ಕಾರಣ, ಅವುಗಳ ಕಲ್ಯಾಣ ಕ್ರಮಗಳು ಹೇಗೆ ಅನುಷ್ಠಾನಕ್ಕೆ ಬಂದವು. ಈ ಸಮುದಾಯಗಳ ಮೇಲೆ ಯಾವ ರೀತಿಯ ಪರಿಣಾಮ ಬೀರಿದವು. ಅವುಗಳ ಪ್ರತಿಫಲಗಳನ್ನು ತಿಳಿಯಲು ಸಹಾಯವಾಗುತ್ತವೆ. ಈ ಅಧ್ಯಯನಕ್ಕೆ ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಅಲ್ಲಲ್ಲಿ ಬುಡಕಟ್ಟು ಸಮುದಾಯಗಳ ಮನೆಗಳಲ್ಲಿ, ಇಲ್ಲವೇ 'ಆಶ್ರಮ' ಶಾಲೆಗಳಲ್ಲಿದ್ದು, ಆಯಾ ಸಮುದಾಯಗಳನ್ನು, ಅವರ ಸಹಕಾರದೊಂದಿಗೆ ಅಧ್ಯಯನಕ್ಕೆ

ಬೇಕಾದ ಸೂಕ್ತ ಮಾಹಿತಿ ಸಂಗ್ರಹಿಸಲಾಗಿದೆ. ಅವರ ಜೊತೆಯಲ್ಲಿ ಕಾಲ ಕಳೆದ ಕಾರಣ, ಆ ಸಮುದಾಯಗಳ ಆಚಾರ-ವಿಚಾರ, ಆರ್ಥಿಕ, ಸಾಮಾಜಿಕ ಜೀವನ ಮತ್ತು ಸ್ಥಿತಿ-ಗತಿಗಳನ್ನು ತಿಳಿದುಕೊಳ್ಳಲು ಅನುಕೂಲವಾಯಿತು. ಈ ಬಗ್ಗೆ ಸರ್ವೇಕ್ಷಣ ಪದ್ಧತಿಯನ್ನು ಕೂಡಾ ಅನುಸರಿಸುವುದು ಅನಿವಾರ್ಯವಾಯಿತು. ಏಕೆಂದರೆ ಕಲ್ಯಾಣ ಕ್ರಮಗಳನ್ನು ಅಲ್ಲದೆ ಅವುಗಳನ್ನು ಕುರಿತಂತೆ ಅವುಗಳ ಅನುಷ್ಠಾನಗಳ ಬಗ್ಗೆ ಕೆಲವು ನಮೂನೆಗಳನ್ನು ತಯಾರಿಸಿ, ಅವುಗಳ ಮುಖಾಂತರ, ಮಾಹಿತಿಯನ್ನು ತುಂಬಿ, ಅಧ್ಯಯನದ ದೃಷ್ಟಿಯಿಂದ ವಿವೇಚಿಸಲಾಗಿದೆ.

**ಕ್ಷೇತ್ರಕಾರ್ಯದ ಸಾಧಕ-ಬಾಧಕಗಳು :**

ಕ್ಷೇತ್ರಕಾರ್ಯ ಮಾಡುವಲ್ಲಿ ಕೆಲವು ಅನುಕೂಲತೆಗಳು ಕಂಡುಬಂದವು. ಈ ಬುಡಕಟ್ಟು ಸಮುದಾಯಗಳ ಭಾಷೆಯೂ ಕನ್ನಡ ಆಡುನುಡಿಯಾದ್ದರಿಂದ ಜನರ ಜೊತೆಗೆ ಮಾತನಾಡಲು ಹಾಗೂ ಮಾಹಿತಿ ಸಂಗ್ರಹಿಸಿಲು ಅತಿ ಸುಲಭವಾಯ್ತು. ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿರುವ ಜನರು ವಿಷಯ ತಿಳಿಸುವಲ್ಲಿ ಮುಕ್ತವಾಗಿ ಸಹಕರಿಸಿದರು. ಸ್ವಲ್ಪಮಟ್ಟಿಗೆ, ಹಕ್ಕಿಪಿಕ್ಕಿ ಕಾಲೋನಿಯಲ್ಲಿ ಮಾತ್ರ ಈ ದಿಶೆಯಲ್ಲಿ ತೊಂದರೆಯಾಯಿತು. ಕಾರಣ ಇಲ್ಲಿಯ ಬುಡಕಟ್ಟು ಸಮುದಾಯದವರು ಅಲೆಮಾರಿಗಳಾಗಿರುವುದರಿಂದ ಇತರೆ ಸಮುದಾಯದ ಜೊತೆ ಮಾತನಾಡಲು ಹಿಂಜರಿಯುತ್ತಾರೆ. 'ಏನು ಮಾತನಾಡಿದರೆ ಹೆಚ್ಚು ಕಡಿಮೆ' ಎಂಬ ಅಳುಕು ಅವರಲ್ಲಿ ಸದಾ ಕಂಡುಬರುತ್ತಿತ್ತು. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳ ಸ್ವಭಾವ' ಹಿಂಜರಿಕೆ', 'ನಾಚಿಕೆ' ಇತ್ಯಾದಿ ಮಾನಸಿಕೋಚಿತವಾದದ್ದು. ಅವರು ಹೊರಗಿನವರ ಜೊತೆಗೆ ನಿರಾತಂಕವಾಗಿ ಮಾತನಾಡಲು ತಿಳಿಯುವುದಿಲ್ಲ. ಅದರಲ್ಲಿಯೂ ಕಲ್ಯಾಣ ಕಾರ್ಯಕ್ರಮಗಳ ಕುರಿತಾಗಿ ವಿಚಾರಿಸಿದಲ್ಲಿ ಗೊತ್ತಿಲ್ಲವೆಂದು ಹೇಳುವುದೂ ಸಹಜವಾಗಿದೆ.

ಸರಕಾರಕ್ಕೇನೋ ಬುಡಕಟ್ಟು ಸಮುದಾಯಗಳ ಕಲ್ಯಾಣ ಮತ್ತು ಅಭಿವೃದ್ಧಿ ತ್ವರಿತ ಗತಿಯಿಂದ ನಡೆಯಬೇಕೆಂಬ ಅಪೇಕ್ಷೆ ಇದೆ. ಆದರೆ ಈ ಸಮುದಾಯದಲ್ಲಿರುವ ಅಜ್ಞಾನದಿಂದಲೂ, ಇವರಲ್ಲಿ ಮುಂದಾಳು (ಲೀಡರ್)ಗಳು ಇಲ್ಲದಿರುವ ಕಾರಣ, ಕಲ್ಯಾಣ ಕಾರ್ಯಕ್ರಮಗಳ ಸ್ವರೂಪ ಹಾಗೂ ಅವುಗಳ ಲಾಭ ಇತ್ಯಾದಿ ತಿಳಿಯದೇ ಹೋಗುತ್ತದೆ. ಅನೇಕ ಸಂದರ್ಭಗಳಲ್ಲಿ ಈ ಸಮುದಾಯಗಳು ತಮಗೆ ಲಭ್ಯವಾಗುವ ಕಲ್ಯಾಣ ಕಾರ್ಯಕ್ರಮಗಳ ಪ್ರಯೋಜನ ಪಡೆದಿರುವುದಿಲ್ಲ. ಇದು ನಮ್ಮ ಗಮನಕ್ಕೆ ಬಂದ ಅಂಕಿ-ಅಂಶ. ಕ್ಷೇತ್ರಕಾರ್ಯದಲ್ಲಿ ಹೀಗಿದ್ದರೂ ಇಂತಹ ಕೊರತೆ ಇದ್ದಾಗಲೂ ತಾಳ್ಮೆಯಿಂದ ಆಗಾಗ್ಗೆ ಸಮುದಾಯಗಳಲ್ಲಿರುವ ಫಲಾನುಭವಿಗಳನ್ನು ಸಂದರ್ಶಿಸಿ ವಿಷಯ ಸಂಗ್ರಹಣೆ ಮಾಡುವಲ್ಲಿ ಯಶಸ್ಸನ್ನು ಸಾಕಷ್ಟು ಪ್ರಮಾಣಗಳಲ್ಲಿ ಸಾಧಿಸಲಾಗಿದೆ. ಅಂಕಿ-ಅಂಶದ ಪ್ರಮಾಣಕ್ಕಿಂತಲೂ, ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲಾಗಿದೆ. ಸಮಯ ಹೋದಂತೆ ಕ್ರಮೇಣ ಹೆಚ್ಚು ಹೆಚ್ಚು ಜನರು ಇಂತಹ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಸಫಲಗೊಳಿಸುವಲ್ಲಿ ಸಮರ್ಥರಾಗಿದ್ದಾರೆ ಎಂಬುವುದನ್ನು ಕಾಣಬಹುದು.

## ಅಧ್ಯಯನದ ವ್ಯಾಪ್ತಿ :

ಬೇರಾವುದೇ ಬುಡಕಟ್ಟಿನ ಬಗ್ಗೆ ನಡೆದಂತೆ ಹಕ್ಕಿಪಿಕ್ಕಿ ಮತ್ತು ಇರುಳಿಗರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿ ಬಗ್ಗೆ ಕನ್ನಡದಲ್ಲಿ ಇದುವರೆಗೂ ಅಧ್ಯಯನ ನಡೆದಿಲ್ಲ. ಭಾರತ ಮಾನವಿಕಶಾಸ್ತ್ರ ಸರ್ವೇಕ್ಷಣಾ ಸಂಸ್ಥೆ ಮೈಸೂರು ವತಿಯಿಂದ ಪ್ರಕಟಿಸಿರುವ ಮಾನ್ ಎಂಬುವರ 'ಹಕ್ಕಿಪಿಕ್ಕಿ ಹುಡುಕುವುದು ಮತ್ತು ಮಾರುವುದು', ಇರುಳಿಗರ ಸಾಂಸ್ಕೃತಿಕ ಅಧ್ಯಯನ ಇತ್ಯಾದಿ ಬೆರಳೆಣಿಕೆಯಷ್ಟು ಪುಸ್ತಕಗಳು ಸಂಸ್ಕೃತಿ ಅಧ್ಯಯನವನ್ನು ಕುರಿತಂತೆ ಬಂದಿರುವುದನ್ನು ಕಾಣಬಹುದು. ಆದರೆ ಈ ಸಮುದಾಯಗಳ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ಅನುಲಕ್ಷಿಸಿ ಅಧ್ಯಯನಗಳು ಕಂಡು ಬಂದಿರುವುದಿಲ್ಲ. ಆದುದರಿಂದ ಇರುಳಿಗರ ಹಾಗೂ ಹಕ್ಕಿಪಿಕ್ಕಿಗಳ ಸಾಮಾಜಿಕ, ಆರ್ಥಿಕ ಬದಲಾವಣೆಯನ್ನು ಕುರಿತಂತೆ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕ ರಾಜ್ಯದ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅರಣ್ಯ ಮತ್ತು ಬೆಟ್ಟ ಪ್ರದೇಶಗಳು ಹೆಚ್ಚಾಗಿದ್ದು ಇಲ್ಲಿಯೇ ಬುಡಕಟ್ಟು ಸಮುದಾಯದ ವಸತಿಗಳು ಸಾಕಷ್ಟು ಕಂಡುಬರುತ್ತವೆ. ಅದರಲ್ಲೂ ಈ ಪ್ರದೇಶದ ರಾಮನಗರ, ಮಾಗಡಿ, ಬನ್ನೇರುಘಟ್ಟ ಪ್ರದೇಶಗಳು ಅರಣ್ಯದಿಂದ ಆವೃತವಾಗಿವೆ. ಕೆಲವು ಕಡೆ ಒಂದೇ ಬುಡಕಟ್ಟು ಸಮುದಾಯಗಳು ಕಂಡು ಬಂದು ಇನ್ನೂ ಕೆಲವು ಕಡೆ ಎರಡು ಮೂರು ಬುಡಕಟ್ಟು ಸಮುದಾಯದವರು ಕಂಡುಬರುತ್ತಾರೆ. ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ಈ ಪ್ರದೇಶದಲ್ಲಿ ಪ್ರಮುಖವಾಗಿ ಕಂಡು ಬಂದಿದ್ದು. ಇಲ್ಲಿ ಸರ್ಕಾರ ಅನೇಕ ಕಲ್ಯಾಣ ಕಾರ್ಯಕ್ರಮ ಕೈಗೊಂಡಿದೆ. ಹೀಗಾಗಿ ಈ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬುಡಕಟ್ಟುಗಳಿರುವ ಪ್ರದೇಶದಲ್ಲೆಲ್ಲಾ ಕಲ್ಯಾಣ ಕಾರ್ಯಕ್ರಮಗಳ ಯೋಜನೆ ಮತ್ತು ಅನುಷ್ಠಾನಗಳು ನಡೆಯುತ್ತಲೇ ಬಂದಿವೆ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳಿರುವ ಕಾಲೋನಿಗಳಲ್ಲಿ ಇಂತಹ ಸರ್ಕಾರಿ ಕಾರ್ಯಕ್ರಮಗಳು ಸ್ವಲ್ಪ ವ್ಯಾಪಕವಾಗಿ ಮಾಡಲ್ಪಡುವುದು ಒಂದು ಪರಂಪರೆ.

ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿರುವ ಬುಡಕಟ್ಟು ಸಮುದಾಯಗಳ ಕಾಲೋನಿಗಳನ್ನು ಪಟ್ಟಿ ಮಾಡಲಾಯಿತು. ಈ ಪಟ್ಟಿಯ ಪ್ರಕಾರ ನಾಲ್ಕು ಕಾಲೋನಿಗಳಲ್ಲಿ ಎಲ್ಲಾ ಹಕ್ಕಿಪಿಕ್ಕಿ ಸಮುದಾಯಗಳಿವೆ. ಇವುಗಳನ್ನು ಹಾಗೂ ಇರುಳಿಗರು ಇರುವ ಪ್ರದೇಶವನ್ನು ಅಧ್ಯಯನಕ್ಕಾಗಿ ಆರಿಸಲಾಯಿತು. ಹೆಜ್ಜಾಲ, ಬನ್ನೇರುಘಟ್ಟ, ಪೆಪ್ಸಿ ಕಂಪನಿಯ ಬೋರಸಪುರ ಹಾಗೂ ಕೆಂಗೇರಿ ಉಪನಗರದ ಸುಭಾಷ್‌ನಗರದಲ್ಲಿ ಹಕ್ಕಿಪಕ್ಕಿ ಸಮುದಾಯಗಳು ಸುಮಾರು ೩೦೦-೫೦೦ ಕುಟುಂಬಗಳು ಕಂಡುಬರುತ್ತವೆ. ಹೆಜ್ಜಾಲ, ಬನ್ನೇರುಘಟ್ಟ ಕಾಲೋನಿಗಳು ಅತಿ ಹೆಚ್ಚು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳನ್ನು ಪ್ರತಿನಿಧಿಸುತ್ತವೆ. ಮಾಗಡಿ, ಕನಕಪುರ, ರಾಮನಗರ, ಆನೇಕಲ್ಲು, ದೇವನಹಳ್ಳಿ ಪ್ರದೇಶಗಳು ಇರುಳಿಗ ಬುಡಕಟ್ಟು ಸಮುದಾಯವನ್ನು ಪ್ರತಿನಿಧಿಸುತ್ತದೆ. ಈ ಎಲ್ಲಾ ಕಾರಣಗಳಿಂದ ಪ್ರಮುಖವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಈಗ ನಡೆದಿರುವ ಸಂಶೋಧನೆಯಲ್ಲಿ ಸಾಮಾಜಿಕ ಬದಲಾವಣೆಯನ್ನು ಕುರಿತಂತೆ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಮಾನ್, ಡಾ. ಚೆಲುವರಾಜ್, ಡಾ.ರಾಜಪ್ಪದಳವಾಯಿ, ಡಾ.ಸಿತಾರಾಮ್, ನಾಯಕ್‌ರವರ ಪುಸ್ತಕಗಳು ಹಕ್ಕಿಪಿಕ್ಕಿಯವರ ಬದುಕಿನ ಬಗ್ಗೆ ಸಾಕಷ್ಟು ಮಾಹಿತಿ ನೀಡಬಲ್ಲ ಪುಸ್ತಕಗಳಾಗಿವೆ. ಇದರಲ್ಲಿ ಹಕ್ಕಿಪಿಕ್ಕಿಯವರ ಜನಾಂಗದ ಕಸುಬು ಮತ್ತು ವ್ಯಾಪಾರ ಜೀವನದ ಬಗ್ಗೆ ಹೆಚ್ಚು ಒತ್ತು ಕೊಟ್ಟಿರುವ ಪುಸ್ತಕಗಳಾಗಿವೆ. ಜೊತೆಗೆ ಮಾನವಶಾಸ್ತ್ರೀಯ ದೃಷ್ಟಿಯಿಂದ ಈ ಜನಾಂಗವನ್ನು ನೋಡಲಾಗಿದೆ. ಅಲ್ಲದೆ ಬಹುತೇಕ ಸಂದರ್ಶನಗಳನ್ನು ಆಧರಿಸಿ ಮಾಡಲಾಗಿದೆ. ವಿಷಯ ಸಂಗ್ರಹಣೆ ಜನಾಂಗೀಯವಾದ, ಕೆಲವು ಸೂಕ್ಷ್ಮಗಳನ್ನು ವಿವರಿಸುವಲ್ಲಿ ಹೆಚ್ಚು ಸಫಲವಾಗಿಲ್ಲವೆಂದು ಹೇಳುವ ಅನಿವಾರ್ಯತೆಯಿದ್ದರೂ, ಮೊಟ್ಟ ಮೊದಲಿಗೆ ಈ ಬುಡಕಟ್ಟಿನ ಬಗ್ಗೆ ಇಷ್ಟು ವ್ಯಾಪಕವಾದ ಅಧ್ಯಯನ ನಡೆದಿರಲಿಲ್ಲವೆಂಬುದನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಹಕ್ಕಿಪಿಕ್ಕಿ ಕ್ಯಾಂಪ್ ಹೆಜ್ಜಾಲ, ಕೋತಿಆಂಜನೇಯ ದೇವಸ್ಥಾನ, ಬನ್ನೇರುಘಟ್ಟ, ಕೆಂಗೇರಿ ಪೆಪ್ಸಿ ಕಂಪನಿ, ಇತ್ಯಾದಿ ಪ್ರದೇಶಗಳಲ್ಲಿ ಈ ಸಮುದಾಯಗಳು ಕಂಡುಬರುವುದರಿಂದ ಈ ಪ್ರದೇಶಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಬದುಕಲು ಬೇಟೆಗಾರಿಕೆಯನ್ನು ಹೆಚ್ಚು ಅವಲಂಬಿಸಿರುವ ಹಲವು ಬುಡಕಟ್ಟುಗಳಲ್ಲಿ 'ಇಲ್ಲಿಗರು' ಎಂಬ ಸಮುದಾಯವನ್ನು ಇದುವರೆಗೆ ಮಾನವಶಾಸ್ತ್ರಜ್ಞರು ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿರುವಂತೆ ಕಾಣುವುದಿಲ್ಲ. ಆದರೆ ಹೆಚ್.ವಿ ನಂಜುಂಡಯ್ಯನವರು 'ಇರುಳಿಗರು' ಎಂಬ ಬುಡಕಟ್ಟು ಸಮುದಾಯವನ್ನು ಸ್ಥೂಲವಾಗಿ ಪರಿಚಯಮಾಡಿಕೊಟ್ಟಿರುತ್ತಾರೆ. 'ಇರುಳಿಗ' ಎಂಬ ಪದ 'ಇಲ್ಲಿಗರು' ಎಂದು ವಿರೂಪಗೊಂಡಿದೆ ಎಂದು ಹೆಚ್.ವಿ ನಂಜುಂಡಯ್ಯನವರು ಹೇಳುತ್ತಾರೆ. ಇವರಿಗೆ 'ಕಾಡು ಪೂಜಾರಿ'ಗಳು ಎಂದು ಹೆಸರಿದ್ದು, ಈ ಕಾಡು ಪೂಜಾರಿಗಳನ್ನು ಅದರ ಸುತ್ತಮುತ್ತಲು ಮೇಲು ವರ್ಗದ ಜನರು 'ಇಲ್ಲಿಗರು' ಎಂದು ಕರೆಯುತ್ತಾರೆ. ಆದರೆ ಕಾಡು ಪೂಜಾರಿಗಳು ತಮ್ಮನ್ನು 'ಇಲ್ಲಿಗರು' ಎಂದು ಕರೆದುಕೊಳ್ಳಲು ಇಷ್ಟಪಡುವುದಿಲ್ಲ. ಆಹಾರಕ್ಕಾಗಿ 'ಇಲಿ' ಹಿಡಿದು ತಿನ್ನುವುದರಿಂದ ತಮ್ಮನ್ನು ಮೇಲಸ್ಥರ ಜನ ಹೀನಾಯ ಮಾಡಿ 'ಇಲ್ಲಿಗರು' ಎನ್ನುತ್ತಾರೆ ಎಂದು ಭಾವಿಸಿದ್ದಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾವನದುರ್ಗ, ರಾಮನಗರ ಬಳಿಯ ರಾಮಗಿರಿ, ಶಿವನಗಿರಿ, ಮುದುವಾಡಿದುರ್ಗ, ಕಬ್ಬಾಳುದುರ್ಗ ಮತ್ತು ರೇವಣ್ಣ ಸಿದ್ಧೇಶ್ವರ ಬೆಟ್ಟದ ಒಳ ಪ್ರದೇಶಗಳು ಕಗ್ಗಲ್ಲು ಅರೆ ಬಂಡೆಗಳಿಂದ, ಬೆಟ್ಟಗುಡ್ಡಗಳಿಂದ, ಕಾಡು ಕಣಿವೆಗಳಿಂದ ಆವರಿಸಿದ ಈ ಪ್ರದೇಶಕ್ಕೆ ವಿಶಿಷ್ಟವಾದ ಭೌಗೋಳಿಕ ಪರಿಸರವಿದೆ.

ಇಲ್ಲಿಗರ ವಾಸದ ನೆಲೆಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ಸುತ್ತಮುತ್ತಲು ಬೆಟ್ಟ ಕಾಡುಗಳಿರುವುದರಿಂದ ಅಧ್ಯಯನದ ವ್ಯಾಪ್ತಿಗೆ ಈ ಪರಿಸರವನ್ನೇ ಕೇಂದ್ರವಾಗಿಟ್ಟುಕೊಳ್ಳಲಾಗಿದೆ. ಮಾಗಡಿ ತಾಲ್ಲೂಕು ಸಾವನದುರ್ಗ ಬೆಂಗಳೂರಿನಿಂದ ೫೧ ಕಿ.ಮೀ ದೂರದಲ್ಲಿದೆ. ಬೆಟ್ಟಗಳು, ಗುಡ್ಡಗಳ ನಡುವೆ ರಕ್ಷಿತ ಅರಣ್ಯ ಪ್ರದೇಶ, ಮಳೆಗಾಳಿಗಳಿಂದ ರಕ್ಷಣೆ ದೊರಕುವ ನಿಸರ್ಗದತ್ತ ಸ್ಥಳಗಳಲ್ಲಿ ಹೆಜ್ಜೇನಿನ ಬೆಟ್ಟಗುಡ್ಡಗಳು, ಬಂಡೆಗಳು, ತಪ್ಪಲುಗಳು, ಹುಣಸೆ, ಸೀಗೆ, ಬಿದಿರು, ಬೇಲ, ಆಲ, ಕಲ್ಲು,

ತೇಗ ದಿಂಡಿಗ, ಗಂಧ ಬಾಡುಬಕ್ಕ, ಲಾಂಟಾನಾ, ನೇರಳೆ, ಮಾವು ಮುಂತಾದ ಮರಗಳಿಂದ ಕೂಡಿದ ವನಪ್ರದೇಶ ಕುಮುದ್ವತಿ, ಕಣ್ವ, ಅರ್ಕಾವತಿ ನದಿಗಳಿಗೆ ಸೇರುವ ಹೊಳೆಗಳು, ಉಪನದಿಗಳು ಈ ಪರಿಸರದಲ್ಲಿ ಅನೇಕಾನೇಕ ಸಂಖ್ಯೆಯಲ್ಲಿವೆ. ವಿಶಾಲವಾದ ಅರೆಬಂಡೆಗಳು, ಅರೆಬಂಡೆಗಳ ನಡುವೆ ನೈಸರ್ಗಿಕವಾಗಿ ನಿರ್ಮಾಣಗೊಂಡ ದೊಣೆ ಅಥವಾ ಕೊಳಗಳು ಇರುವಂಥ ಬೆಟ್ಟ ಸಾಲಿನಲ್ಲಿ ಇಲ್ಲಿಗರು ವಾಸಿಸುತ್ತಾರೆ.

ಮಾಗಡಿ ತಾಲ್ಲೂಕಿನ ತಿಪ್ಪಗೊಂಡನಹಳ್ಳಿಯ ಸಮೀಪ ಬಂಟರಗೊಪ್ಪೆ, ಜೋಡುಗಟ್ಟೆ, ಅಜ್ಜನಹಳ್ಳಿ, ಸೊಣ್ಣೆನಹಳ್ಳಿ, ಜೇನುಕಲ್ಲುಪಾಳ್ಯ ಮತ್ತು ಮಾರೇಗೌಡನದೊಡ್ಡಿ, ರಾಮನಗರ ತಾಲ್ಲೂಕಿನ ಮಟಕಯ್ಯನದೊಡ್ಡಿ, ಎರೇಹಳ್ಳಿ, ಚನ್ನಯ್ಯನದೊಡ್ಡಿ, ರಾಯರದೊಡ್ಡಿ, ವಡೇರಹಳ್ಳಿ, ಬಸವನಪುರ, ಮೆಟ್ಟರೆಕಾಡು, ಅಚಲು, ದೇವರದೊಡ್ಡಿ, ನೆಲಮಲೆ, ದಾಸೇಗೌಡನದೊಡ್ಡಿ, ಕಾಡನಕುಪ್ಪೆ. ಕನಕಪುರ ತಾಲ್ಲೋಕಿನ ಚುಂಚಿ ಕಾವೇರಿ ನದಿಯ ಬಯಲು ಪ್ರದೇಶಗಳಲ್ಲಿ ಇಲ್ಲಿಗರ ನೆಲೆಗಳು ಕಾಣಬರುತ್ತವೆ.

ಇರುಳಿಗರು ಕರ್ನಾಟಕದ ಐದಾರು ಜಿಲ್ಲೆಗಳಲ್ಲಿ ವಾಸಿಸುತ್ತಿದ್ದು ಜನಸಂಖ್ಯೆ ಕೂಡ ಅಷ್ಟೇ ಗಣನೀಯ ಪ್ರಮಾಣದಲ್ಲಿರುವುದರಿಂದ ಅವರ ಸಾಮಾಜಿಕ ಬದಲಾವಣೆಯನ್ನು ಕುರಿತಂತೆ ಅಧ್ಯಯನವನ್ನು ನಡೆಸಲಾಗಿದೆ.

ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳನ್ನು ಬೆಂಗಳೂರು ಗ್ರಾಮಾಂತರ ವ್ಯಾಪ್ತಿಗೆ ಸೀಮಿತಗೊಳಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ, ಮಾಗಡಿ, ಕನಕಪುರ, ತಾಲ್ಲೂಕುಗಳು ಈ ಎಲ್ಲಾ ತಾಲ್ಲೂಕುಗಳಿಗೆ ಇರುಳಿಗ ಹಾಗೂ ಹಕ್ಕಿಪಿಕ್ಕಿ ಕಾಲೋನಿಗಳಿಗೆ ಭೇಟಿಕೊಟ್ಟು ಆ ಸಮುದಾಯದೊಡನೆ ಹಲವಾರು ದಿನಗಳನ್ನು ಕಳೆದು ಅವರ ಬದುಕಿನ ಆತ್ಮೀಯ ಪರಿಚಯ ಮಾಡಿಕೊಂಡು ಪ್ರಸ್ತುತ ಅಧ್ಯಯನಕ್ಕೆ ಬೇಕಾದ ಆಕರಗಳನ್ನು ಕ್ಷೇತ್ರಕಾರ್ಯ ವಿಧಾನದಿಂದ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಯನದ ಮಹತ್ವ :**

ಮೇಲ್ಕಂಡ ಹಿನ್ನೆಲೆಯಲ್ಲಿ "ಬುಡಕಟ್ಟುಗಳ ಸಾಮಾಜಿಕ ಬದಲಾವಣೆ" (ಬೆಂಗಳೂರು ಗ್ರಾಮಾಂತರ ಪರಿಸರದ ಇರುಳಿಗರು ಮತ್ತು ಹಕ್ಕಿಪಿಕ್ಕಿಗಳನ್ನು ಅನುಲಕ್ಷಿಸಿ) ಎಂಬ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

೧೯ನೇ ಶತಮಾನದ ಉತ್ತರಾರ್ಧದಿಂದೀಚೆಗೆ 'ಸಾಮಾಜಿಕ ಬದಲಾವಣೆ' ಎಂಬ ಪರಿಕಲ್ಪನೆ ಕೇಂದ್ರಬಿಂದುವಾಗಿದೆ. ಮಾನವಶಾಸ್ತ್ರ, ಮನಃಶಾಸ್ತ್ರ, ಅರ್ಥಶಾಸ್ತ್ರ, ಅಭಿವೃದ್ಧಿಶಾಸ್ತ್ರ ಹೀಗೆ ವಿವಿಧ ಸಮಾಜ ವಿಜ್ಞಾನಗಳಲ್ಲಿ ಬದಲಾವಣೆಯನ್ನು ಅದರದೇ ರೀತಿಯಲ್ಲಿ ನಿರ್ವಹಿಸಿಕೊಳ್ಳುವ ಪ್ರಯತ್ನ ನಡೆದಿರುವುದು ಕಂಡುಬರುತ್ತದೆ. ಸಮಾಜಶಾಸ್ತ್ರದಲ್ಲಿ ಪ್ರಮುಖವಾಗಿ ಎರಡು ಸೈದ್ಧಾಂತಿಕ ನೆಲೆಗಳಲ್ಲಿ ಸಾಮಾಜಿಕ ಬದಲಾವಣೆಯನ್ನು ನಿರ್ವಹಿಸಲಾಗಿದೆ. ಒಂದು ಸಂರಚನಾವಾದಿ ನೆಲೆ ಮತ್ತೊಂದು ಮಾರ್ಕ್ಸ್‌ವಾದಿ ನೆಲೆ. ಸಂರಚನಾವಾದಿ ನೆಲೆಯು ಸಮಾಜದ ರಚನೆ, ಘಟಕಗಳು ಮತ್ತು ಅವುಗಳ ಕಾರ್ಯಗಳಲ್ಲಿ ಉಂಟಾಗುವ ವ್ಯತ್ಯಾಸವನ್ನು ಸಾಮಾಜಿಕ ಬದಲಾವಣೆ ಎಂದು ನಂಬುತ್ತದೆ.

ಮಾರ್ಕ್ಸ್‌ವಾದಿ ಸಮಾಜಶಾಸ್ತ್ರಜ್ಞರು ತಳರಚನೆ ಅಥವಾ ಸಂಬಂಧಗಳಿಗೆ ಉಂಟಾಗುವ ಬದಲಾವಣೆ, ಅದರ ಮೂಲಕ ಮೇಲ್‌ರಚನೆಯಾದ ಕಲೆ, ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯದ ಮೌಲ್ಯಗಳಲ್ಲಿ ಉಂಟಾಗುವ ಬದಲಾವಣೆಯನ್ನೇ ನಿಜವಾದ ಸಾಮಾಜಿಕ ಬದಲಾವಣೆಯೆಂದು ಭಾವಿಸುತ್ತಾರೆ.

ಈ ಎರಡು ನಿರ್ವಚನಗಳು ವಿವಿಧ ಕಾಳಜಿಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿವೆ. ಸಂರಚನಾವಾದವು ಆರ್ಥಿಕ, ತಳರಚನೆಯಲ್ಲಿನ ಬದಲಾವಣೆಗಳನ್ನು ಗುರುತಿಸುವುದಿಲ್ಲ. ಜಾನಪದ ಚಳುವಳಿಗಳು, ಬಂಡಾಯವನ್ನು ಸಮಾಜದ ಐಕ್ಯತೆಯನ್ನು ಕಾಪಾಡುವ ಸಾಧನ ಎಂದು ಅವುಗಳ ಮಹತ್ವವನ್ನು ಕಡೆಗಣಿಸಿಬಿಡುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಸಂರಚನಾವಾದ ಕಮ್ಯೂನಿಸ್ಟ್ ಸಿದ್ದಾಂತ ಮತ್ತು ಜನಪದ ಚಳುವಳಿಗಳ ವಿರುದ್ಧದ ಆಯುಧವಾಗಿ ಬಳಸಲ್ಪಡುವುದರಿಂದ ಅಸ್ತಿತ್ವದಲ್ಲಿರುವ ಸ್ತರವಿನ್ಯಾಸ ವ್ಯವಸ್ಥೆ, ಧರ್ಮ ಮೊದಲಾದವುಗಳನ್ನು ಎತ್ತಿ ಹಿಡಿಯುವ ತಂತ್ರವಾಗಿ ಕೊನೆಗೊಂಡಿದೆ. ಸಂರಚನಾವಾದಿ ಅಧ್ಯಯನಗಳು ಧನಾತ್ಮಕ ಪ್ರೇರಿತ ಅನುಭವಾತ್ಮಕ ದೃಷ್ಟಿಕೋನವನ್ನೇ ಪ್ರಧಾನವಾಗಿರಿಸಿಕೊಂಡು ಅಧ್ಯಯನಕ್ಕೊಳಪಟ್ಟ ಸಮಾಜದ ಚರಿತ್ರೆ, ರಾಜಕೀಯಾರ್ಥಿಕ ಪರಿಸ್ಥಿತಿಗಳನ್ನು ಪರಿಗಣಿಸುವುದಿಲ್ಲ. ಅದರ ಪರಿಣಾಮವಾಗಿ ಸಾಮಾಜಿಕ ಬದಲಾವಣೆಯ ಗ್ರಹಿಕೆಯು ಅರೆಕೊರೆಯಾಗಿ, ಯಥಾಸ್ಥಿತಿವಾದದಲ್ಲಿ ಕೊನೆಗೊಳ್ಳುತ್ತದೆ.

ಮಾರ್ಕ್ಸ್‌ವಾದದ ಆರ್ಥಿಕ ತಳರಚನೆಯಲ್ಲಿನ ಬದಲಾವಣೆಯೇ ಮೇಲಿನ ರಚನೆಯಲ್ಲಿನ ಬದಲಾವಣೆಗೆ ಪ್ರೇರಣೆಯೊಂದು ನಂಬುತ್ತದೆ. ಉತ್ಪಾದನಾ ಸಾಧನಗಳು ಮತ್ತು ಉತ್ಪಾದನಾ ಸಂಬಂಧಗಳಲ್ಲಿ ಬದಲಾವಣೆಯುಂಟಾದ ಸಮಾಜದ ಎಲ್ಲ ಅಂಗಗಳಲ್ಲಿ ಬದಲಾವಣೆಯುಂಟಾಗುತ್ತದೆ. ಆ ಬದಲಾವಣೆಯ ಮೂಲಕ ಆಳುವ ವರ್ಗ ತನ್ನ ಅನುಕೂಲಕ್ಕಾಗಿ ಸೃಷ್ಟಿಕೊಂಡ ಧರ್ಮ, ಸ್ತರವಿನ್ಯಾಸ ವ್ಯವಸ್ಥೆ, ಪ್ರಜಾಪ್ರಭುತ್ವ ಮೊದಲಾದವು ಕುಸಿದು ಬೀಳುತ್ತವೆ. ಅಂತಿಮವಾಗಿ ಜನಪರ ಸರ್ಕಾರ ರಚನೆಯಲ್ಲಿ ಕೊನೆಗಾಣುತ್ತದೆ ಎಂಬುವುದು ಮಾರ್ಕ್ಸ್‌ವಾದಿಗಳ ನಂಬಿಕೆ. ಮಾರ್ಕ್ಸ್‌ವಾದಿ ಸಮಾಜಶಾಸ್ತ್ರೀಯ ಅಧ್ಯಯನಗಳು, ಚರಿತ್ರೆ, ರಾಜಕೀಯ, ಸಾಮಾಜಿಕ ಪರಿಸ್ಥಿತಿಗಳನ್ನೇ ಪ್ರಧಾನ ಕಾಳಜಿಯನ್ನಾಗಿಟ್ಟುಕೊಂಡು ಸಮಾಜವನ್ನು ಸಾಮಾಜಿಕ ವಿದ್ಯಮಾನಗಳನ್ನು ಅಧ್ಯಯನ ಮಾಡುತ್ತದೆ. ಭೂತ, ವರ್ತಮಾನ ಮತ್ತು ಭವಿಷ್ಯದ ಕುರಿತ ಆಶಯ ಹೊತ್ತ ಮಾರ್ಕ್ಸ್‌ವಾದಿ ದೃಷ್ಟಿಕೋನ ಯಥಾಸ್ಥಿತಿವಾದವನ್ನು ಸ್ಪಷ್ಟವಾಗಿ ನಿರಾಕರಿಸಿ, ಎಂತಹ ಸಾಮಾಜಿಕ ಸಂದರ್ಭದಲ್ಲಿಯೂ ಕಂಡುಬರುವ ಸಾಮಾಜಿಕ ವೈರುಧ್ಯಗಳನ್ನು ಅಧ್ಯಯನ ಮಾಡುವವರಿಗೆ ಸರಿಯಾದ ದಿಕ್ಕಿನಲ್ಲಿ ಗುರುತಿಸಲು ಸಹಾಯಕವಾಗುತ್ತದೆ. ಆದುದರಿಂದ ಈ ಅಧ್ಯಯನವು ಮಾರ್ಕ್ಸ್‌ವಾದಿ ಸಮಾಜಶಾಸ್ತ್ರೀಯ ಹಿನ್ನೆಲೆಯನ್ನು ತನ್ನ ಪ್ರಮುಖ ದೃಷ್ಟಿಕೋನವಾಗಿರಿಸಿಕೊಂಡಿದೆ.

ಈ ಅಧ್ಯಯನವು ಬುಡಕಟ್ಟು ಸಮುದಾಯದಲ್ಲಿ ನಡೆದ ಸಾಮಾಜಿಕ ಬದಲಾವಣೆಗೆ ಇರುಳಿಗರು ಮತ್ತು ಹಕ್ಕಿಪಿಕ್ಕಿಗಳು ಪ್ರತಿಕ್ರಿಯಿಸಿದ ರೀತಿಯನ್ನು ಅವುಗಳ ಹಿಂದಿನ ವಿಚಾರ ಪ್ರಣಾಳಿಕೆಯನ್ನು ಗುರುತಿಸಲು ಪ್ರಯತ್ನಿಸುತ್ತದೆ.

ಬುಡಕಟ್ಟುಗಳಲ್ಲಿ ನಡೆದ ಸಾಮಾಜಿಕ ಬದಲಾವಣೆಗಳನ್ನು ಕುರಿತು ಸಮಾಜಶಾಸ್ತ್ರೀಯ ಅಧ್ಯಯನಗಳು ಏಕಮುಖವಾಗಿ, ಆದರೆ ವ್ಯಾಪಕವಾಗಿ ನಡೆದಿಲ್ಲದಿರುವುದನ್ನು ಗಮನಿಸಿ, ಬುಡಟ್ಟುಗಳಲ್ಲಿನ ಸಾಮಾಜಿಕ ಬದಲಾವಣೆಯನ್ನೇ ತನ್ನ ಕೇಂದ್ರ ಬಿಂದುವನ್ನಾಗಿಟ್ಟುಕೊಂಡಿರುವುದನ್ನು ಗಮನಿಸಿ, ಬುಡಕಟ್ಟುಗಳು ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ಸಮೃದ್ಧಿಗೊಳಿಸಬಹುದೆಂಬ ಆಶಯವು ಈ ಅಧ್ಯಯನದ ಹಿಂದಿದೆ.

ಸಮಾಜ ವಿಜ್ಞಾನಗಳು ಮತ್ತು ಬುಡಕಟ್ಟುಗಳ ನಡುವಿನ ಕಾಳಜಿ ಮತ್ತು ರೂಪಾತ್ಮಕ ವ್ಯತ್ಯಾಸಗಳು ಕರಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಸಮಾಜಶಾಸ್ತ್ರ ಮತ್ತು ಬುಡಕಟ್ಟುಗಳನ್ನು ಕುರಿತ ಈ ಅಧ್ಯಯನವು ಪರಸ್ಪರ ಪೂರಕ ವಿಷಯಗಳಾಗಿ ಕಂಡು, ಸಾಮಾಜಿಕ ಬದಲಾವಣೆಯ ಹಿಂದಿನ ಪ್ರೇರಣೆಗಳನ್ನು ಗ್ರಹಿಸಲು ಪ್ರಯತ್ನಿಸಿದೆ.

* ಸ್ವಾತಂತ್ರ್ಯ ಪಡೆದು ಆರು ದಶಕಗಳಾದರೂ ಬುಡಕಟ್ಟು ಸಮುದಾಯಗಳ ಅಭ್ಯುದಯಕ್ಕೆ ಈ ತನಕ ಕೈಗೊಂಡ ಕಲ್ಯಾಣ ಕಾರ್ಯಕ್ರಮಗಳ ಪ್ರಗತಿಯನ್ನು ನಾವು ವೀಕ್ಷಿಸದೆ ಇಲ್ಲಿವರೆಗೆ ಪ್ರಗತಿ ಸಾಕಷ್ಟಾಗಿಲ್ಲವೆನ್ನಬಹುದು. ಈ ಸಮುದಾಯದ ಅಭ್ಯುದಯಕ್ಕೆ ವೆಚ್ಚವಾಗುವ ಹಣ ಸತ್ಪ್ರಯೋಜಕವಾಗುವತ್ತ ಪ್ರಯತ್ನಿಸಬೇಕೆಂಬುದು ಎಲ್ಲಾ ಮಾನವ ವಿಜ್ಞಾನಿಗಳ ಉದ್ಧೇಶವಾಗಿದೆ.

* ಈ ಸಮುದಾಯದ ಜನರಿಗೆ ಅವಕಾಶ ಹಾಗೂ ಸೌಲಭ್ಯಗಳಿರುವ ಅಂಶಗಳನ್ನು ತಿಳಿಸಿಕೊಡುವ ಅಗತ್ಯವೂ ಇದೆ. ಇವರ ಮಕ್ಕಳನ್ನು ವಿದ್ಯಾವಂತರನ್ನಾಗಿ ಹಾಗೂ ಆರ್ಥಿಕ ಪ್ರಗತಿ ಹೊಂದಲು ಮಾರ್ಗದರ್ಶಕವಾಗುವುದೇ ಈ ಅಧ್ಯಯನದ ಉದ್ದೇಶ.

* ಬೆಂಗಳೂರು ಗ್ರಾಮಾಂತರ ಜಿಲ್ಲೆ ಆದಿವಾಸಿಗಳ ಸಮಸ್ಯೆಗಳು ಮತ್ತು ಕಲ್ಯಾಣ ಕಾರ್ಯಕ್ರಮಗಳ ಕುರಿತು ಸಮಗ್ರ ಅಧ್ಯಯನ ಮಾನವಶಾಸ್ತ್ರ ದೃಷ್ಟಿಯಿಂದ ಇದುವರೆಗೆ ನಡೆದಿಲ್ಲ. ಆದುದರಿಂದ ಈ ರೀತಿಯ ಅಧ್ಯಯನ ತುಂಬಾ ಮಹತ್ವವಾದದ್ದು.

**ಅಡಿ ಟಿಪ್ಪಣಿ :**

೧. ಕೋಟಾಗನಹಳ್ಳಿರಾಮಯ್ಯ, ಸಿಂದ್ ಮಾದಿಗರ ಸಂಸ್ಕೃತಿ, ಪುಟ-೮೩

೨. ಟಿ.ಆರ್ ಚಂದ್ರ ಶೇಖರ್, ಅಭಿವೃದ್ಧಿ ಮಿಮಾಂಸೆ, ಪುಟ -೨- ೧೯೯೩ ಕ.ವಿ.ವಿ. ಹಂಪೆ

೩ಸ. ಟಿ.ಆರ್. ಚಂದ್ರಶೇಖರ್ ಲೇ. ಬುಡಕಟ್ಟು ಅಭಿವೃದ್ಧಿ ಕೆಲವು ಟಿಪ್ಪಣಿಗಳು

# ಅಧ್ಯಾಯ-೨

## ೧ ಬುಡಕಟ್ಟು ಸಮುದಾಯದ ಪರಿಕಲ್ಪನೆ

ಸುಮಾರು ಮೂವತ್ತು ಸಾವಿರ ವರ್ಷಗಳ ಹಿಂದೆಯೇ ಮಾನವನು ಗುಂಪಾಗಿ ಬದುಕಿ ಆ ಗುಂಪಿನ ಹಿತಾಸಕ್ತಿಗಾಗಿ ಹೋರಾಡಿದ ಪ್ರತಿಫಲವಾಗಿಯೇ ಬುಡಕಟ್ಟು ಸಮುದಾಯಗಳು ಉಗಮಗೊಂಡವು. ೧ ಸಾಮಾನ್ಯವಾಗಿ ಬುಡಕಟ್ಟು ಜನರು, ಪರಸ್ಪರ ರಕ್ತಸಂಬಂಧಿಗಳಾಗಿದ್ದಾರೆ. ನೂರಾರು ಬುಡಕಟ್ಟು ಜನರು ಒಂದೆಡೆ ಗುಹೆಗಳಲ್ಲಿ ವಾಸಿಸುತ್ತಿದ್ದರು. ಎಂಬುವುದನ್ನು ಚಾರಿತ್ರಿಕ ಅಂಶಗಳು ಸ್ಪಷ್ಟಪಡಿಸುತ್ತವೆ. ಬುಡಕಟ್ಟು ಸಮುದಾಯಗಳ ಮುಖ್ಯ ಕಸುಬು ಬೇಟೆಯಾಗಿತ್ತು. ಕುಲದ ಮುಖ್ಯಸ್ಥ ಬೇಟೆಯ ಬಗ್ಗೆ ವಿವರಗಳನ್ನು ಪ್ರಸ್ತಾಪಿಸುತ್ತಿದ್ದ. ರಕ್ತಸಂಬಂಧಿಗಳು ಕೂಡಿಬಾಳುವುದರೊಂದಿಗೆ "ಸರ್ವರಿಗೂ ಸಮಪಾಲು" ಎನ್ನುವ ಸಾಮಾಜಿಕ ಸಮಾನತೆಯನ್ನು ರೂಢಿಸಿಕೊಂಡು, ಸಂಘಟನಾತ್ಮಕ ಮನೋಭಾವನೆಯ ಮೂಲಕ ಜೀವನಕ್ರಮವನ್ನು ಸಾಗಿಸುತ್ತಿದ್ದರು.

ಇಂದು ಭಾರತದ ಸಮಾಜದಲ್ಲಿ ಜಾತಿ ಶ್ರೇಣಿಕರಣ ಮತ್ತು ವರ್ಗ ಶ್ರೇಣಿಕರಣಗಳಿಂದ ಕೂಡಿದ ತಳಸಮುದಾಯದ ಬಡವರು ಜಾತಿ ಹಾಗೂ ವರ್ಗ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಈ ಎರಡು ಬಗೆಯ ಶೋಷಣೆಗಳು ದಿನೆ ದಿನೆ ಹಳೆ ರೂಪಗಳನ್ನು ಬದಲಾಯಿಸಿಕೊಳ್ಳುತ್ತಾ, ಹೊಸ ರೂಪ ತಾಳುತ್ತಾ ಸಾಗಿವೆ. ಮೇಲಿನ ಜಾತಿಯ ಬಡವರು ಮತ್ತು ತಳಸಮುದಾಯದ ಬಡವರ ಸಮಸ್ಯೆಗಳು ಆರ್ಥಿಕ ಆಯಾಮದಲ್ಲಿ ಒಂದೇ ಸ್ವರೂಪದ್ದಾಗಿವೆ. ಬೇರೆ ಬೇರೆ ಜಾತಿಯ ಬಡವರು ತಮ್ಮ ಜಾತಿ ಸಂಕೋಲೆಗಳನ್ನು ತೊರೆದು ಸಮಾನ ಆರ್ಥಿಕ ಸಮಸ್ಯೆಗಳ ಪರಿಹಾರಕ್ಕಾಗಿ ಮತ್ತು ರಾಜಕೀಯ ಅಧಿಕಾರಕ್ಕಾಗಿ ಭಾರತದ ಚರಿತ್ರೆಯುದ್ದಕ್ಕೂ ಅನೇಕ ಹೋರಾಟಗಳನ್ನು ಮಾಡಿದ್ದಾರೆ. 'ಜಾತಿ ಶ್ರೇಣೀಕರಣವೇ ಭಾರತದ ಸಮಾಜದ ಬುನಾದಿ' ಎಂಬ ಲೋಹಿಯಾರವರ ಗ್ರಹಿಕೆ ಜಾತಿ ಆಧಾರಿತ ಭಾರತದ ಸಮಾಜದಲ್ಲಿ ವರ್ಗಗಳು, ಜಾತಿಗಳು ಮಾತ್ರವೇ ಇವೆ. ಭಾರತದಲ್ಲಿ ಏಕರೂಪಿ ಸಂಸ್ಕೃತಿಯನ್ನು ಪ್ರತಿಗಾಮಿಗಳು ಹೇರಲು ಪ್ರಯತ್ನಿಸಿರುವುದನ್ನು ಈಗಾಗಲೇ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಸ್ಪಷ್ಟ ಪಡಿಸಿರುವುದರಿಂದ ಬುಡಕಟ್ಟು ಸಮುದಾಯಗಳ ಬಹುಮುಖಿ ಚಿಂತನೆಯತ್ತ ಅಧ್ಯಯನ ಕೈಗೊಳ್ಳುವುದು ಅತ್ಯಂತ ಔಚಿತ್ಯ ಪೂರ್ಣವೆನಿಸುತ್ತದೆ.

ಆಧುನಿಕ ಸಮಾಜದ ವ್ಯವಸ್ಥೆಯಲ್ಲಿ ವ್ಯಕ್ತಿ ಮತ್ತು ಆತನ ಪರಿಸರದ ನಡುವಿನ ಸಂಬಂಧ ತುಂಬಾ ಸೀಮಿತವಾಗಿದೆ. ಯಾಕೆಂದರೆ ಆಧುನೀಕರಣ ಅಮೂರ್ತ ಸ್ವರೂಪದ ವ್ಯಕ್ತಿಯನ್ನು ರೂಪಿಸಿದೆ. ಅಮೂರ್ತ ಸ್ವರೂಪದ ವ್ಯಕ್ತಿ ಇತರರೊಂದಿಗೆ ಕೇವಲ ಒಪ್ಪಂದ ಆಧಾರಿತ ಸಂಬಂಧ ಇಟ್ಟುಕೊಳ್ಳುತ್ತಾನೆ. ಆ ಸಂಬಂಧ ಕೂಡ ತನ್ನ ವೈಯಕ್ತಿಕ ಲಾಭನಷ್ಟಗಳ ಲೆಕ್ಕಚಾರದಲ್ಲಿ ನಡೆಯುತ್ತದೆ. ಇದರಿಂದ ಸಾಮುದಾಯಿಕ ಬದುಕು ನಾಶವಾಗುತ್ತಿದೆ. ಅಮೂರ್ತ ವ್ಯಕ್ತಿಯ ಕಲ್ಪನೆ ಅಚಾರಿತ್ರಿಕವಾದದು. ವ್ಯಕ್ತಿ ಕೇವಲ ಲಾಭನಷ್ಟಗಳನ್ನು ಲೆಕ್ಕಾಚಾರ ಹಾಕುವ ಪ್ರಾಣಿಯಲ್ಲ, ಆತ ಯಾವುದೋ ಕುಟುಂಬಕ್ಕೆ,

ಜಾತಿಗೆ, ಧರ್ಮಕ್ಕೆ ಸೇರಿದವನು. ಅವುಗಳು ವ್ಯಕ್ತಿ ಬದುಕುವ ಪರಿಸರದ ಮೌಲ್ಯ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಹುಟ್ಟಿನಿಂದ ಸಾವಿನ ತನಕ ವ್ಯಕ್ತಿಯ ಅರಿವನ್ನು ರೂಪಿಸುವ ಕೆಲಸವನ್ನು ಅವು ಮಾಡುತ್ತವೆ. ನಮ್ಮ ಪರಂಪರೆಯ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಇದ್ದ ಅನುಕಂಪ, ಸಂಘ ಜೀವನ, ಮೌಲ್ಯಗಳು, ಇಂದು ನೆಲೆಕಳೆದುಕೊಳ್ಳುತ್ತಿವೆ. ಸಮಾನತೆ, ಪ್ರಜಾಪ್ರಭುತ್ವ ಪಾರದರ್ಶಕತೆ, ಇತ್ಯಾದಿಗಳು ಸಮಾಜದಲ್ಲಿ ನೆಲೆಗೊಂಡಿಲ್ಲ. ಮನುಷ್ಯತ್ವವನ್ನು ಕಳೆದುಕೊಂಡು ತಮ್ಮ ಲಾಭಕ್ಕಾಗಿ ಏನು ಬೇಕಾದರೂ ಮಾಡಲು ಹೇಸದ ಸಮುದಾಯಗಳು ಇಂದು ವಿಜೃಂಭಿಸುತ್ತಿವೆ. ನಮ್ಮ ಪರಂಪರೆಯಲ್ಲಿ ಹೇಗೆ ಸಂಘಟನಾತ್ಮಕ ಜೀವನ ನಡೆಸುತ್ತಿದ್ದರು ಎಂಬ ಅಂಶವನ್ನು ಸ್ಪಷ್ಟಪಡಿಸಲು ಬುಡಕಟ್ಟು ಸಮುದಾಯದ ಅಧ್ಯಯನ ಅತ್ಯಂತ ಅರ್ಥಪೂರ್ಣವಾಗಿದೆ.

"ಬುಡಕಟ್ಟು ಸಮುದಾಯಗಳು ತುಂಬಾ ಬಿಗಿಕಟ್ಟುನಿಟ್ಟಿನ ನಿಯಮಗಳನ್ನು ಹೊಂದಿವೆ. ಹೊರಗಿನಿಂದ ಯಾರೆ ಬಂದರೂ ಅವರನ್ನು ಅನುಮಾನದಿಂದ ನೋಡುವ ಪದ್ಧತಿಯಿರುತ್ತದೆ. ಈ ಸಾಮಾಜಿಕ ವರ್ಗಗಳ ಸಂಸ್ಕೃತಿ ನಗರ ಮತ್ತು ಗ್ರಾಮೀಣ ಸಂಸ್ಕೃತಿಗಳಿಗಿಂತ ತೀರ ಭಿನ್ನವಾಗಿದ್ದು 'ಅನಾಗರೀಕ' ಎಂಬಂತೆ ಕಂಡು ಬರುತ್ತದೆ. ಈ ಜನ ತಮ್ಮದೇ ಪ್ರತ್ಯೇಕವಾದ ಭಾಷೆ, ಆಚಾರ-ವಿಚಾರ, ವ್ಯವಹಾರ, ಸಾಹಿತ್ಯ ಮೊದಲಾದವುಗಳನ್ನು ಹೊಂದಿರುತ್ತಾರೆ. ಇಂತಹ ಸಾಮಾಜಿಕ ವರ್ಗಗಳನ್ನು ಸಾಂಸ್ಕೃತಿಕ ಮಾನವ ವಿಜ್ಞಾನದಲ್ಲಿ ಬುಡಕಟ್ಟುಗಳು ಎಂದು ಕರೆಯಲಾಗಿದೆ".೨

ಜಗತ್ತಿನಾದ್ಯಂತ ಹಲವು ಬುಡಕಟ್ಟು ಸಮುದಾಯಗಳು ಕಂಡು ಬರುತ್ತವೆಯಾದರೂ ಭಾರತದ ಬುಡಕಟ್ಟು ಮತ್ತು ಜಾತಿಗಳಲ್ಲಿ ಅಗತ್ಯವಾಗಿ ಇರುವ ವ್ಯತ್ಯಾಸವನ್ನು ಅಧ್ಯಯನ ಮಾಡುವುದು ಅತಿ ಮುಖ್ಯವಾಗುತ್ತದೆ.

ಪ್ರಪಂಚದ ಏಳು ಖಂಡಗಳಲ್ಲಿಯೂ ಬುಡಕಟ್ಟು ಸಮುದಾಯಗಳಿದ್ದು ಇವೆ ನೆಲೆಗಳು ಜಗತ್ತಿನಾದ್ಯಂತ ವ್ಯಾಪಕವಾಗಿ ಹರಡಿಕೊಂಡಿವೆ. ಹಾಗೆಯೇ ನಮ್ಮ ಭಾರತ ದೇಶದಲ್ಲಿ ವಿವಿಧ ಆದಿವಾಸಿ ಪಂಗಡಗಳಿದ್ದು, ಈ ಸಮುದಾಯಕ್ಕೆ ಸೇರಿದ ಜನರು ಪುರಾತನ ನಿವಾಸಿಗಳಾಗಿದ್ದಾರೆ. ಇವರನ್ನು 'ಪ್ರಾಚೀನಸಮುದಾಯಗಳು', 'ಪ್ರಾಚೀನಬುಡಕಟ್ಟುಗಳು', 'ಸರ್ವಚೇತನ ವಾದಿಗಳು', ಅಥವಾ 'ಅನಿಮಿಸಿಟ್ಸ್‌ಗಳು', 'ಅನಾಗರೀಕರು', 'ಅರಣ್ಯವಾಸಿಗಳು', 'ಆದಿವಾಸಿಗಳು', 'ಕಾಡು ಜನರು', 'ಗಿರಿಜನರು' ಮುಂತಾದ ವಿವಿಧ ಹೆಸರುಗಳಿಂದ ಕರೆಯಲಾಗಿದೆ.

ಮೂಲತಃ ಷೆಡ್ಯೂಲ್ಡ್‌ಟ್ರೈಬ್ಸ್ ಅಥವಾ ಪರಿಶಿಷ್ಠ ಪಂಗಡಗಳು ಎಂಬ ಪದವು ಆಡಳಿತಾತ್ಮಕ ಅನುಕೂಲತೆಗಾಗಿ ಸೃಷ್ಟಿಸಿರುವ ಪರಿಕಲ್ಪನೆಯಾಗಿದೆ. ಇದನ್ನು ೧೯೨೮ 'ಸೈಮನ್ ಕಮಿಷನ್' ಪ್ರಪ್ರಥಮವಾಗಿ ಪರಿಚಯಿಸಿದೆ. ಬುಡಕಟ್ಟು ಎಂಬ ಪದ ಆಡಳಿತಾತ್ಮಕ ಸತ್ಯವೇ ಹೊರತು ಸಾಮಾಜಿಕ ಸತ್ಯವಲ್ಲ ಎಂಬ ವಾದವೂ ಇದೆ. ಕಾಲದಿಂದ ಕಾಲಕ್ಕೆ ಸರ್ಕಾರಗಳು ಬಿಡುಗಡೆ ಮಾಡುವ ಪರಿಶಿಷ್ಟ ಬುಡಕಟ್ಟುಗಳ ಪಟ್ಟಿಯಲ್ಲಿ ತಮ್ಮ ತಮ್ಮ ಜಾತಿ ಅಥವಾ ಪಂಗಡಗಳು ಸೇರ್ಪಡೆಯಾಗಬೇಕೆಂದು ಚಳುವಳಿಗಳಲ್ಲಿ ತೊಡಗಿರುತ್ತಾರೆ. ಸಂವಿಧಾನ ಸೇರಿದಂತೆ ಯಾವುದೇ ದಾಖಲೆಯಲ್ಲಿ

'ಬುಡಕಟ್ಟು' ಎನ್ನುವ ಪದಕ್ಕೆ ಸಮರ್ಪಕ ಸ್ಪಷ್ಟ ವಿವರಣೆಯನ್ನು ನೀಡದಿರುವುದು ಸಹ ಸರಿಯಾದ ವ್ಯಾಖ್ಯಾನ ನೀಡಲು ಸಾಧ್ಯವಾಗುತ್ತಿಲ್ಲ, ಬುಡಕಟ್ಟು ಸಮುದಾಯದ ಪಟ್ಟಿ ವಿಭಿನ್ನಾರ್ಥಗಳಿಂದ ಬೆಳೆಯುತ್ತಲೇ ಇದೆ.

ಕಿಟಲ್‌ರವರು ತಮ್ಮ ಅರ್ಥಕೋಶದಲ್ಲಿ 'ಬುಡಕಟ್ಟು' ಎಂಬ ಶಬ್ದಕ್ಕೆ "ಕುಟುಂಬ" ಹಾಗೂ 'ಕುಲ' ಎಂಬ ಅರ್ಥ ನೀಡಿದ್ದಾರೆ. ಈ 'ಬುಡಕಟ್ಟು' ಎಂಬ ಪದವನ್ನು ಆಂಗ್ಲ ಭಾಷೆಯಲ್ಲಿ "ಟ್ರೈಬ್" ಎಂಬ ಪದಕ್ಕೆ ಸಮನಾರ್ಥವಾಗಿ ಬಳಸಲಾಗಿದೆ. 'ಟ್ರೈಬಸ್' ಎಂಬ ಪದವು ಲ್ಯಾಟಿನ್ ಭಾಷೆಯಿಂದ ಉತ್ಪತ್ತಿಯಾಗಿದೆ.

'ಲ್ಯಾಟಿನಂ' ಜಿಲ್ಲೆಯಲ್ಲಿ ನೆಲೆಸಿದ ಬುಡಕಟ್ಟುಗಳಿಗೆ ಸಂಬಂಧಿಸಿ ಗ್ರೀಕ್ ಮತ್ತು ರೋಮನ್ ಲೇಖಕರು ಪ್ರಪ್ರಥಮವಾಗಿ "ಟ್ರೈಬ್" ಎಂಬ ಪದ ಬಳಸಿರುವುದು ತಿಳಿಯುತ್ತದೆ. ಈ ಪದದ ಅರ್ಥ ಪ್ರಾಚೀನ ರೋಮ್ ಜನತೆಯ ರಾಜಕೀಯ ಭಾಗ ಅಥವಾ ಆಡಳಿತ ಪ್ರಾಂತ್ಯ ಅಥವಾ ಮಂಡಲ ಕಾಲಗತಿಯಲ್ಲಿ ಈ ಪದವನ್ನು ಸಮುದಾಯವಾಗಿ ರೂಪು ತಳೆಯುವ ಕುಟುಂಬಗಳ ಸಂಕಲನ ಎಂಬುದಾಗಿ ಪಾಶ್ಚಿಮಾತ್ಯ ಮಾನವಶಾಸ್ತ್ರಜ್ಞರು ಹಾಗೂ ಸಮಾಜಶಾಸ್ತ್ರಜ್ಞರು ಅರ್ಥೈಸಿದ್ದಾರೆ.

ರಿಸ್ಲೆ ಮತ್ತು ಎಲ್ವಿನ್ "ಬುಡಕಟ್ಟು ಜನರು ಮೂಲನಿವಾಸಿಗಳು" ಎಂದು ಕರೆದಿದ್ದಾರೆ. ಸರ್ ಭೈನ್ಸ್‌ರವರು "ಹಿಲ್ ಟ್ರೈಬ್ಸ್" ಎಂದು ಕರೆದಿದ್ದಾರೆ. ಡಾ.ಹಟ್ಟನ್‌ರವರು "ಪ್ರಿಮೆಟಿವ್ ಟ್ರೈಬ್" ಎಂದು ಕರೆದಿದ್ದಾರೆ. ಠಕ್ಕರ್ ಬಾಪಾರವರು "ಆದಿಪ್ರಜಾ" ಎಂದು ಕರೆದಿದ್ದಾರೆ. ಡಾ.ಜಿ.ಎಸ್.ಘುರ್ಯೆರವರು "ಹಿಂದುಳಿದ ಹಿಂದುಗಳು" ಎಂದು ಕರೆದಿದ್ದಾರೆ. ಅಂತರಾಷ್ಟ್ರೀಯ ಕಾರ್ಮಿಕ ಸಂಘವು "ದೇಶಿಯ ಜನವರ್ಗ" ಎಂಬುದಾಗಿ ಕರೆದಿದ್ದಾರೆ.೩

ಬುಡಕಟ್ಟು ಸಮುದಾಯದ ಬಗ್ಗೆ ಹಲವಾರು ವಿದ್ವಾಂಸರು, ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ತಮ್ಮ ಹೇಳಿಕೆಯನ್ನು ಅಭಿವ್ಯಕ್ತಿಸಿದ್ದಾರೆ.

ಎಸ್.ಸಿ.ದುಬೆರವರ ಪ್ರಕಾರ "ಬುಡಕಟ್ಟು ಸಮೂಹವು ವಿಶಾಲ ವ್ಯಾಪ್ತಿಯ ಸಾಂಸ್ಕೃತಿಕ ಲಕ್ಷಣಗಳನ್ನು ಸಾಮಾನ್ಯವಾಗಿ ಹಂಚಿಕೊಂಡಿರುವ ವಾಸ್ತವಿಕವಾದ ಇಲ್ಲವೇ ವಾಸ್ತವಿಕವೆಂದು ಪ್ರತೀತಿ ಇರುವ ವಂಶಾವಳಿಯನ್ನು ಹೊಂದಿದ ಮತ್ತು ಸಾಮೂಹಿಕ ಸಾರೂಪ್ಯವನ್ನು ಹೊಂದಿರುವ ಜನಾಂಗೀಯ ಇಲ್ಲವೇ ಮಾನವ ಬುಡಕಟ್ಟಾಗಿದೆ". ಎಂದು ವ್ಯಾಖ್ಯಾನಿಸುತ್ತಾರೆ. ಬೋಗಾರ್ಡಸ್‌ರವರ ಪ್ರಕಾರ "ರಕ್ಷಣೆಯ ಅವಶ್ಯಕತೆ, ರಕ್ತಸಂಬಂಧ, ಒಂದೇ ಧರ್ಮದ ನೆಲೆ" ಇವುಗಳ ಆಧಾರದ ಮೇಲೆ ಬುಡಕಟ್ಟು ಸಮುದಾಯದ ಸಮೂಹವೂ ನಿಂತಿದೆ. ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಫೇರ್ ಚೈಲ್ಡ್ "ಸಾಮಾನ್ಯವಾಗಿ ಅಸಂಖ್ಯಾತ ರಕ್ತ ಸಂಬಂಧಿಗಳನ್ನು, ತಂಡಗಳನ್ನು, ಗ್ರಾಮಗಳನ್ನು, ಅಥವಾ ಉಪಸಮೂಹಗಳನ್ನು, ನಿಶ್ಚಿತ ಭೂಪ್ರದೇಶವನ್ನು, ತನ್ನದೇ ಆದ ಖಚಿತ ಭಾಷೆಯನ್ನು, ವಿಶಿಷ್ಟವಾದ ಮತ್ತು ಸಮೈಕ್ಯವಾದ ಸಂಸ್ಕೃತಿಯನ್ನು ಮತ್ತು ಏಕರೂಪವಾದ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ಹೊಂದಿರುವ. ಹೊರಗಿನವರಿಗೂ ನಮಗೂ ವ್ಯತ್ಯಾಸವಿದೆ ಎಂಬ ಭಾವನೆಯುಳ್ಳ ಸಾಮಾಜಿಕ

ಸಮೂಹವನ್ನು ಆದಿವಾಸಿ ಸಮಾಜ" ಎಂದು ಹೇಳುತ್ತಾರೆ.

ಭಾರತದ ಇಂಪೀರಿಯಲ್ ಗೆಜೆಟಿಯರ್ ಪ್ರಕಾರ, 'ಒಂದೇ ನಾಮಾಂಕಿತವನ್ನು ಹೊಂದಿರುವ ಒಂದೇ ಭಾಷೆಯನ್ನು ಮಾತನಾಡುವ ಒಂದೇ ಸ್ಥಳದಲ್ಲಿ ವಾಸಮಾಡುವ ಅಥವಾ ವಾಸಿಸಲು ಉದ್ಯುಕ್ತವಾಗಿರುವ, ಈ ಹಿಂದೆ ಒಳಪಂಗಡ, ವಿವಾಹ ಪದ್ಧತಿಗೆ ಬದ್ಧವಾಗಿದ್ದಿರಬಹುದಾದರೂ ಈಗ ಹಾಗಿಲ್ಲದ ಕುಟುಂಬಗಳ ಸಮೂಹವನ್ನು ಆದಿವಾಸಿ ಸಮಾಜ' ಎಂದು ಗುರುತಿಸಲಾಗಿದೆ.

ಗಾಡಲಿಯರನ ಪ್ರಕಾರ, 'ಬುಡಕಟ್ಟು' ಎಂಬುದು ಏಕಕಾಲದಲ್ಲಿ ಒಂದು ವಿಧದ ಸಮಾಜವೂ ಹೌದು ಮತ್ತು ವಿಕಾಸವಾದದ ಒಂದು ಸ್ಥಿತಿಯೂ ಹೌದು.೪

ಬಾಬಾಸಾಹೇಬ್ ಡಾ.ಬಿ.ಆರ್‌ಅಂಬೇಡ್ಕರ್‌ರವರು ಪಾರಂಪರಿಕವಾಗಿ ಶೋಷಣೆಗೆ ಒಳಪಟ್ಟ ಸಮುದಾಯವನ್ನು ಹೀಗೆ ಪಟ್ಟಿ ಮಾಡುತ್ತಾರೆ. "ಇಲ್ಲಿನ ಪಂತ ಮಾನವ ಕುಲ ಮೂರು ಪಂಗಡಗಳಲ್ಲಿ ಹಂಚಿಕೊಂಡಿದೆ. ಮೊದಲನೆಯದು ಆದಿಮ ಜನಾಂಗವೆಂದು ಹೆಸರಾದ ಜನವರ್ಗ, ಎರಡನೆಯದು ಅಪರಾಧಿ ಜನಾಂಗವೆಂದು ಪಟ್ಟಿ ಮಾಡಿರುವ ಜಾತಿಗಳದ್ದು, ಮೂರನೆಯದು ಅಸ್ಪೃಶ್ಯರೆಂದು ಪರಿಗಣಿಸಲಾದವರ ವಿಶಿಷ್ಠ ಪಂಗಡ." ಎಂದು ವಿಂಗಡಿಸಿದ್ದಾರೆ.

"ಒಂದು ನಿರ್ದಿಷ್ಠ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು" ಎಂದು ಲಂಡನ್ನಿನ ರಾಯಲ್ ಆಂಥ್ರೋಪಾಲಜಿಕಲ್ ಇನ್‌ಸ್ಟಿಟ್ಯೂಷನ್ ವ್ಯಾಖ್ಯಾನಿಸಿದೆ.

'ಬುಡಕಟ್ಟು' ಶಬ್ದದ ಅರ್ಥವನ್ನು ಅತಿ ಸರಳವಾಗಿ ಎರಡು ವಾಕ್ಯಗಳಲ್ಲಿ ಸುಪ್ರಸಿದ್ಧ ಮಾನವಶಾಸ್ತ್ರಜ್ಞ ಕ್ರೋಬರ್ ಈ ರೀತಿ ವಿವರಿಸುತ್ತಾರೆ "ಬುಡಕಟ್ಟು ಸಮುದಾಯವು ಚಿಕ್ಕದಾಗಿ, ಒಂಟಿಯಾಗಿ ಹಾಗೂ ಒಂದಕ್ಕೊಂದು ಹೆಣೆದಂತಿರುವ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸಂಬಂಧಗಳನ್ನು ಅಳವಡಿಸಿಕೊಂಡು ವ್ಯವಸ್ಥಿತವಾಗಿ ರಚಿತವಾಗಿರುವ ಸಮಾಜ, ಎಂಬುದಾಗಿ ವ್ಯಾಖ್ಯಾನಿಸುತ್ತಾರೆ.೬

"ಪಿಡ್ಡಿಂಗ್‌ಟನ್ ಎಂಬ ಮಾನವಶಾಸ್ತ್ರಜ್ಞರು ವಿಶಾಲಾರ್ಥದಲ್ಲಿ ಬುಡಕಟ್ಟುಗಳ ಲಕ್ಷಣಗಳನ್ನು ಗುರುತಿಸುತ್ತಾರೆ ". ಚಿಕ್ಕ ಚಿಕ್ಕ ಸಾಮಾಜಿಕ ಗುಂಪುಗಳಾಗಿ ಹಂಚಿ,ತಾಂತ್ರಿಕತೆಯಲ್ಲಿ ಬಹು ಅಲ್ಪ ರೀತಿಯ ಸ್ಥರದಲ್ಲಿದ್ದು, ಸಂಬಂಧ, ಪ್ರಾದೇಶಿಕತೆ ಹಾಗೂ ಆರ್ಥಿಕ ವಿಷಯಗಳಲ್ಲಿ ವೈಶಿಷ್ಠತೆ ಹೊಂದಿದೆ, ಇಂತಹ ಗುಣಗಳಿಂದೊಡಗೂಡಿದ ಜನಾಂಗಗಳನ್ನು 'ಬುಡಕಟ್ಟು ಅಥವಾ ಪ್ರಾಚೀನ ಸಮುದಾಯಗಳೆಂದು' ಕರೆಯಬಹುದೆಂದು ಹೇಳುತ್ತಾರೆ.

ಎಹೆರೆನ್ ಪಿಯಲ್ಸ್ "ಇತರ ಜನಾಂಗದಿಂದ ಬೇರ್ಪಟ್ಟ ಒಂದು ಜನಾಂಗ ಇದು. ಒಂದು ಭೌಗೋಳಿಕ ಸ್ಥಳದಲ್ಲಿ ಒಂದೇ ಭಾಷೆಯನ್ನಾಡುವ, ಒಂದೇ ಸಂಪ್ರದಾಯ,

ಒಂದೇ ವೃತ್ತಿಯನ್ನು ಹೊಂದಿರುವ ಒಂದು ಸಮೂಹ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಆದಿವಾಸಿ(ಬುಡಕಟ್ಟು)ಗಳನ್ನು ಅನುಸೂಚಿತ ಪಂಗಡದವರೆಂದು ಕರೆದಿದ್ದಾರೆ. ೧೯೫೦ರ ಆದೇಶದ ಪ್ರಕಾರ "ಆದಿವಾಸಿ ಎಂದರೆ ಒಬ್ಬರನ್ನೊಬ್ಬರು ಅವಲಂಬಿಸಿರುವ ಅರ್ಥಿಕವಾಗಿ ಹಿಂದುಳಿದಿರುವ ಅವರ ವೃತ್ತಿಯಾದ ನಿಸರ್ಗದ ಸಂಪನ್ಮೂಲಗಳನ್ನು ಹಾಳು ಮಾಡುವ, ಅವರ ಆರ್ಥಿಕ ಸ್ಥಿತಿಗತಿಗಳು ಮುಂದುವರಿಯದೇ ಇರುವ ಭೌಗೋಳಿಕವಾಗಿ ಇತರರಿಂದ ಬೇರೆಯಾಗಿರುವ, ಒಂದೇ ಭಾಷೆಯನ್ನು ಹೊಂದಿರುವ ಒಂದೇ ರಾಜಕೀಯ ಸಂಸ್ಥೆಯನ್ನು ಹೊಂದಿರುವ, ಮತ್ತು ಸಂಪ್ರಾದಾಯಗಳನ್ನು ಮುಂದುವರಿಯಲಿಚ್ಛಿಸುವ ಸಮುದಾಯಗಳು" ಎಂಬುದಾಗಿ ಪರಿಚಯಿಸುತ್ತವೆ.

ಬುಡಕಟ್ಟು ಜಾತಿಯಾಗಿ ಹೇಗೆ ಪರಿವರ್ತಿತವಾಯಿತು ಎನ್ನುವುದರ ಬಗ್ಗೆ ನಿರ್ಮಲ್‌ಕುಮಾರ್ ಬೋಸ್ರವರು ಈ ರೀತಿಯ ವಿವರಣೆ ಕೊಡುತ್ತಾರೆ. "one night indeed say that tribes can be regarded as fully absored in the hindu told if brahmin priests perform brahmincal ceremonies for them during the three critical events of birth, marriage and death. if the latter are still celebrated by tribes rituals, then the communities are still true to their own faith in spite of the fact that, in the outer frings of their culture they paticipate in same of the ceremonies of their hindu nighbours".೨ ಈ ವಿವರಣೆಯ ಪ್ರಕಾರ ಬುಡಕಟ್ಟು ಜನ ಹುಟ್ಟು, ಮದುವೆ ಹಾಗೂ ಸಾವು ಈ ಸಂದರ್ಭಗಳಲ್ಲಿ ಬ್ರಾಹ್ಮಣ ಪೂಜಾರಿಗಳ ಪೌರೋಹಿತ್ಯಕ್ಕೆ ಅವಕಾಶ ಕೊಡದೇ ತಾವೇ ನಡೆಸಿಕೊಂಡು ಹೋಗುತ್ತಾರೆ. ಎಲ್ಲಿಯವರೆಗೆ ಈ ಪರಿಸ್ಥಿತಿ ಉಳಿದಿರುವುದೋ ಅಲ್ಲಯವರೆಗೆ ಬುಡಕಟ್ಟು ತನ್ನ ಮೂಲರೂಪದಲ್ಲಿ ಉಳಿದಿರುತ್ತದೆ. ಹೀಗಿದ್ದುಕೊಂಡು ಹಿಂದೂಗಳೊಡನೆ ಜಾತ್ರೆಗಳಲ್ಲಿ ಬುಡಕಟ್ಟು ಜನ ಬಾಗವಹಿಸುತ್ತಾರೆ. ಹಿಂದೂಗಳೊಡನೆ ಸೇರಿಯೂ ತನ್ನ ಸಂಪ್ರದಾಯಗಳನ್ನು ಬುಡಕಟ್ಟು ಉಳಿಸಿಕೊಂಡಿರುತ್ತದೆ. ಆದರೆ ಯಾವಾಗ ಹುಟ್ಟು, ಮದುವೆ ಹಾಗೂ ಸಾವು ಈ ಸಂದರ್ಭದಲ್ಲಿ ಬ್ರಾಹ್ಮಣರು ಪೌರೋಹಿತ್ಯಕ್ಕೆ ಅವಕಾಶ ಕೊಡುವುದೋ ಆಗ ಬುಡಕಟ್ಟು ತನ್ನ ಮೂಲ ಸ್ವರೂಪವನ್ನು, ಸ್ವಾತಂತ್ರ್ಯವನ್ನು ಕಳೆದುಕೊಂಡು ಜಾತಿಯಾಗಿ ಪರಿವರ್ತಿತವಾಗುತ್ತದೆ.

ಭಾರತದ ವರ್ಣ ವ್ಯವಸ್ಥೆಯ ಚರಿತ್ರೆಯಲ್ಲಿಯೂ ಸಂಭವಿಸಿರಬಹುದಾದ ಜನಾಂಗೀಯ ಮತ್ತು ಸಾಂಸ್ಕೃತಿಕ ಸಂಘರ್ಷಗಳಿಂದ ಜಾತಿ ಪದ್ಧತಿ ಬೆಳೆದಿರುವ ಅಂಶ ಮಹತ್ವದ ಅಕಾಡೆಮಿಕ್ ಅವಲೋಕನದ ಆಸಕ್ತಿಗೆ ಈಡು ಮಾಡಿದರು. ಇದೊಂದು ಅನಪೇಕ್ಷಣೀಯ ಬೆಳವಣಿಗೆಯಾಗಿ ಕಂಡು ಬರುತ್ತದೆ. ಇದರರ್ಥ ಬುಡಕಟ್ಟಿನ ಜನರು ನೆರೆ ಹೊರೆಯವರೊಂದಿಗೆ ಸೇರುವಂತಾಗಿ ಅವರಿಗಿಂತಲೂ ಕೆಳಹಂತದ ಜಾತಿಗಳಾಗಿ

ರೂಪು ತಳೆದು ನಿರಂತರ ಅಸ್ತಿತ್ವವನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

ಶ್ರೇಣೀಕೃತ ಸಮಾಜದ ರೂಡಿರಾಕ್ಷಸ ಪ್ರವೃತ್ತಿಯಿಂದ ಮುಕ್ತರಾಗಿರುವ ಬುಡಕಟ್ಟು ಜನರನ್ನು ಜಾತಿಯ ವ್ಯವಸ್ಥೆಯೊಳಗೆ ಬಂಧಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಜಾತಿ ವ್ಯವಸ್ಥೆಗಳು ತನ್ನ ಬಾಹುಗಳಿಂದ ಬಂದಿಸಲ್ಪಟ್ಟು ಅವರ ನಂಬಿಕೆ, ಆಚರಣೆ, ಆನಂದ, ಕಲೆಗಳನೆಲ್ಲಾ ಅಲುಗಾಡಿಸಲು ಹುನ್ನಾರವನ್ನು ಮಾಡುತ್ತಿರುವುದು ಇವುಗಳ ಮಧ್ಯೆ ಅವರು ಹೀನ ಸ್ಥಿತಿಗೆ ಬಂದಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

ಸಾವಿರಾರು ವರ್ಷಗಳಿಂದ ಮುಕ್ತರಾಗಿದ್ದ ಜನರನ್ನು ಸ್ಥಿತ್ಯಂತರಗೊಳಿಸುವ ಪ್ರಕ್ರಿಯೆ ನಡೆದಿರುವುದು ಸತ್ಯಕ್ಕೆ ದೂರವಾದ ವಿಚಾರವೇನೂ ಅಲ್ಲ. ಮೇಲಿನ ವ್ಯಾಖ್ಯಾನಗಳನ್ನು ಗಮನಿಸಿದಾಗ ತಮ್ಮದೇ ಆದ ವ್ಯವಸ್ಥೆಯಲ್ಲಿ ಏಕರೂಪದ ಸಾಮಾಜಿಕ ಸಂಘಟನೆಯ ನಿಯಮಗಳನ್ನು ಪಾಲಿಸುತ್ತಾ ಬಂದವರು ನಾಡಿನವರ ಕಾನೂನಿಗಿಂತ ಭಿನ್ನವಾಗಿ ತಮ್ಮದೇ, ಆಚಾರ-ವಿಚಾರ ಸಂಪ್ರದಾಯಗಳನ್ನು ನ್ಯಾಯ ನಿರ್ಣಯ ವ್ಯವಸ್ಥೆಯನ್ನು ಪಾಲಿಸುತ್ತಾ ಸಮಾನ ಉದ್ದೇಶಕ್ಕಾಗಿ ದುಡಿಯುವ ಜನರೇ 'ಬುಡಕಟ್ಟು' ಜನರಾಗಿದ್ದಾರೆ ಎಂಬ ಪರಿಕಲ್ಪನೆಯನ್ನು ಅಭಿವ್ಯಕ್ತಿಸಬಹುದು.

## ೨. ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯ ಪರಿಸರದ ಬುಡಕಟ್ಟು ಸಮುದಾಯಗಳ ಸ್ಥೂಲ ಪರಿಚಯ

ಕರ್ನಾಟಕ ರಾಜ್ಯದ ದಕ್ಷಿಣ ಪೂರ್ವ ತುದಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಿದೆ. ಈ ಜಿಲ್ಲೆಯು ಬೆಂಗಳೂರಿನ "ಆದಾಯ ವಿಭಾಗ"ಗಳಲ್ಲಿ ಒಂದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಗಳನ್ನು ಎಂಟು ತಾಲ್ಲೂಕುಗಳಾಗಿ ವಿಂಗಡಿಸಲಾಯಿತು. ಅವುಗಳೆಂದರೆ "ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ಮಾಗಡಿ, ರಾಮನಗರ, ಚನ್ನಪಟ್ಟಣ, ಕನಕಪುರ, ಈ ತಾಲ್ಲೂಕುಗಳು ಈ ಜಿಲ್ಲೆಯ ವ್ಯಾಪ್ತಿಗೆ ಬರುತ್ತವೆ. ಆಡಳಿತದ ನಿರ್ವಹಣೆಗಾಗಿ ಮುಂದೆ ಈ ತಾಲ್ಲೂಕುಗಳನ್ನು ಉಪ ವಿಭಾಗಗಳಾಗಿ ವಿಂಗಡಿಸಲಾಯಿತು. ಆ ಎರಡು ಆದಾಯ ಉಪ ವಿಭಾಗಗಳೆಂದರೆ:- ದೊಡ್ಡಬಳ್ಳಾಪುರ ಮತ್ತು ರಾಮನಗರಗಳಾಗಿದ್ದವು. ೨೦೦೮ರಲ್ಲಿ ರಾಮನಗರ ಜಿಲ್ಲಾ ಕೇಂದ್ರವಾಗಿ ಅಸ್ತಿತ್ವಕ್ಕೆ ಬಂದಿತ್ತು.

ದೊಡ್ಡಬಳ್ಳಾಪುರ ಆದಾಯ ಉಪವಿಭಾಗವು ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ಮತ್ತು ನೆಮಂಗಲ ತಾಲ್ಲೂಕುಗಳನ್ನು ಒಳಗೊಂಡಿತ್ತು. ರಾಮನಗರ ಆದಾಯ ಉಪ-ವಿಭಾಗವು ಜಿಲ್ಲಾ ಕೇಂದ್ರವಾಗಿ ರಾಮನಗರ, ಮಾಗಡಿ, ಕನಕಪುರ ಮತ್ತು ಚನ್ನಪಟ್ಟಣಗಳನ್ನು ಒಳಗೊಂಡಿತ್ತು. ೨೦೦೧ರ ಜನಗಣತಿಯ ಪ್ರಕಾರ ಈ ಜಿಲ್ಲೆಗಳ ಭೌಗೋಳಿಕ ಪ್ರದೇಶದ ವಿಸ್ತೀರ್ಣವು ೫೮೧೫ ಚ.ಕಿ.ಮೀ. ಈ ಜಿಲ್ಲೆಗಳಲ್ಲಿ ಸುಮಾರು ೧೮೭೩ ಹಳ್ಳಿಗಳು ಹಾಗೂ ಹತ್ತು ತಾಲ್ಲೂಕುಗಳಿದ್ದವು (Town). ಆದರೆ ೧೯೯೧ರ ಗಣತಿಯ ಪ್ರಕಾರ ೧೮೮೩ ಹಳ್ಳಿಗಳು ಹಾಗೂ ಒಂಭತ್ತು ತಾಲ್ಲೂಕುಗಳಿದ್ದವು.

೧೯೯೧-೨೦೦೧ರಲ್ಲಿ ಈ ಜಿಲ್ಲೆಯಲ್ಲಿ ಅನೇಕ ನ್ಯಾಯಿಕ ಬದಲಾವಣೆಗಳಾದವು. ದೊಡ್ಡಬಳ್ಳಾಪುರ ತಾಲ್ಲೂಕನ್ನು ಸರ್ಕಾರವು ಮುನಿಸಿಪಾಲ್ ಕಾರ್ಪೋರೇಷನ್ (munciple corporation) ಎಂದು ಘೋಷಿಸಿತು.

೨೦೦೧ರ ಗಣತಿಯಂತೆ ಶಾಸನಬದ್ಧವಲ್ಲದ ತಾಲ್ಲೂಕುಗಳನ್ನು ತಾಲ್ಲೂಕುಗಳ ಗುಂಪಿಗೆ ಸೇರಿಸಲಾಯಿತು. ದೊಡ್ಡಬಳ್ಳಾಪುರದ ಒಂದು ಭಾಗವಾದ ದುರ್ಗಾಜೋಗಿಹಳ್ಳಿ, ಆದಾಯದಹಳ್ಳಿ, ದೊಡ್ಡಬಳ್ಳಾಪುರದ ಮುನಿಸಿಪಾಲ್ ಕಾರ್ಪೋರೇಷನ್‌ಗೆ ಸೇರಿಸಲಾಯಿತು. ಮಿಕ್ಕುಳಿದ ಪ್ರದೇಶಗಳನ್ನು "ಗಣತಿ ತಾಲ್ಲೂಕುಗಳೆಂದು" ವರ್ಗೀಕರಿಸಲಾಯಿತು.

ಸರ್ಕಾರದ ಸೂಚನೆಯಂತೆ ಸೇವನಗರ ಮತ್ತು ಶಿವಲಿಂಗಪುರ ಎಂಬ ಎರಡು ಹಳ್ಳಿಗಳನ್ನು ಶಾಸನಬದ್ಧ ತಾಲ್ಲೂಕುಗಳಲ್ಲಿ ಸೇರಿಸಲಾಯಿತು. ಇದು ಸರ್ಕಾರದ ಸೂಚನೆಯ NO.RD/೧೩/LRD ೯೨, dated ೬. ೨. ೯೫ ಹಾಗೂ ಇನ್ನೆರಡು ಹಳ್ಳಿಗಳನ್ನು Mattur and Siddanayakanahalli(ಮಾತೂರು ಮತ್ತು ಸಿದ್ಧನಾಯಕನಹಳ್ಳಿಯಲ್ಲಿ) ದೊಡ್ಡಬಳ್ಳಾಪುರದ ಮುನಿಸಿಪಾಲ್ ಕಾರ್ಪೋರೇಷನಲ್ಲಿ ವಿಲೀನಗೊಳಿಸಲಾಯಿತು.

ಹೊಸಕೋಟೆ(R), ದಂಡುಪಾಳ್ಯ, ವರದಪುರ ಈ ಹಳ್ಳಿಗಳನ್ನು ಹೊಸಕೋಟೆ ತಾಲ್ಲೂಕಿನಲ್ಲಿ ವಿಲೀನಗೊಳಿಸಲಾಯಿತು. (ಇದನ್ನು ಹೊಸಕೋಟೆ ತಾಲ್ಲೂಕು ಮುನಿಸಿಪಾಲ್ ಕಾರ್ಪೋರೇಷನ್) ಎಂದು ಕರೆಯಲಾಯಿತು.

ವೈಡ್ ಸರ್ಕಾರವು (Wide government) ಕನಕಪುರ ತಾಲ್ಲೂಕಿನಲ್ಲಿ ಅಂಚಿನಪುರ ಎಂಬ ಹಳ್ಳಿಯನ್ನು ಹೊಸದಾಗಿ ಸೂಚಿಸಿತ್ತು. ಸೂಚನೆ NO RD ೧೩/LRD ೯೨, dated ೨೨. ೭. ೯೭. ಸೂಚನೆ ತಾಲ್ಲೂಕಿನ ಚಿತ್ತೋರೆ ಪಾಳ್ಯ ವೈಡ್ ಸರ್ಕಾರದ ಅಧಿಸೂಚನೆ RD ೧೩ LRD ೯೨, dated ೬. ೨. ೯೫ರಲ್ಲಿ ಹೊಸದಾಗಿ ಸೇರಿಸಲಾಯಿತು. ಕಸಬ್ ರಾಮನಗರಂ ಮತ್ತು ಕೋತಿಪುರ, ಅಮನಿಕೆರೆ ಎಂಬ ಎರಡು ಹಳ್ಳಿಗಳನ್ನು ಸೇರಿಸಿ ರಾಮನಗರದ ಮುನಿಸಿಪಾಲ್ ಕಾರ್ಪೋರೇಷನ್(CMC)ಯಲ್ಲಿ ಸೇರಿಸಲಾಯಿತು. ಈ ಬದಲಾವಣೆಯ ಸೂಚನೆಯು order NO. HUD ೩೩೧MLR ೯೫, dated ೧೧. ೧೦. ೯೫.

## ಭೌಗೋಳಿಕ ಲಕ್ಷಣಗಳು :

### ಸ್ಥಳ ಮತ್ತು ಗಾತ್ರ :

ಬೆಂಗಳೂರು ಗ್ರಾಮಾಂತರವು ಕರ್ನಾಟಕದ ದಕ್ಷಿಣ ಪೂರ್ವದ ಭಾಗಗಳಲ್ಲಿವೆ. ಬೆಂಗಳೂರು ಗ್ರಾಮಾಂತರವು ಸುಮಾರು ೧೩೭ ಕಿ.ಮೀ ದಿಂದ ದಕ್ಷಿಣದೆಡೆಗೆ ಇದೆ. ಪೂರ್ವದಿಂದ ಪಶ್ಚಿಮಕ್ಕೆ ಸಮಾರು ೯೭ ಕಿ.ಮೀ ಇದೆ. ಇದರ ಒಟ್ಟು ಭೌಗೋಳಿಕ

ವಿಸ್ತೀರ್ಣ ಸುಮಾರು ೫೮೧೫ ಚ.ಕಿ.ಮೀ ಇದು ಸಮುದ್ರ ಮಟ್ಟದಿಂದ ಸುಮಾರು ೫೦೦ರಿಂದ ೧೫೦ ಮೀಟರ್ ಎತ್ತರದಲ್ಲಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಉತ್ತರದಲ್ಲಿ ೧೨ ಡಿಗ್ರಿ, ೧೫ ನಿಮಿಷಗಳಿಂದ ೧೩ ಡಿಗ್ರಿಗಳು ೩೫ ನಿಮಿಷಗಳಲ್ಲಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ, ತುಮಕೂರು ಮತ್ತು ಕೋಲಾರದ ಉತ್ತರಕ್ಕಿದೆ. ಮಂಡ್ಯ ಹಾಗೂ ಚಾಮರಾಜನಗರ ಜಿಲ್ಲೆಗಳು ದಕ್ಷಿಣಕ್ಕಿದೆ. ಹಾಗೂ ತಮಿಳುನಾಡು ರಾಜ್ಯವು ಕೋಲಾರದ ಪೂರ್ವಕ್ಕೆ ಹಾಗೂ ತುಮಕೂರು ಮತ್ತು ಮಂಡ್ಯ ಜಿಲ್ಲೆಗಳ ಪಶ್ಚಿಮಕ್ಕೆ ಇದೆ.

**ಜಲಸಂಪನ್ಮೂಲ :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಮುಖ ನದಿಗಳು ಉತ್ತರದಿಂದ ದಕ್ಷಿಣದೆಡೆ ಇವೆ. ಅರ್ಕಾವತಿ, ಕಣ್ವ ಮತ್ತು ದಕ್ಷಿಣ ಪಿನಾಕಿನಿ ಇವು ಮುಖ್ಯವಾದ ನದಿಗಳಾಗಿವೆ. ಗಂಗಾ ನದಿಯು ಈ ಜಿಲ್ಲೆಯ ಪಶ್ಚಿಮ ಭಾಗದಲ್ಲಿದೆ.

ಅರ್ಕಾವತಿಯು ಕಾವೇರಿ ನದಿಯ ಮೂಲವಾಗಿದೆ. ಇದು ನಂದಿಬೆಟ್ಟಗಳ ಪಶ್ಚಿಮದೆಡೆಯಲ್ಲಿ ಹರಿಯುತ್ತವೆ. ದಕ್ಷಿಣ ಪಶ್ಚಿಮ ಭಾಗಗಳಲ್ಲಿ ಈ ನದಿಯು ದೊಡ್ಡಬಳ್ಳಾಪುರ, ನೆಲಮಂಗಲ ತಾಲ್ಲೂಕುಗಳಲ್ಲಿ ಕಾಣಬಹುದಾಗಿದೆ, ಮತ್ತು ಕುಮುದಾವತಿಯಿಂದ ಪಶ್ಚಿಮದ ತಿಪ್ಪಗೊಂಡನಹಳ್ಳಿಯಲ್ಲಿ ಸಂಚರಿಸಿ ಹಾಗೂ ಮಾಗಡಿ ತಾಲ್ಲೂಕಿನೆಲ್ಲೆಡೆ ಸಾವನದುರ್ಗ ಬೆಟ್ಟ, ರಾಮಗಿರಿ, ಶಿವನಗಿರಿಯಿಂದ ಹಿಡಿದು ರಾಮನಗರ ತಾಲ್ಲೂಕು ಹಾಗೂ ಕನಕಪುರ ತಾಲ್ಲೂಕುಗಳಲ್ಲಿ ಹರಿಯುತ್ತದೆ. ಇದರ ಉದ್ದವೆಂದರೆ ೧೯೯ ಕಿ.ಲೋ.ಮೀಟರ್.

ಕಣ್ವ ನದಿಯು ಚನ್ನಪಟ್ಟಣ ತಾಲ್ಲುಕಿನ ಮಾಲೂರುಗಳ ಬೆಟ್ಟ-ಗುಡ್ಡಗಳಲ್ಲಿ ಕಾಣಬಹುದು. ಅಬ್ಬೂರು ಸಮೀಪದಲ್ಲಿ ಈ ನದಿಗೆ ಅಡ್ಡಲಾಗಿ ಡ್ಯಾಮ್(Dam)ಗಳನ್ನು ನೀರಾವರಿಯ ಉದ್ದೇಶದಿಂದ ಕಟ್ಟಲಾಗಿದೆ.

ದಕ್ಷಿಣ ಪಿನಕಿನಿ ನದಿಯು "ಪಿನಕ" ಎಂಬ ಹೆಸರಿನಿಂದ ಬಂದಿದೆ. "ಪಿನಕ ಎಂಬುದು ಶಿವನ ಬಾಗಿದ ತಲೆಯ ಭಾಗವಾಗಿದೆ. ಈ ನದಿಯ ನಂದಿಬೆಟ್ಟ, ಚೆನ್ನಕೇಶವಬೆಟ್ಟಗಳಲ್ಲಿ ಚಲಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯೆಡೆಗೆ ಚಲಿಸುತ್ತದೆ. ಈ ನದಿಯು ದೇವನಹಳ್ಳಿ ಮತ್ತು ಹೊಸಕೋಟೆಯಲ್ಲಿ ಜಂಗಮಕೋಟೆ ಕೆರೆ ಮತ್ತು ಹೊಸಕೋಟೆ ಕೆರೆ ಎಂಬ ಎರಡು ಕೆರೆಗಳನ್ನು ಹೊಂದಿದೆ. ಇದರ ಒಟ್ಟು ಉದ್ದ ಬೆಂಗಳೂರು ಗ್ರಾಮಾಂತರ ಜಿಲ್ಲೆ ೬೦ಕಿ.ಲೋ.ಮೀಟರ್.

**ಮಳೆಯ ಪ್ರಮಾಣ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕುಗಳಿಂದ ಚನ್ನಪಟ್ಟಣ, ದೇವನಹಳ್ಳಿ, ದೊಡ್ಡಬಳ್ಳಾಪುರ, ಹೊಸಕೋಟೆ, ಕನಕಪುರ, ಮಾಗಡಿ, ನೆಲಮಂಗಲ ಮತ್ತು ರಾಮನಗರ ಪ್ರದೇಶಗಳಲ್ಲಿ ಒಣಮಿಶ್ರಿತ ವಾತಾವರಣವನ್ನು ಕಾಣಬಹುದಾಗಿದೆ.

ಜಿಲ್ಲೆಯಲ್ಲಿ ಸರಾಸರಿ ೭೪೪ c.m ದೊಡ್ಡಬಳ್ಳಾಪುರದಲ್ಲಿ ಮಳೆಯಾಗುತ್ತದೆ. ರಾಮನಗರ ತಾಲ್ಲೂಕಿನಲ್ಲಿ ಸರಾಸರಿ ೮೫೬ c.m ಮಳೆಯ ಪ್ರಮಾಣವಿದೆ. ಈ ಜಿಲ್ಲೆಯ ಮಧ್ಯಭಾಗಗಳಲ್ಲಿ ಹೆಚ್ಚು ಮಳೆಯಾಗುತ್ತದೆ. ರಾಮನಗರ, ಮಾಗಡಿ, ನೆಲಮಂಗಲ

ಮತ್ತು ಚನ್ನಪಟ್ಟಣ ಇವುಗಳಲ್ಲದೆ ಉತ್ತರ ಭಾಗದಲ್ಲಿ ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ದಕ್ಷಿಣ ಭಾಗದಲ್ಲಿ ಕನಕಪುರ ತಾಲ್ಲೂಕಿನಲ್ಲಿ ಮಳೆಯ ಪ್ರಮಾಣ ಕಡಿಮೆಯಾಗುತ್ತದೆ.

ಈ ತಾಲ್ಲೂಕುಗಳಲ್ಲಿ ವಾರ್ಷಿಕ ಮಳೆಯ ಪ್ರಮಾಣ ಶೇಕಡ ೧೯ರಿಂದ ೨೫. ದಕ್ಷಿಣ ಪಶ್ಚಿಮ ಮಾನ್ಸೂನ್ ಮಾರುತಗಳಿಂದ ಶೇಕಡ ೪೬ರಿಂದ ೫೪ ಮಳೆಯಾದರೆ ಉತ್ತರ, ಪೂರ್ವ, ಮಾನ್ಸೂನ್ ಮಾರುತಗಳಿಂದ ಶೇಕಡ ೨೭ರಿಂದ ೩೦ರಷ್ಟು ಮಳೆಯಾಗುತ್ತದೆ.

ದೊಡ್ಡಬಳ್ಳಾಪುರ ಹಾಗೂ ನೆಲಮಂಗಲ ತಾಲ್ಲೂಕಿನ ಮಳೆಯು ಕೋಎಫಿಷಿಯಂಟ್ ಆಫ್ ವೇರಿಯೇಷನ್ ಶೇಕಡ ೪೧ರಿಂದ ೫೧ ಹಾಗೂ ದಕ್ಷಿಣ, ಪಶ್ಚಿಮ ಮಾನ್ಸೂನ್ ಮಾರುತಗಳ ಮಳೆಯ ಪ್ರಮಾಣ ಶೇಕಡ ೩೩ರಿಂದ ೪೪ ರಾಮನಗರ ತಾಲ್ಲೂಕಿನಲ್ಲಾಗುತ್ತದೆ.

**ವಾತಾವರಣ:**

ಈ ಜಿಲ್ಲೆಯ ಹವಾಗುಣವು ಹಿತಕರವಾಗಿವೆ. ಇಲ್ಲಿನ ವಾತಾವರಣವು ಏಪ್ರಿಲ್ ತಿಂಗಳಿನಲ್ಲಿ ಬಹಳ ಉಷ್ಣಾಂಶದಿಂದ ಕೂಡಿದ್ದರೆ ಡಿಸೆಂಬರ್‌ನಲ್ಲಿ ಬಹಳ ಚಳಿಯಿಂದ ಕೂಡಿರುತ್ತದೆ. ಚಳಿಗಾಲದಲ್ಲಿ ಮೇ ಯಿಂದ ಡಿಸೆಂಬರ್‌ನಲ್ಲಿ ೨೦.೩ಡಿಗ್ರಿ ಸೆಲ್ಸಿಯಸ್‌ನಷ್ಟಿರುತ್ತದೆ. ಜನವರಿಯಿಂದ ಏಪ್ರಿಲ್‌ನಲ್ಲಿ ೨೬.೯ಡಿಗ್ರಿ ಸೆಲ್ಸಿಯಸ್‌ನಷ್ಟು ಉಷ್ಣಾಂಶವಿರುತ್ತದೆ.

ಬಿಸಿಲಿನ ದಿನಗಳಲ್ಲಿ ಗರಿಷ್ಠ ೩೩.೪ಡಿಗ್ರಿ ಸೆಲ್ಸಿಯಸ್‌ನಷ್ಟು ಉಷ್ಣಾಂಶವಿರುತ್ತದೆ. ದಿನನಿತ್ಯದ ಗರಿಷ್ಠ ಉಷ್ಣಾಂಶ ೨೧.೨ಡಿಗ್ರಿ ಸೆಲ್ಸಿಯಸ್‌ನಷ್ಟಿರುತ್ತದೆ. ಕನಿಷ್ಠ ೧೫.೩ಡಿಗ್ರಿ ಸೆಲ್ಸಿಯಸ್‌ನಷ್ಟಿರುತ್ತದೆ. ಚಳಿಗಾಲದಲ್ಲಿ ಗರಿಷ್ಠ ೨೫.೭ಡಿಗ್ರಿ ಸೆಲ್ಸಿಯಸ್‌ನಷ್ಟಿರುತ್ತದೆ.

ಈ ಜಿಲ್ಲೆಯಲ್ಲಿ ಸೆಪ್ಟಂಬರ್‌ನಿಂದ ಡಿಸೆಂಬರ್‌ನ ವರೆಗೆ ಮಳೆಯು ಹೆಚ್ಚಿರುತ್ತದೆ.

**ವಾಯುಗುಣ :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಾಯುಗುಣವು ಋತುಮಾನಕ್ಕೆ ತಕ್ಕಂತೆ ಸರಿಯಾಗಿ ಬೀಸುವ ಹವಾಗುಣವನ್ನು ಹೊಂದಿದೆ. ಮೇ ಯಿಂದ ಸೆಪ್ಟಂಬರ್ ತಿಂಗಳಲ್ಲಿ ವಾಯುಗುಣವು ಪಶ್ಚಿಮ–ದಕ್ಷಿಣಕ್ಕೆ ಹಾಗೆಯೇ ನವೆಂಬರ್‌ಯಿಂದ ಮಾರ್ಚ್ ತಿಂಗಳಲ್ಲಿ ವಾಯುಗುಣವು ಪೂರ್ವ–ಉತ್ತರ ದಿಕ್ಕಿನೆಡೆಗೆ ಬೀಸುವುದು. ಏಪ್ರಿಲ್‌ನಿಂದ ಅಕ್ಟೋಬರ್ ತಿಂಗಳಲ್ಲಿ ಸ್ಥಿತ್ಯಂತರ ಬದಲಾವಣೆ. ಈ ಬದಲಾವಣೆಯು ಪೂರ್ವ ದಿಕ್ಕಿನೆಡೆಯಿಂದ ಪಶ್ಚಿಮ ದಿಕ್ಕಿನೆಡೆಗೆ ವಾಯುಗುಣವು ಬದಲಾವಣೆಗೆ ಒಳಪಡುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಟ್ಟು ಅರಣ್ಯ ಪ್ರದೇಶದ ವಿಸ್ತೀರ್ಣ ೮೧,೨೬೮ಎಕ್ಟೇರ್. ಈ ಜಿಲ್ಲೆಯ ಅತ್ಯಂತ ಅರಣ್ಯ ಭಾಗವೆಂದರೆ ಮಾಗಡಿ ತಾಲ್ಲೂಕು ಮತ್ತು ಕನಕಪುರ ಇವು ಬೆಟ್ಟಗಳಿಂದ ಕೂಡಿದವುಗಳಾಗಿವೆ. ಈ ಪ್ರದೇಶಗಳ ಸುತ್ತಮುತ್ತ ಬಿದಿರು ಮರಗಳೇ ಹೆಚ್ಚಾಗಿದ್ದು ಇಲ್ಲಿ ಅತೀ ಎತ್ತರದ ಮರಗಳು ಅತೀ ವಿರಳವಾಗಿದೆ. ಪ್ರದೇಶಗಳಲ್ಲಿ ಕೃಷಿಗಾರಿಕೆಯು ಹೆಚ್ಚಾಗಿದ್ದು, ಅರಣ್ಯ ಪ್ರದೇಶವನ್ನು ಕೃಷಿ ಚಟುವಟಿಕೆಗಳಿಗಾಗಿ ಬಳಸಲಾಗುತ್ತದೆ.

**ನೀರಾವರಿ :**

ಈ ಜಿಲ್ಲೆಯಾದ್ಯಂತ ಗಂಗರ ಕಾಲದಲ್ಲಿ ನೀರಾವರಿಗಾಗಿ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಗಂಗರು ಡ್ಯಾಮ್‌ಗಳನ್ನು ನಿರ್ಮಿಸಲು ಅನೇಕ ಸವಲತ್ತು ಮಾಡಿಕೊಟ್ಟಿದ್ದರು.

ಈ ಜಿಲ್ಲೆಯೊಳಗೆ ಹೆಚ್ಚಿನ ನೀರಾವರಿ ಸೌಲಭ್ಯವಿರಲಿಲ್ಲ. ಕಾರಣ ಅಸಮರ್ಪಕ ನೀರಿನ ಸರಬರಾಜಾಗುತ್ತಿದ್ದದ್ದು ಈ ಜಿಲ್ಲೆಯಾದ್ಯಂತ ನೀರಾವರಿ ಪ್ರಮಾಣವು ಸ್ವಲ್ಪ ಕಡಿಮೆಯೇ ಆಗಿರುತಿತ್ತು.

೧೯೪೬ರಲ್ಲಿ "ಕಣ್ವ" ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಲಾಯಿತು. ನೀರಾವರಿಯನ್ನು ಅಭಿವೃದ್ಧಿ ಪಡಿಸಲೆಂದು ಈ "ಕಣ್ವ" ಯೋಜನೆಯು ಚನ್ನಪಟ್ಟಣ ತಾಲ್ಲೂಕಿನ ಸುಮಾರು ೨೦೨೪ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸಿತು.

೧೯೫೧ರಲ್ಲಿ ಬೈರಮಂಗಲ ಕಾಲುವೆಯನ್ನು ನೀರಾವರಿಯ ಸೌಲಭ್ಯದ ಉದ್ದೇಶಕ್ಕಾಗಿ ಕಟ್ಟಲಾಯಿತು. ಈ ಯೋಜನೆಯು ಕನಕಪುರದ ಸುಮಾರು ೧,೬೦೦ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸಿತು. ಆದರೂ ಕೂಡ ಈ ಜಿಲ್ಲೆಗಳಾದ್ಯಂತ ನೀರಾವರಿ ಸೌಲಭ್ಯವು ಕಡಿಮೆ ಎನಿಸಿತು. ಆದ್ದರಿಂದ ಕರ್ನಾಟಕ ಸರ್ಕಾರವು ಮೊದಲ ಬಾರಿಗೆ "ಮಂಚನಬೆಲೆ" ಡ್ಯಾಮ್ ಯೋಜನೆಯನ್ನು ಹಾಕಲಾಯಿತು. ಇದು ಅರ್ಕಾವತಿನದಿ ಹಾಗೂ ಕಾವೇರಿನದಿಯ ನೀರನ್ನು ಹೊಂದಿದ್ದು ಇದರಿಂದ ಮಾಗಡಿ ತಾಲ್ಲೂಕಿನ ಸಮೀಪದ ಹಳ್ಳಿಗಳಿಗೆ ಮಾತ್ರ ನೀರಾವರಿ ಸೌಲಭ್ಯ ಒದಗಿಸಲಾಯಿತು. ನಂತರ 'ಅರ್ಕಾವತಿನದಿ' ಯೋಜನೆಯನ್ನು ಕರ್ನಾಟಕ ಸರ್ಕಾರವು ಜಾರಿಗೊಳಿಸಿತು. ಇದರ ಮೂಲ ಉದ್ದೇಶವೆಂದರೆ ಕನಕಪುರ ತಾಲ್ಲೂಕಿನ ಸುತ್ತ-ಮುತ್ತ ಹಳ್ಳಿಗಳಿಗೆ ನೀರಾವರಿ ಸೌಲಭ್ಯವನ್ನು ಒದಗಿಸಲಾಯಿತು. ೧೯೮೪ರಲ್ಲಿ ಈ ಯೋಜನೆಯು ಕಾರ್ಯರೂಪಕ್ಕೆ ಬಂದು ಸುಮಾರು ೬,೨೩೨ ಹಳ್ಳಿಗಳಿಗೆ ನೀರಾವರಿ ಸೌಲಭ್ಯ ಒದಗಿಸಿತು. ಹಾಗೂ ೧೩,೬೨೧ಹೆಕ್ಟೇರ್ ಪ್ರದೇಶದಲ್ಲಿ ಸುಮಾರು ೪೨.೦ಶೇಕಡದಷ್ಟು ಬೋರ್‌ವೆಲ್‌ಗಳನ್ನು ಕೊರೆಸಲಾಯಿತು. ೧೦.೫ಶೇಕಡದಷ್ಟು ಬೋರ್‌ವೆಲ್‌ಗಳನ್ನು ಚನ್ನಪಟ್ಟಣ ತಾಲ್ಲೂಕಿನಲ್ಲಿ ಕೊರೆಸಲಾಯಿತು. ಇದು ಚನ್ನಪಟ್ಟಣ ತಾಲ್ಲೂಕಿನ ನೀರಾವರಿಗೆ ಮೂಲ ಸಂಪನ್ಮೂಲವಾಯಿತು.

ಚನ್ನಪಟ್ಟಣ ತಾಲ್ಲೂಕು, ಮದ್ದೂರು, ಮಳವಳ್ಳಿ, ತಾಲ್ಲೋಕುಗಳಲ್ಲಿ ೪,೦೪೫ಹೆಕ್ಟೇರ್ ಪ್ರದೇಶಗಳಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲಾಯಿತು.

**ನೈಸರ್ಗಿಕ ಸಂಪತ್ತು :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹೆಚ್ಚಾಗಿ ಅದಿರು ಸಂಪನ್ಮೂಲಗಳನ್ನು ಒಳಗೊಂಡಿಲ್ಲ. ಈ ಜಿಲ್ಲೆಯಲ್ಲಿ ಕಂಡು ಬರುವ ಮುಖ್ಯಾವಾದ ಅದಿರು ಸಂಪನ್ಮೂಲಗಳೆಂದರೆ 'ಆಸ್‌ಬೆಸ್ಟೋಸ್'(Asbestos), 'ಕ್ಲೇಪ್ಸ್'(claps). 'ಗಾರ್ನೆಟ್'(Garnet), 'ಲೈಮ್ ಸ್ಟೋನ್'(Lime stone), 'ಆರ್ಚೆ'(Arche). 'ಕ್ವಾರ್ಟ್ಸ್'(Quartz) ಮತ್ತು 'ಬಿಲ್ಡಿಂಗ್ ಸ್ಟೋನ್ಸ್(Building stone).

ಚೀನಾ ದೇಶವು ನೆಲಮಂಗಲ, ದೊಡ್ಡಬಳ್ಳಾಪುರ, ಹೊಸಕೋಟೆ ಮತ್ತು

ರಾಮನಗರ ತಾಲ್ಲೂಕುಗಳಲ್ಲಿರುವ ಅದಿರು ಸಂಪನ್ಮೂಲಗಳನ್ನು ಗುರುತಿಸಿ ತನ್ನ ಉತ್ಪಾದನೆಗೆ ಬಳಸಿಕೊಳ್ಳುತ್ತಿದೆ. ರಾಮನಗರ ತಾಲ್ಲೂಕಿನ 'ಬಿಡದಿ' ಬಳಿ ಹೆಚ್ಚಾಗಿ ಅಭ್ರಕ ಸಂಪನ್ಮೂಲಗಳನ್ನು ಕಾಣಬಹುದಾಗಿದೆ.

**ಪ್ರಾಣಿಗಳು :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ್ಯಂತ ಕೆಲವು ಹಸುಗಳು, ಎತ್ತುಗಳು, ಎಮ್ಮೆಗಳು, ಕುರಿಗಳು, ಮೇಕೆಗಳು, ಹಂದಿಗಳು, ಮೊಲಗಳು ಮತ್ತು ನಾಯಿಗಳನ್ನು ಮಾತ್ರ ಹೆಚ್ಚಾಗಿ ಕಾಣಬಹುದಾಗಿದೆ. ಈ ಜಿಲ್ಲೆಯ ಒಟ್ಟು ಪ್ರಾಣಿ ಸಂಪನ್ಮೂಲ ೧,೨೮೪,೦೦೦.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವರ್ಷಕ್ಕೆ ಸುಮಾರು ೨೬೭ಸಾವಿರ ಟನ್‌ಗಳಷ್ಟು ಹಾಲನ್ನು ಉತ್ಪಾದಿಸಲಾಗುತ್ತದೆ. ಹಾಗೂ ಸುಮಾರು ೩,೧೬೦ಲಕ್ಷಗಳಷ್ಟು ಮೊಟ್ಟೆಯನ್ನು ಉತ್ಪಾದಿಸಲಾಗುತ್ತದೆ. ಮೊಟ್ಟೆ ಉತ್ಪಾದನೆಯಲ್ಲಿ "ಪ್ರಥಮ ಸ್ಥಾನ" ಪಡೆದಿದೆ. ಸುಮಾರು ೪,೯೯೦ ಟನ್‌ಗಳಷ್ಟು ಮಾಂಸವನ್ನು ಉತ್ಪಾದಿಸುತ್ತದೆ.

**ಮೀನುಗಾರಿಕೆ :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮೀನುಗಾರಿಕೆಯಲ್ಲಿ ಹೆಚ್ಚು ತೊಡಗಿಸಿಕೊಂಡಿಲ್ಲ. ಕೇವಲ "ಒಳನಾಡು ಮೀನುಗಾರಿಕೆಯನ್ನು" ಮಾತ್ರ ಒಳಗೊಂಡಿದೆ. ಕರ್ನಾಟಕ ಸರ್ಕಾರವು ಈ ಜಿಲ್ಲೆಯಾದ್ಯಂತ ಮೀನುಗಾರಿಕೆಯನ್ನು ಹೆಚ್ಚಿಸಲು "ಫಿಶ್‌ಟ್ಯಾಂಕ್"ಗಳನ್ನು ನಿರ್ಮಿಸಿ ಅದಕ್ಕೆ ಬೇಕಾದ ಸವಲತ್ತುಗಳನ್ನು ನೀಡಿದೆ. ಈ ಮೀನುಗಾರಿಕೆಯಲ್ಲಿ ಬಂಡವಾಳವನ್ನು ಸರ್ಕಾರವು ಅರ್ಧ ನೀಡಿದರೆ ಮೀನುಗಾರರು ಅರ್ಧ ನೀಡಬೇಕಾಗುತ್ತದೆ.ಹಾಗೂ ಮೀನುಗಾರರ ಸಹಕಾರ ಸಂಘಗಳನ್ನು ಸ್ಥಾಪಿಸಿದೆ.

**ಪ್ರಾಣಿಗಳ ಸೇವೆ :**

ಕರ್ನಾಟಕ ಪ್ರಾಣಿಗಳ ಆರೋಗ್ಯವನ್ನು ಕಾಪಾಡುವ ಸಲುವಾಗಿ ಬೆಂಗಳೂರು ಜಿಲ್ಲೆಯಾದ್ಯಂತ ಪ್ರಾಣಿಗಳ ಸೇವೆಯ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಪ್ರಾಣಿಗಳ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಂಚಾರಿ, ಆರೋಗ್ಯ ಆಸ್ಪತ್ರೆ, ಇವುಗಳಲ್ಲಿ ಪ್ರಾಣಿಗಳ ಆರೋಗ್ಯ ರಕ್ಷಣೆಗಾಗಿ ನೀಡಿರುವ ಸವಲತ್ತುಗಳಾಗಿವೆ.

**ಕೈಗಾರಿಕೆ :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ್ಯಂತ ಹೆಚ್ಚಾಗಿ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಕಾಣಬಹುದಾಗಿದೆ. ದೊಡ್ಡಬಳ್ಳಾಪುರ ಸಮೀಪದಲ್ಲಿ ಗಾರ್ಮೆಂಟ್ಸ್‌ಗಳನ್ನು ಹಾಗೂ ಬಟ್ಟೆ"ನೇಯುವ ಮಗ್ಗ"ಗಳನ್ನು ಹೆಚ್ಚಾಗಿ ಕಾಣಬಹುದಾಗಿದೆ. ಗಟ್ಟಿಪುರ ಸಮೀಪದಲ್ಲಿ ಉಕ್ಕು ತಯಾರಿಕಾ ಕಾರ್ಖಾನೆಗಳನ್ನು ಕಾಣಬಹುದಾಗಿದೆ. ಬಂಡೆಗಳನ್ನು ಸ್ಫೋಟಿಸಿ ಅಗತ್ಯವಾದ ಕಲ್ಲುಗಳನ್ನು ಉತ್ಪಾದಿಸುವಲ್ಲಿ ಮಾಗಡಿ ತಾಲ್ಲುಕಿನಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಚನ್ನಪಟ್ಟಣದ ತಾಲ್ಲೂಕಿನ ಅತೀ ಮುಖ್ಯ ಕೈಗಾರಿಕೆ ಎಂದರೆ ಉಕ್ಕು ತಂತಿಗಳ ಉತ್ಪಾದನೆ ಇದನ್ನು ಹೆಚ್ಚಾಗಿ ಸಂಗೀತ ಉಪಕರಣಗಳ ತಯಾರಿಕೆಯಲ್ಲಿ ಬಳಸಲಾಗುತ್ತದೆ. ರಾಮನಗರ ಜಿಲ್ಲೆಯಾದ್ಯಂತ ರೇಷ್ಮೆ

ಕಾರ್ಖಾನೆ, ಬಿದಿರುಗಳ ಕಾರ್ಖಾನೆ ಹಾಗೂ ಗುಡಿ ಕೈಗಾರಿಕೆಗಳು ಹೆಚ್ಚಾಗಿವೆ.

**ವ್ಯಾಪಾರ ಮತ್ತು ವಾಣಿಜ್ಯ :**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪಾರ ಮತ್ತು ವಾಣಿಜ್ಯ ಆರ್ಥಿಕ ಚಟುವಟಿಕೆಗಳು ಭಿನ್ನವಾಗಿದೆ. ಹಿಂದಿನ ದಿನಗಳಲ್ಲಿ ವ್ಯಾಪಾರ ಚಟುವಟಿಕೆಗಳು ಹಣಕಾಸುವುಳ್ಳವರ ನಿಯಂತ್ರಣದಲ್ಲಿರುತ್ತದೆ. ಇದರಿಂದ ಸಣ್ಣ-ಪುಟ್ಟ ವ್ಯಾಪಾರಗಾರರು ವ್ಯವಹಾರದಲ್ಲಿ ನಿಶಕ್ತರಾಗಿದ್ದರು. ಇದರ ನಿವಾರಣೆಗಾಗಿರಾಜ್ಯ ಸರ್ಕಾರವು "ಹಣಕಾಸು ನಿಗಮಗಳನ್ನು" ಪ್ರಾರಂಭಿಸಿತು. ಇದರ ಮೂಲ ಉದ್ದೇಶವೆಂದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ್ಯಂತ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳನ್ನು ವಿಸ್ತಾರಗೊಳಿಸುವುದಾಗಿತ್ತು.

೧೮೫೭ರಲ್ಲಿ ಮಾಗಡಿ ತಾಲ್ಲೂಕಿನಲ್ಲಿ "ರಂಗನಾಥ ಬ್ಯಾಂಕ್ ಲಿಮಿಟೆಡ್" ೧೮೯೫ರಲ್ಲಿ ದೇವನಹಳ್ಳಿಯಲ್ಲಿ " ಶ್ರೀ ಆದಿನಾರಾಯಣ ಸ್ವಾಮಿ ಬ್ಯಾಂಕು ಕೋ ಲಿಮಿಟೆಡ್", ೧೯೧೯ರಲ್ಲಿ ವರಿಗೆನಹಳ್ಳಿಯಲ್ಲಿ "ಧರ್ಮ ಸಹಾಯ ಅಭಿವೃದ್ಧಿ" ಬ್ಯಾಂಕನ್ನು ಸ್ಥಾಪಿಸಲಾಯಿತು. ಹಾಗೂ ೧೯೧೩ರಲ್ಲಿ "ಕರ್ನಾಟಕ ಮೈಸೂರು ಬ್ಯಾಂಕನ್ನು ಸ್ಥಾಪಿಸಲಾಯಿತು".

**ಸಾರಿಗೆ ಮತ್ತು ಸಂಪರ್ಕ:**

ಹಿಂದಿನ ರಸ್ತೆಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ್ಯಂತ ವ್ಯಾಪಾರ ವ್ಯವಹಾರಗಳಿಗೆ ಸಾಕಷ್ಟು ಸೌಲಭ್ಯಗಳಿರಲಿಲ್ಲ. ಆದರೆ ಹಿಂದಿನ ಪೂರ್ವ ಇತಿಹಾಸದಲ್ಲಿ ರಸ್ತೆಗಳ ನಿರ್ಮಾಣ ಚೆನ್ನಾಗಿಯೇ ಇತ್ತು. ೧೯ನೇ ಶತಮಾನದಿಂದೀಚೆಗೆ ವ್ಯಾಪಾರ ಹಾಗೂ ವ್ಯವಹಾರಗಳನ್ನು ಅಭಿವೃದ್ಧಿ ಪಡಿಸಲು ರಸ್ತೆಗಳ ನಿರ್ಮಾಣಕ್ಕೆ ಸಾಕಷ್ಟು ಒತ್ತು ನೀಡಲಾಯಿತು.

ರಸ್ತೆಗಳನ್ನು ಎರಡು ಭಾಗಗಳಾಗಿ ವಿಂಗಡಿಸಲಾಯಿತು. ರಾಜ್ಯ ಹೆದ್ದಾರಿಗಳು ಜಿಲ್ಲಾ ಹೆದ್ದಾರಿಗಳು, ಈ ವಿಂಗಡಣೆಗೆ ಮುಖ್ಯ ಕಾರಣವೆಂದರೆ ರಸ್ತೆಗಳ ನಿರ್ಮಾಣ ಮತ್ತು ನಿರ್ವಹಣೆ "೧೯೪೩ರ ನಾಗಪುರ ಯೋಜನೆಯಡಿಯಲ್ಲಿ ರಸ್ತೆಗಳನ್ನು ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳು, ಮುಖ್ಯ ಜಿಲ್ಲಾ ಹೆದ್ದಾರಿಗಳು, ಇತರೆ ಜಿಲ್ಲಾ ಹೆದ್ದಾರಿಗಳು ಹಳ್ಳಿ ರಸ್ತೆಗಳೆಂದು ವರ್ಗೀಕರಿಸಲಾಗಿತ್ತು. ತದನಂತರ ರಸ್ತೆಗಳನ್ನು ಟಿ.ಡಿ.ಪಿ ರಸ್ತೆಗಳು, ಅರಣ್ಯ ರಸ್ತೆಗಳು, ನೀರಾವರಿ ವಿಭಾಗದ ರಸ್ತೆಗಳು, ಮುನಿಸಿಪಾಲ್ ರಸ್ತೆಗಳು, ಪಂಚಾಯತ್ ರಸ್ತೆಗಳೆಂದು ವರ್ಗೀಕರಿಸಲಾಯಿತು.

ಈ ಜಿಲ್ಲೆಯ ಒಟ್ಟು ರಸ್ತೆಯ ವಿಸ್ತೀರ್ಣ ೬,೭೫೫ಕಿ,ಲೋ,ಮೀಟರ್‌ಗಳಷ್ಟು. ರಾಷ್ಟ್ರೀಯ ಹೆದ್ದಾರಿಗಳ ಉದ್ದ ೧೨೪ಕಿ,ಲೋ,ಮೀ ರಾಜ್ಯ ಹೆದ್ದಾರಿಗಳ ಉದ್ದ ೪೭೬ಕಿ,ಲೋ,ಮೀ ಮುಖ್ಯ ಜಿಲ್ಲಾ ಹೆದ್ದಾರಿಗಳ ಉದ್ದ ೧.೦೮೯ಕಿ,ಲೋ.ಮೀ, ಜಿಲ್ಲಾ ಹೆದ್ದಾರಿಗಳ ಉದ್ದ ೬೦ಕಿ,ಲೋ,ಮೀ ಹಳ್ಳಿ ರಸ್ತೆಗಳ ಉದ್ದ ೧,೪೩೧ಕಿ.ಲೋ.ಮೀ ಈ ಜಿಲ್ಲೆಯಲ್ಲಿ ಅರಣ್ಯ ರಸ್ತೆಗಳಲ್ಲಿ ಇಲ್ಲ. ಈ ಜಿಲ್ಲೆಯಾದ್ಯಂತ ಸಂಖ್ಯಾಶಾಸ್ತ್ರದ ಪ್ರಕಾರ '೧೨'

ಮುಖ್ಯ "ಮೇಲ್‌ಸೇತುವೆ"ಗಳಿವೆ.

ಸಾರಿಗೆ ವ್ಯವಸ್ಥೆಗಳನ್ನು ರಸ್ತೆಗಳಿಂದಲ್ಲದೆ, ರೈಲ್ವೆ ಸಂಪರ್ಕದಿಂದಲು ವ್ಯವಸ್ಥೆ ಮಾಡಲಾಗಿದೆ. ಈ ಜಿಲ್ಲೆಯಲ್ಲಿ ಮೊದಲ ರೈಲ್ವೆ ಮಾರ್ಗವನ್ನು ಮದ್ರಾಸ್-ನಿಂದ-ಬೆಂಗಳೂರಿಗೆ ನಿರ್ಮಿಸಲಾಯಿತು. ೧೮೬೪ ಆಗಸ್ಟ್ ತಿಂಗಳಿನಲ್ಲಿ ಕಾರ್ಯಾರಂಭವಾಯಿತು.

ಈ ಜಿಲ್ಲೆಯಾದ್ಯಂತ ೧೦೫ಕಿ.ಲೋ.ಮೀ ಉದ್ದವಿರುವ ರೈಲು ಮಾರ್ಗದಲ್ಲಿ ಹಾಗೂ ೨೨ ರೈಲ್ವೆ ನಿಲ್ದಾಣಗಳನ್ನು ನಿರ್ಮಿಸಲಾಗಿದೆ.

**ವಿದ್ಯುಚ್ಛಕ್ತಿ:**

ಕರ್ನಾಟಕ ರಾಜ್ಯವು ಭಾರತ ದೇಶದ ವಿದ್ಯುಚ್ಛಕ್ತಿಯಲ್ಲಿ ಹೆಮ್ಮೆಯ ಸ್ಥಾನವನ್ನು ಪಡೆದಿದೆ. K.P.T.C.L (Karnataka Power Transmission Corporation Ltd). ಇದು ಕರ್ನಾಟಕ ರಾಜ್ಯಾದ್ಯಂತ ವಿದ್ಯುಚ್ಛಕ್ತಿಯನ್ನು ಒದಗಿಸುವ ಕಾರ್ಯದಲ್ಲಿ ತೊಡಗಿದೆ.

ಈ ನಿಗಮವು ಕರ್ನಾಟಕದ ಹಳ್ಳಿಗಳಿಗೆ, ಗುಡ್ಡಗಾಡು ಪ್ರದೇಶಗಳಿಗೆ, ಗಿರಿಜನ ಪ್ರದೇಶಗಳಲ್ಲಿ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುಚ್ಛಕ್ತಿ ಒದಗಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ.

ಇದಲ್ಲದೆ ಹಳ್ಳಿಗಳಿಗೆ ವಿದ್ಯುಚ್ಛಕ್ತಿ ಪೂರೈಸುವ ದೃಷ್ಟಿಯಿಂದ ಸಾಮಾಜಿಕ ಯೋಜನೆಗಳಿಂದ "ಭಾಗ್ಯಜ್ಯೋತಿಯೋಜನೆ" ಮತ್ತು "ಕುಟೀರಜ್ಯೋತಿ ಯೋಜನೆ"ಗಳನ್ನು ಪ್ರಾರಂಭಿಸಿದೆ.

ಆಧುನಿಕತೆಯ ಪ್ರಭಾವದಿಂದ ನಗರೀಕರಣಗೊಂಡಂತಹ ಜಿಲ್ಲೆ ಬೆಂಗಳೂರು. ಇದರ ಆಸುಪಾಸಿನಲ್ಲಿ ಸುಮಾರು ೪೦-೬೦ ಕಿ.ಮೀಟರ್‌ಗಳ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ಇತ್ತೀಚೆಗೆ ಎರಡು ವಿಭಾಗಗಳಾಗಿ ವಿಭಜನೆಗೊಂಡಿದೆ. ರಾಮನಗರವು ನೂತನ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿದೆ. ಈ ಜಿಲ್ಲೆಯವ್ಯಾಪ್ತಿಗೆ ರಾಮನಗರ, ಚನ್ನಪಟ್ಟಣ, ಕನಕಪುರ, ಮಾಗಡಿ ತಾಲ್ಲೋಕುಗಳು ಒಳಪಟ್ಟಿವೆ, ಹಾಗೆಯೆ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ, ನೆಲಮಂಗಲ, ದೇವನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೋಕುಗಳು ಸೇರ್ಪಡೆಯಾಗಿದ್ದು, ಅಧ್ಯಯನದ ದೃಷ್ಠಿಯಿಂದ 'ರಾಮನಗರ ಜಿಲ್ಲೆ' ಹಾಗೂ 'ಬೆಂಗಳೂರುಗ್ರಾಮಾಂತರಜಿಲ್ಲೆ' ಎರಡನ್ನೂ 'ಬೆಂಗಳೂರು ಗ್ರಾಮಾಂತರ' ಎಂಬ ಶೀರ್ಷಿಕೆಯಲ್ಲಿ ಅಧ್ಯಯನವನ್ನು ಮುಂದುವರಿಸಲಾಗಿದೆ. ನನ್ನ ಅಧ್ಯಯನಕ್ಕೆ ಒಳಪಟ್ಟಿರುವ ಮೇಲ್ಕಂಡ ಪ್ರದೇಶಗಳು, ಬೆಟ್ಟಸಾಲುಗಳಿಂದ ಕೂಡಿದ್ದು, ಅರಣ್ಯ ಪ್ರದೇಶಗಳಿಂದ ಆವೃತವಾಗಿದೆ. ಈ ಪ್ರದೇಶದಲ್ಲಿ ಪ್ರಮುಖವಾಗಿ 'ಹಕ್ಕಿಪಿಕ್ಕಿ', ಇರುಳಿಗ, ಕಣಿಯನ್, ಕೋಟಾ, ಕುಡಿಯ, ಮಲೇರು, ಸೋಲಿಗರು ಎಂಬ ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ.

ಬುಡಕಟ್ಟು ಸಮುದಾಯದ ಅಧ್ಯಯನದ ಮೂಲಕ ಒಂದು ಸಮುದಾಯದ ಸಾಮಾಜಿಕ ಪರಿವರ್ತನೆಯ ವಿವಿಧ ಮುಖಗಳನ್ನು ಹಾಗೂ ಅಂತರ್ಗತವಾಗಿರುವ ವೈವಿಧ್ಯಮಯ ಜೀವನಾನುಭವಗಳನ್ನು ಅಧ್ಯಯನ ಮಾಡುವುದರಿಂದ ಇಡೀ ಸಮುದಾಯದ ಸಮಷ್ಠಿ ದೃಷ್ಠಿಕೋನಗಳೆಡೆ ಬೆಳಕು ಚೆಲ್ಲುವ ಸಾಧ್ಯತೆಗಳಿರುವುದರಿಂದ

ಈ ಪ್ರದೇಶದ ಬುಡಕಟ್ಟು ಸಮುದಾಯದ ಅಧ್ಯಯನವನ್ನು ಮಾಡಲಾಗಿದೆ.

ಬುಡಕಟ್ಟು ಸಮುದಾಯವನ್ನು ಕುರಿತು ಈಗಾಗಲೇ ಹಲವು ಅಧ್ಯಯನಗಳು ಕಂಡುಬರುತ್ತವೆ, ಆದರೂ ಈಪ್ರದೇಶದ ಹಕ್ಕಿಪಿಕ್ಕಿ, ಇರುಳಿಗ, ಸಮುದಾಯದ ಸಾಮಾಜಿಕ ಬದಲಾವಣೆ ಕುರಿತಾದ ವ್ಯಾಪಕವಾದ ಅಧ್ಯಯನವು ನಡೆಯದೆ ಇರುವುದರಿಂದ ಈ ಸಮುದಾಯದ ಅಧ್ಯಯನ ಮಾಡುವುದು ಔಚಿತ್ಯವೆನಿಸುತ್ತದೆ.

**ಇರುಳಿಗರು :**

ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ಇರುಳಿಗರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಕರ್ನಾಟಕ ರಾಜ್ಯದ ಬೆಂಗಳೂರು, ಕೋಲಾರ, ತುಮಕೂರು, ಚಾಮರಾಜನಗರ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಇವರು ವಾಸವಾಗಿರುವುದು ಕಂಡು ಬರುತ್ತದೆ. ಕರ್ನಾಟಕದಲ್ಲಿ ಇರುಳಿಗರ ಇರುವಿಕೆಯನ್ನು ಕುರಿತು ಡಾ.ಕೆ.ಕೆಂಪೇಗೌಡರು "Irulas is the name of the tribe with is found in the hilly regions of bangalore, mysore, coorg, tumukur & other district of karnataka. these iruligas are also found in many parts of Kerala, Tamilnadu & Andrapradesh in different names" ಎಂದು ಹೇಳುತ್ತಾರೆ.೮

ಇರುಳಿಗರನ್ನು 'ಇಲ್ಲಿಗರು'(Illigaru), 'ಇರುಳ'(Irula), 'ಇರುಳರ್'(Irular), 'ಇರುಳಿಗರ್'(Iruligar), 'ಕಾಡುಪೂಜಾರಿ'(Kadu poojari), 'ಕಸುಬ'(Kasuba) ಎಂದು ಕರೆಯುತ್ತಾರೆ.೯

ಇರುಳಿಗ ಎಂಬ ಪದವು 'ಇರುಳ' ಎಂಬ ಪದದಿಂದ ನಿಷ್ಪನ್ನವಾಗಿದೆ. 'ಇರುಳ್' ಎಂಬ ಪದಕ್ಕೆ ರಾತ್ರಿ, ಕತ್ತಲು, ಕಪ್ಪು ಎಂಬ ಅರ್ಥಗಳು ಕನ್ನಡ ನಿಘಂಟಿನಲ್ಲಿ ಇವೆ. ಇರುಳ>ಇರುಳಿಗ ಆಗಿರುವ ಸಾಧ್ಯತೆಗಳಿವೆ. ಅಲ್ಲದೆ ಈ ಸಮುದಾಯವು ಕಪ್ಪುವರ್ಣದವರಾಗಿರುವುದರಿಂದ ಈ ಪದವು ಬಂದಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

ಥರ್ಸ್ಟನ್ ಎಡ್ಗರ್ ಮತ್ತು ಹೆಚ್.ವಿ.ನಂಜುಂಡಯ್ಯನವರು 'ಇಲ್ಲಿಗ' ಎಂಬುದು 'ಇರುಳಿಗ' ಪದದ ವಿರೂಪ ಪದ ಎಂದಿದ್ದಾರೆ. ಇದು ಅಷ್ಟು ಸೂಕ್ತವಾದ ವಿಚಾರವೇನಲ್ಲ. ಆದರೆ ನಂಜುಂಡಯ್ಯನವರು 'ಇಲ್ಲಿಗರು' ಎಂದು ಕರೆದುಕೊಳ್ಳುವ ಜನರ ಆಚಾರ–ವಿಚಾರ, ಭಾಷೆ ಎಲ್ಲವನ್ನು ಗಮನಿಸಿ 'ಇರುಳಿಗರು' ಎಂದು ಸ್ಪಷ್ಟವಾಗಿ ಗುರುತಿಸಿದ್ದಾರೆ.೧೦

ಇರುಳರ ಭಾಷೆ ಕುರಿತು ಡಾ.ಹಂಪನಾಗರಾಜಯ್ಯ ಅವರು ತಮ್ಮ ದ್ರಾವಿಡ ಭಾಷಾ ವಿಜ್ಞಾನ ಕೃತಿಯಲ್ಲಿ ಹೇಳಿದ್ದಾರೆ. ಕರ್ನಾಟಕದ ಗಡಿಭಾಗದ ನೀಲಗಿರಿಯಲ್ಲಿ ಇರುಳಿಗ ಸಮುದಾಯದವರ ಭಾಷೆ ಇದ್ದು,ಇದನ್ನು ಉಪಭಾಷೆಯಾಗಿ ಪರಿಗಣಿಸದೆ ಒಂದು ಸ್ವತಂತ್ರ ಭಾಷೆಯಾಗಿ ಪರಿಗಣಿಸಬೇಕೆಂಬ ಸೂಚನೆಯಿದೆ. ಇರುಳ ಭಾಷೆಯನ್ನು ತಮಿಳು, ಮಲೆಯಾಳಂ, ಉಪಶಾಖೆಗೆ ಅಳವಡಿಸಲಾಗಿದೆ. ಕಮಿಲ್‌ಜ್ವೆಲೆಬಿಲ್ ಅವರು 'ಇರುಳ' ಎಂಬುದು ಒಂದು ಸ್ವತಂತ್ರ ದ್ರಾವಿಡ ಭಾಷೆ ಎಂದಿದ್ದಾರೆ.೧೧

ಮಾನವಶಾಸ್ತ್ರಜ್ಞರು ಹಾಗು ಬುಡಕಟ್ಟು ಅಧ್ಯಯನಕಾರರು ಇರುಳಿಗರ ಮೂಲವನ್ನು ಕುರಿತಂತೆ ತಮಿಳುನಾಡನ್ನು ಹೆಸರಿಸುತ್ತಾರೆ. ಆದರೆ ನಿಖರವಾಗಿ ಒಂದು ಸಮುದಾಯವನ್ನು ಇಂತಹ ಸೀಮಿತ ಪ್ರದೇಶದವರೆಂದು ಖಚಿತವಾಗಿ ಗುರುತಿಸುವುದು ಕಷ್ಟಕರವಾದದ್ದು. ವಿಚಾರವೇ ಮೂಲ ನಿವಾಸಿಗಳು ಯಾವಾಗಲೂ ಜಲಸಂಪನ್ಮೂಲಗಳು ನಿಸರ್ಗದತ್ತವಾಗಿ ಸಿಗುವಂತಹ ವಸ್ತುಗಳು ಎಲ್ಲಿ ಲಭ್ಯವೋ ಹಾಗೂ ದಟ್ಟವಾದ ಅರಣ್ಯಗಳು ಎಲ್ಲಿರುತ್ತದೋ, ಅಲ್ಲಿ ವಾಸ ಮಾಡುತ್ತಿದ್ದರು. ಏಕೆಂದರೆ ಅವರಿಗೆ ಬೇಕಾದಂತಹ ಗೆಡ್ಡೆ-ಗೆಣಸು, ಇತ್ಯಾದಿ ಆಹಾರ ಪದಾರ್ಥಗಳನ್ನು ಅವರು ಅನುಕೂಲಕರವಾದ ಪ್ರದೇಶದಲ್ಲಿ ನೆಲೆನಿಂತು ಹುಡುಕಿಕೊಳ್ಳುತ್ತಿದ್ದರು. ಅಲ್ಲದೆ ಬೇಟೆ ಇವರ ಜೀವನಾಡಿ ಆಗಿತ್ತು. ಆದುದರಿಂದ ಸಾಮೂಹಿಕವಾಗಿ ಬೇಟೆಯ ಮೂಲಕ ಆಹಾರವನ್ನು ಸಂಪಾದಿಸಿಕೊಂಡು ಜೀವನವನ್ನು ನಡೆಸುತ್ತಿದ್ದರು. ಆದರೆ ಈಗ ಅರಣ್ಯ ನಿಷೇದ ಕಾಯಿದೆ ಪರಿಣಾಮದಿಂದಾಗಿ ಬೆಟ್ಟ-ಗುಡ್ಡಗಳ ತಪ್ಪಲಿನಲ್ಲಿ ವಾಸಿಸುತ್ತಿದ್ದವರು, ಇಂದು ನಾಗರೀಕ ಸಮಾಜದಲ್ಲಿ ಗುರುತಿಸಿಕೊಳ್ಳುತ್ತಿರುವುದನ್ನು, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುರುತಿಸಲಾಗಿದೆ.

**ಐತಿಹ್ಯ :**

"ನಮ್ಮ ಜನಾಂಗದ ಮೂಲಪುರುಷ ಬೇಟೆಗಾರನೊಬ್ಬ ಕಾಡುಹಂದಿಗೆ ಬಾಣ ಬಿಡಲು ತಯಾರಾಗುತ್ತಾನೆ. ಆಗ ಆ ಹಂದಿಯು ತನ್ನ ಮರಿಗಳಿಗೆ ಹೇಳುತ್ತದೆ, "ಮಕ್ಕಳಾ, ಇನ್ನು ಒಂದಿನ ಒಪ್ಪತ್ನಲ್ಲಿ ಸಮುದ್ರ ಉಕ್ಕುತ್ತೆ," ಆಗ ಈ ಪ್ರಪಂಚ ಎಲ್ಲವೂ ಸರ್ವನಾಶವಾಗುತ್ತೆ, 'ಅದ್ಕೆ ಉಳಿದಿರೋಷ್ಟು ಸಮಯ ನೆಮ್ಮದಿಯಾಗಿರಿ; ಎನ್ನುತ್ತದೆ. ಆದರೆ ಬಾಣ ಹೂಡಲು ತಯಾರಾಗಿದ್ದ ಬೇಟೆಗಾರ, ಹಂಗೆ ಹಂದಿ ಮಾತು ಕೇಳ್ಸ್ಕೊತಾನೆ. ಆಟ ಆಡುತ್ತಿದ್ದ ಮರಿಗಳು "ಅಮ್ಮಾ ನಾವು ಬದುಕಬೇಕಾದರೆ ಏನ್ ಮಾಡಬೇಕು?" ಎನ್ನುತ್ತವೆ. ಈ ಮಾತಿಗೆ ತಾಯಿ ಹಂದಿ, ಒಂದ್ ದೊಡ್ಡ ಸೋರೆಕಾಯಿ ಬುರುಡೆಯನ್ನು ಹುಡುಕಿಕೊಂಡು, ಅದರೊಳಗಿನ ತಿರುಳನೆಲ್ಲಾ ತೆಗೆದುಬಿಟ್, ಒಂದಿಷ್ಟು ನಮಗೆ ಬೇಕಾದ ಆಹಾರ ತಗೊಂಡು ಒಳಗ್ ಸೇರ್ಕೊಂಡರೆ, ಅದಕ್ಕೆ ಒಂದು ಸ್ವಲ್ಪ ಜಾಗ ಕಾಣದೇ ಇರುವಂಗೆ ಜೇನಿನ ಮೇಣವನ್ನು ತೆಗೆದುಕೊಂಡು ಸಂದಿಗಳನ್ನು ಮುಚ್ಚಿಕೊಂಡರೆ ನಾವು ಬದುಕಬಹುದು, 'ಇಲ್ಲ ಅಂದ್ರೆ ಇಲ್ಲ', ಆದರೆ ನಮ್ಮಂತಹವರಿಗೆ ಇದು ಸಾಧ್ಯವಿಲ್ಲ ಎಂದು ಹೇಳುತ್ತದೆ. ಇದನ್ನು ಕೇಳ್ಸ್ಕೊಂಡ ಬೇಟೆಗಾರ ಮನೆಗೆ ಬಂದು ತನ್ನ ಮಗಳಿಗೆ, "ನೋಡವ್ವ, ಹಿಂಗೆ ಪ್ರಪಂಚದಲ್ಲಿ ಪ್ರಳಯ ಆದದಂತೆ", ನಾವು ಸೋರೆ ಬುರುಡೆಗೆ ನುಕ್ಕೊಂಡ್ರೆ ಬದ್ಕಬಹುದು. ಅದ್ಕೆ ನೀನ್ ವೋಗಿ ಅದನ್ನು ಹುಡುಕಿಕೊಂಡು ಬರೋ ಹೋಗು ಎಂದು ಹೇಳಿಕಳುಹಿಸುತ್ತಾನೆ. ಮಗಳು ಅಲ್ಲಿ ಇಲ್ಲಿ ಹುಡುಕಿ ಎಲ್ಲೂ ಕಾಣದೆ ಇದ್ದಾಗಾ ಒಬ್ಬ ಗೌಡ್ನ ಹಿತ್ತಲಲ್ಲಿ ಬೆಳೆದಿರುವ ಸೋರೆ ಬುರುಡೆನಾ ಕಂಡು ಕೇಳುತ್ತಾಳೆ. ಆಗ ಗೌಡ ನೋಡವ್ವ ಒಳಗಿರುವ ತಿರುಳನ್ನೆಲ್ಲಾ ಇಲ್ಲೆ ಇಟ್ಟು ಬುರುಡೆ ತಗೊಂಡು ಹೋಗು ಅನ್ತ ಅಂದರಂತೆ. ಆಗ ಆ ಹುಡ್ಗಿ ತಿರುಳನೆಲ್ಲಾ ತೆಗೆದ್ಕೊಟ್ಟು ಖಾಲಿ ಬುರುಡೆಯನ್ನು ಮನ್ಗೆ ತರುತ್ತಾಳೆ. ...ತಂದೆ ಮಗಳ್ ಇಬ್ಬರೂವೆ ಕಾಳು-ಕಡ್ಡಿ ತುಂಬಿಕೊಂಡು ಸೋರೆಬುರುಡೆವೊಳಕ್ಕೆ ಸೇರಕೊಂಡ್ರು. ಹಂದಿ ಹೇಳದಂಗೆ ಪ್ರಪಂಚದಲ್ಲಿ ಪ್ರಳಯ ಆಗುತ್ತೆ. ಸಮುದ್ರ ಉಕ್ಕಿ ಎಲ್ಲಾ ನಾಶವಾಗಿರುವುದನ್ನು ಪಾರ್ವತಿ

ಪರಮೇಶ ಸಂಚಾರ್ನ ಮಾಡುತ್ತಾ ನೋಡ್ತಾ ಬರುತ್ತಾರೆ. ಸಮುದ್ರ್ ಮೇಲೆ ಸೋರೆ ಬುರುಡೆ ಬಂದ್ ತೇಲ್ತಾ ಇರುತ್ತೆ. ಅದರೊಳಗೆ ಹೊಗೆ ಬರುತ್ತಾ ಇರುತ್ತೆ. ...ಅದ್ನ ನೋಡ್‌ದವ್ರು ತಮ್ಮ ರಥ ನಿಲ್ಲಿಸುತ್ತಾರೆ. ರಥನಿಲ್ಲ್‌ಸ್‌ಬುಟ್, ಸೋರೆಬುರುಡೆ ತೆಗೆದು ನೋಡಿದ್ರೆ, ತಂದೆ ಮಗಳು ಇರ್ತಾರೆ ! ನರಲೋಕವೆಲ್ಲಾ ಬರಿಲೋಕವಾಗಿರುವುದರಿಂದ, "ಈ ನರಲೋಕ ನಿಮ್ಮಿಂದಲೇ ಸೃಷ್ಠಿ ಆಗಲಿ", ಅನ್ತಾ ತಂದೆ ಮಗಳಿಗೆ ಮದ್ವೆ ಮಾಡುತ್ತಾರೆ. ಅವರಿಂದ ನೂರೊಂದು ಮಕ್ಕಳ್ ಹುಟ್ಟುತ್ತಾರೆ. ಹೀಗೆ ಬರಿಲೋಕ ಆಗಿದ್ದು ನಮ್ಮಿಂದ ಪುನಃ ಸೃಷ್ಠಿ ಆಯ್ತು.೧೨ ಎಂದು ಪೌರಾಣಿಕ ಹಿನ್ನೆಲೆಯುಳ್ಳ ಕಥೆಯನ್ನು ವಕ್ತೃಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೇಳಿದ್ದಾರೆ.

ತಮ್ಮ ಸಮುದಾಯದ ಮೂಲವನ್ನು ಕುರಿತು ವಕ್ತೃಗಳು ಹೇಳುವ ಮತ್ತೊಂದು ಪೌರಾಣಿಕ ಕತೆ ಹೀಗಿದೆ. "ನೂರೊಂದು ಮಕ್ಕಳು ತಮ್ಮ ತಮ್ಮ ಕಸುಬುಗಳನ್ನು ಮಾಡುತ್ತಿರುತ್ತಾರೆ. ಅವರನ್ನು ಕುಲಗಳಾಗಿ ವಿಂಗಡಿಸಲು ಪರಮೇಶ್ವರನೇ ಬರಬೇಕಾಯ್ತು" ನೂರೊಂದು ಮಕ್ಕಳ ತಂದೆಯನ್ನು ಕರೆದು, ಒಬ್ಬ ಒಬ್ಬರೂ ಯಾವ ಯಾವ ಕಾರ್ಯವನ್ನು ಮಾಡಬೇಕೆಂದು ಕೇಳುತ್ತಾರೆ. ಅವರು ಇಷ್ಟಪಡುವ ಕಸುಬಿನ ಆಧಾರದ ಮೇಲೆ, "ನೂರಾರು ಜಾತಿಗಳನ್ನು ಸೃಷ್ಠಿ ಮಾಡುತ್ತಾರೆ". ಆದರೆ ನೂರವೊಂದನೆಯವನನ್ನು ಗಮನಿಸಿರುವುದಿಲ್ಲ. ಈಗ ನನ್ನ್ ಕಸ್‌ಬು ಹೇಳ್ತಾರೆ.... ಆಮೇಲೆ ಹೇಳ್ತಾರೆ.... ಅನ್ತ ಕಾಯುತ್ತಿದ್ದ....ನಮ್ಮವನು, ಶಿವನು ಹಿಂದಿರುಗುವ ಸಂದರ್ಭದಲ್ಲಿ ಗುಂಪಿನ ನಾಯಕರು ಇನ್ಯಾರಾದರು ಇದ್ದಾರೆಯೇ ಎಂದಾಗ ಸ್ವಾಮಿ ನಾನೊಬ್ಬ ಉಳ್‌ಕೊಂಡವ್ನಿ, ಆದರೆ ನನಗೆ ಜಾತಿಯಾವುದೆಂದು ಅಪ್ಪಣೆಯಾಗಲಿಲ್ಲ ಎಂದಾಗ ನೋಡಪ್ಪ ನಿಮ್ಮ ಗುಂಪಿನ ನಾಯಕ ಇನ್ಯಾರು ಇಲ್ಲಾ ಎಂದು ಹೇಳಿದ್ದಾನೆ. ಆದುದರಿಂದ ಯಾವುದೇ ಜಾತಿಯು ಇಲ್ಲದ "ಇಲ್ಲಗ" ಎಂದು ತಾನು ಹೊಂಟೇ ಹೋದ.೧೩

ವಕ್ತೃಗಳು ಹೇಳುವ ಮಾಹಿತಿಯನ್ನು ಅವಲೋಕಿಸಿದಾಗ 'ಇಲ್ಲಗ' ಎಂಬ ರೂಪ ಪರಿವರ್ತನೆಯಾಗಿ 'ಇಲ್ಲಿಗ', 'ಇರುಳಿಗ' ಎಂದಾಗಿದೆ ಎಂಬುದನ್ನು ಮೇಲಿನ ಅಂಶಗಳು ಸ್ಪಷ್ಟಪಡಿಸುವುದರ ಮೂಲಕ 'ಇಲ್ಲಗ' ಎನ್ನುವುದು 'ಇರುಳಿಗ' ಆಗಿರುವುದಕ್ಕೆ ಮತಷ್ಟು ಸ್ಪಷ್ಟೀಕರಣವನ್ನು ಒದಗಿಸುತ್ತವೆ.

ಹೀಗೆ 'ಇರುಳಿಗ' ಸಮುದಾಯವು ತಮ್ಮ ಮೂಲದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತದೆ. ಇರುಳಿಗರ ಬಗ್ಗೆ ಕ್ಷೇತ್ರಕಾರ್ಯ ಮಾಡಿದಂತಹ ಸಂದರ್ಭದಲ್ಲಿ ಅವರು ಪ್ರಮುಖವಾಗಿ ತಮ್ಮ ತಮ್ಮ ಮೂಲದ ಬಗ್ಗೆ ಸಾಂಸ್ಕೃತಿಕ ನಾಯಕರನ್ನು ಸಮೀಕರಿಸುವುದರೊಂದಿಗೆ ಸಂಬಂಧವನ್ನು ಕಲ್ಪಿಸಿಕೊಳ್ಳುತ್ತಾರೆ. ಅಂತಹ ಪೌರಾಣಿಕ ಹಿನ್ನೆಲೆಯುಳ್ಳ ಕತೆಯೊಂದು ಹೀಗಿದೆ.

"ಮಲ್ಯೆಯ ಮಹದೇಶ್ವರನು ಬಂಜೆಯ ಬೇಗೆಯನ್ನು ನೀಗಿಸಲು ಶಿವಶರಣೆ ಶಂಕಮ್ಮನಿಗೆ ಎರಡು ಮಕ್ಕಳನ್ನು ನೀಡುವ ವರವನ್ನು ಕರುಣಿಸುತ್ತಾನೆ. ಅವರೆ ಕಾರಯ್ಯ, ಬಿಲ್ಲಯ್ಯ. ಮುಂದೆ ಇವರು ಮಹಾದೇಶ್ವರನ ಅನುಯಾಯಿಗಳಾಗುತ್ತಾರೆ ಎಂಬುದನ್ನು ಮಲ್ಯೆಯ ಮಹದೇಶ್ವರ ಕಾವ್ಯದಲ್ಲಿ ಪ್ರಸ್ತಾಪಿಸುತ್ತಾರೆ. ಇದಕ್ಕೆ ಸಂಬಂಧಪಟ್ಟಂತೆ ಇರುಳಿಗರಲ್ಲಿ ಒಂದು ಐತಿಹ್ಯವಿದೆ. "ನೀಲಯ್ಯ ಕಾಡಿನಲ್ಲಿ ಹೆಜ್ಜೇನು

ಬ್ಯಾವೆಗೆ ಅಂತ ಹೋಗಿ ಬರಬೇಕಾದರೆ ಸಂಕಮ್ಮನಿಗೆ ಮಕ್ಕಳಾಗಿರುತ್ತದೆ. ಇದನ್ನು ಕಂಡ ನೀಲಯ್ಯ ಸಂಕಮ್ಮನಿಗೆ ರೋದನೆ ಕೊಡ್ತಾ ಇರ್ತಾನೆ. ತಾಯಿಗ್ ಕೊಡುತ್ತಿದ್ದ ಹಿಂಸೆ ನೋಡಲಾರದೆ ಕಾರಯ್ಯ ಬಿಲ್ಲಯ್ಯ ಕಲ್ಲು ಬಿಲ್ಲು ಹಿಡಿದು ತಂದೆ ವಿರುದ್ಧ ಹೋರಾಡುತ್ತಾರೆ. ಕಲ್ಲು ಹಿಡ್ದ್ ಹೋರಾಡಿದ ಕಾರಯ್ಯ ಸೋಲಿಗರ ಸಮುದಾಯವಾದರೆ , ಬಿಲ್ ಹಿಡಿದ್ ಹೋರಾಟ ಮಾಡಿದ ಬಿಲ್ಲಯ್ಯನ ಕುಲದವರು ಇರುಳಿಗರಾದರು, ಎಂದು ತಮ್ಮ ಸಾಂಸ್ಕೃತಿಕ ನಾಯಕರ ಬಗ್ಗೆ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ".೧೪

"ಕಾರಯ್ಯ, ಬಿಲ್ಲಯ್ಯ ದನ ಮೇಯಿಸಕ್ಕೆ ಕಾಡಿಗೆ ಹೋಗ್ತಾ ಇರ್ತಾರೆ, ಬಿಲ್ಲಯ್ಯ ಅಡಿವಿ ಅರಣ್ಯದಲ್ಲಿ ಇರ್ತಾನೆ. ಮಾದೇಶ್ವರ ಬಂದ್‌ಬಿಟ್ಟು "ಏ ಬಿಲ್ಲಯ್ಯ" ಅನ್ತಾರೆ, ಸ್ವಾಮಿ ಅನ್ತ ದೂರದಲ್ಲಿ "ಸ್ವಾಮಿ ಇದೋ ಬಂದೆ", ಇಲ್ಲೆ ಅವ್ನಿ, ಅನ್ತಾರೆ, ಮಾದೇಸ್ವರನಿಗೆ ಕೋಪ ಬಂದ್ ಬಿಟ್ಟು "ನೋಡ್ ಬಿಲ್ಲಯ್ಯ ನೀನ್ ಕರೆದು ಕೂಡಲೇ ಬರ್‌ಬೇಕು, ಇಲ್ಲದಿದ್ರೆ ನನ್ನ ತಾವ ಇರೋದೆ ಬ್ಯಾಡ" ಅನ್ತ ಅಪ್ಪಣೆ ಕೊಡ್ತಾರೆ. ಆಗೇ ಆಗಲೀ ಸ್ವಾಮಿ ಅನ್ತಾನೆ, ಆಗ ಎತ್ತಿನ ಇರುಳಲ್ಲಿ ಬಿಲ್ಲಯ್ಯ ಸೇರಕೊತಾನೆ. ಮತ್ತೆ ಪುನಃ ಕರೆದಾಗ ಅಲ್ಲಿಂದಲೇ ಸ್ವಾಮಿ ಅನ್ತಾನೆ " ಆಹಾ! ಎಂಥ ಭಕ್ತ ನೀನ್ ಇವತ್ತಿನಿಂದ ಇರುಳಿನಲ್ಲಿ ವಾಸ ಮಾಡುವ ಇರುಳಿಗ ಕಾಣಯ್ಯ !ಮೊದಲನೇ ಪೂಜೆ ನಿನಗೆ, ಎರಡನೆ ಪೂಜೆ ನನಗೆ, ಮೂರನೆ ಪೂಜೆ ಕಳ್ಳಕಾಕರಿಗೆ ಎಂದು ಆರ್ಶಿವಾದ ಮಾಡಿರುವುದರಿಂದ ನಮ್ಮನ್ನು ಇರುಳಿಗರು ಎನ್ನುತ್ತಾರೆ."೧೫

ಸಂಕಮ್ಮನ ವಿಷಯವನ್ನು ತಿಳಿ ಹೇಳುವ ಮಲೇಮಹದೇಶ್ವರ ಕಾವ್ಯದಲ್ಲಿ ಸಾಂಸ್ಕೃತಿಕ ವೀರರೆಂದೆ ಕರೆಯಲ್ಪಡುವ ಕಾರಯ್ಯ, ಬಿಲ್ಲಯ್ಯರ ವಿಚಾರಗಳು ವಿಪುಲವಾಗಿ ಬರುತ್ತವೆ. ಕಾರಯ್ಯ ಬಿಲ್ಲಯ್ಯರಿಗೆ ಮಲ್ಯೆಯ ಮಹದೇಶ್ವರ ಲಿಂಗ ದೀಕ್ಷೆಯನ್ನು ಕೊಡುತ್ತಾರೆ. ಸಸ್ಯಾಹಾರಿಗಳಾಗಿದ್ದ ಇವರು ಮಾಂಸಹಾರಿಗಳಾದ ಬಗೆಯನ್ನು ಹೇಳುತ್ತಾರೆ.

"ಹಿಂದೆ ನಮ್ಮೊನು ತೊರೆದಾಟ್‌ಬೇಕಾಗಿತ್ತಂತೆ, ಅವಾಗ ಮಾದೇಶ್ವರ ನೀರ್‌ನೆಲ್ಲಾ ಸುಂಡುಸ್ ಬುಟ್ಟಾ, ಇವ್ನ ದುಡ ಪರೀಕ್ಷಾ ಮಾಡ್‌ಬೇಕ್ ಅನ್ತ, ಮೀನ್‌ಗಳ್‌ನೆಲ್ಲಾ ವಿಲವಿಲಾಂತ ಒದ್ದಾಡಂಗ್ ಮಾಡ್‌ಬಿಟ್ಟ. ಆಗ ತಾನ್ ಕಟ್ಟಿದ್ ಲಿಂಗನ, ಕಳಚ್ಬಿಟ್ಟು ಮರಕ್ಕೆ ನೇತಾಗ್ದ. ಆಗ ಮೀನ್‌ಗಳ್‌ನ ಆಯ್ಕೊಳಕ್ಕೆ ಸುರ್‌ಮಾಡ್ಕಂಡ, ಆವಾಗ ಲಿಂಗಾಯಿತಿದ್ರಲ್ಲ, ಆ ಲಿಂಗನ್ನ ಎತ್ಕಂಡು ಕಟ್ಕೊಬಿಟ್ರಂತೆ. ಅವರ್ಗೆಲ್ಲಿತ್ತು ಸ್ವಾಮಿ ಲಿಂಗ? ನಮ್ಮದ್ನ ಅವರೆತ್ತಿ ಕಟ್ಕೊಂಡವ್ರೆ". ಎಂದು ಹೇಳುವ ವಕ್ತೃಗಳ ಮಾಹಿತಿಯನ್ನು ಅವಲೋಕಿಸಿದಾಗ, ಬಿಲ್ಲಯ್ಯನ ವಂಶಸ್ಥರು ನಾವು ಎಂದು ಹೇಳಿಕೊಳ್ಳುವ ಬೇಡಗಂಪಣ್ಣರು, ಈಗಲೂ ಮಲೆಯ ಮಹದೇಶ್ವರ ಬೆಟ್ಟದ ಪ್ರದೇಶದಲ್ಲಿ ಕಂಡುಬರುತ್ತಾರೆ. ಇವರು ಸಸ್ಯಾಹಾರಿಗಳಾಗಿದ್ದು ಲಿಂಗಾಯತ ಮತಾಚಾರಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ.

ಇಲ್ಲಿ ಚರ್ಚೆಗೆ ಗ್ರಾಸವಾಗುವ ವಿಚಾರವೆಂದರೆ ಈಗಾಗಲೇ ಪ್ರಸ್ತಾಪಿಸಿದಂತೆ ಕಾರಯ್ಯ, ಬಿಲ್ಲಯ್ಯರ ವಂಶಸ್ಥರೆಂದು ಹೇಳಿಕೊಳ್ಳುವ, ಸೋಲಿಗ ಮತ್ತು ಇರುಳಿಗ ಎಂದು ಎರಡು ಪಂಗಡಗಳಾಗಿದ್ದು, ಇರುಳಿಗರ ಸಂಸಾರ ಮತ್ತೆ ಬೆಳೆದು ಎರಡು ಸಮುದಾಯವಾಗಿ 'ಮಾಂಸಹಾರಿ ಇರುಳಿಗರು' ಮತ್ತು 'ಸಸ್ಯಾಹಾರಿ

ಬೇಡಗಂಪಣ'ವಾಗಿರಬಹುದು. ಆ ಕಾರಣಕ್ಕಾಗಿ ಈ ಸಮುದಾಯಗಳು ಪರಸ್ಪರ ವೈಷಮ್ಯ ಬೆಳೆದು ಬೇರೆ ಬೇರೆಯಾಗಿರುವ ಸೂಚನೆಗಳು ಕಂಡುಬರುತ್ತದೆ.19 ಕತ್ತಲಲ್ಲಿ ಓಡಾಡುವವರು, ಕಾಡಿನ ಮರೆಯಲ್ಲಿ ಜೀವನ ಸಾಗಿಸುವವರು, ಅಂದರೆ ಹೊರ ಸಮಾಜಕ್ಕೆ ತನ್ನನ್ನು ಪರಿಚಯಿಸಿಕೊಳ್ಳದೆ ಉಳ್ಳವರು ಎಂಬ ಅರ್ಥಬರುತ್ತದೆ. ಆಹಾರಕ್ಕಾಗಿ ಇರುಳಿಗರು ನಿಶಾಸಂಚಾರಿಗಳಾಗಿದುದ್ದರಿಂದ, ಇರುಳಿಗ ಎಂಬ ಹೆಸರು ಬಂದಿರುವ ಸಾಧ್ಯತೆ ಇದೆ. ಹೆಜ್ಜೇನು ಬೇಟೆಗೆ ಇರುಳಿಗರು ರಾತ್ರಿಯ ಸಂದರ್ಭದಲ್ಲಿ ಹೋಗುತ್ತಿದ್ದುದ್ದರಿಂದ,ಕತ್ತಲಿನ ಸಂಕೇತವಾಗಿ ಇರುಳಿಗ ಎಂದು ಆಗಿರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಜೊತೆಗೆ ತಮಿಳುನಾಡಿನಿಂದ ಬಂದವರು ಇರಬಹುದೆಂದು ವಿದ್ವಾಂಸರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಆದರೆ ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ ಇವರು ಸಂಪೂರ್ಣವಾಗಿ ಕನ್ನಡವನ್ನು ಮಾತನಾಡುವವರಾಗಿದ್ದಾರೆ. ಆದರೆ, ತಮಿಳು ಮಿಶ್ರಿತ ಭಾಷೆಯನ್ನು ಮಾತನಾಡುವುದರಿಂದ ಆ ಭಾಷೆಯ ಸ್ವೀಕರಣ ಆಗಿರುವ ಸಾಧ್ಯತೆಗಳಿವೆ, ಬೆಟ್ಟ, ಗುಡ್ಡ, ಗುಹೆಗಳಲ್ಲಿ ವಾಸಮಾಡುತ್ತಿದ್ದರಿಂದ ಪ್ರಭಾವ ಬೀರುವ ಸಾಧ್ಯತೆಗಳಿವೆ.

ಇವರ ಕಾಲಮಾನದ ಬಗ್ಗೆ, ಇವರು ಕೃತಾ, ತೇತ್ರಾ, ದ್ವಾಪರಯುಗಗಳಲ್ಲಿ ಇದ್ದವರೆಂದು ಪೌರಾಣಿಕ ದಂತ ಕಥೆಗಳು ನಿರೂಪಿಸುತ್ತೇವೆ. ಆದರೆ ಐತಿಹಾಸಿಕವಾಗಿ ೧೦೬೦-೧೧೬೦ (ಕ್ರಿ.ಶ) ಇದ್ದವರೆಂದು ಗುರುತಿಸಲಾಗಿದೆ ಎಂದು ವಕ್ತೃಗಳು ತಿಳಿಸಿದ್ದಾರೆ.೧೬

ಇರುಳಿಗರಿಗೆ ಈ ಹೆಸರು ಹೇಗೆ ಬಂದಿತು, ಎಂದು ನಿಖರವಾಗಿ ಹೇಳುವುದು ಕಷ್ಟದ ಕೆಲಸ. ಇರುಳಿಗ 'ಇಲ್ಲಿಗ' ಎಂದು ಕರೆಯಲ್ಪಡುವುದು. ಅದರಿಂದಲೇ ಸಮರ್ಪಕ ಉತ್ತರ ದೊರೆಯುವುದಿಲ್ಲ. ಈ ಪದಕ್ಕೆ ಸಂಬಂಧಪಟ್ಟಂತೆ ಐತಿಹ್ಯ, ದಂತಕತೆ, ವ್ಯಾಖ್ಯಾನಗಳನ್ನು ಆಧರಿಸಿ ಬಂದಿರಬಹುದು ಎಂಬ ಅಂಶವನ್ನು ಮಾತ್ರ ವ್ಯಕ್ತಗೊಳಿಸಬಹುದು.

**ಹಕ್ಕಿಪಿಕ್ಕಿಯರು:**

ಹಕ್ಕಿಪಿಕ್ಕಿಗಳನ್ನು 'ಹಕ್ಕಿ–ಹಿಡಿ' ಎಂಬ ವೃತ್ತಿನಾಮದಿಂದ ಗುರುತಿಸಿದಂತಿದೆ. ಹೀಗಾಗಿ ಇವರಿಗೆ ಹಕ್ಕಿಪಿಕ್ಕಿಯರು ಎಂದು ಕರೆಯಲಾಗಿದೆ. ಇವರು ಹಕ್ಕಿಗಳನ್ನು ಬೇಟೆಯಾಡುವುದರ ಜೊತೆಗೆ ಚಿಗರೆ, ಮೊಲ ಮುಂತಾದ ಪ್ರಾಣಿಗಳನ್ನು ಕೂಡ ಬೇಟೆಯಾಡುತ್ತಿದ್ದರು. ಜಿಂಕೆಗಳನ್ನು ಹೆಚ್ಚಾಗಿ ಬೇಟೆಯಾಡುತ್ತಿದ್ದರಿಂದ ಇವರನ್ನು ಚಿಗರೆ ಬೇಟೆಗಾರರು ಎಂದೂ ಕರೆಯುತ್ತಿದ್ದರು. ಇವರನ್ನು 'ವಾಗ್ರಿ', 'ಪಾರ್ದಸ್', 'ಪಾನೆಸ್' 'ಪಾರ್ದ್ವಾಸ್' ಮುಂತಾದ ಹೆಸರುಗಳಿಂದ ಗುರುತಿಸುವ ಕೆಲಸವನ್ನು ವಿದ್ವಾಂಸರು ಮಾಡಿದ್ದಾರೆ.

೧೮೭೧ರಲ್ಲಿ ಬ್ರಿಟೀಷರು ಕ್ರಿಮಿನಲ್ ಕಾಯ್ದೆಗಳನ್ನು ತಂದು ಕೆಲವು ಬುಡಕಟ್ಟು ಸಮುದಾಯವನ್ನು ಕ್ರಿಮಿನಲ್‌ಗಳೆಂದು ಗುರುತಿಸುತ್ತಾರೆ. ಅವರಲ್ಲಿ 'ಪಾರಧಿ' ಜನಾಂಗವೂ ಒಂದು. ಇವರು ಜಾತ್ಯ ಬೇಟೆಗಾರರಾಗಿರುವುದರಿಂದ ಇವರಿಗೆ ಈ ಹೆಸರು ಪ್ರಾಪ್ತವಾಗಿದೆ. ಉರ್ಲನ್ನು ಹಾಕಿ ಪ್ರಾಣಿಗಳ ಬೇಟೆಯಾಡುತ್ತಿರುವುದರಿಂದ ಇವರಿಗೆ 'ಪಾರಧಿ' ಅಥವಾ 'ಮೇವಾರಿ' ಎಂದು ಕರೆಯುತ್ತಾರೆ.

ಪ್ರತಿಯೊಂದು ಬುಡಕಟ್ಟು ಸಮಾಜವು ತಮ್ಮ ತಮ್ಮ ಮೂಲದ ಬಗ್ಗೆ ಖಚಿತವಾದ ಮಾಹಿತಿಯನ್ನು ಹೇಳುವುದು ಕಷ್ಟಕರ ವಿಷಯ. ಆದುದರಿಂದ ಅವರ ಮೂಲದ ಬಗ್ಗೆ ಐತಿಹಾಸಿಕ ಪೌರಾಣಿಕ ಅಂಶಗಳನ್ನು ಅವಲೋಕಿಸುವುದು ಅತ್ಯಂತ ಅರ್ಥಪೂರ್ಣವಾಗಿದೆ. ಈ ಸಮುದಾಯಗಳ ಬಗ್ಗೆ ಇರುವ ಕೆಲವು ಐತಿಹ್ಯಗಳನ್ನು ವಕ್ತೃಗಳಿಂದ ಸಂಗ್ರಹಿಸಲಾಗಿದೆ.

ಹಕ್ಕಿಪಿಕ್ಕಿ ಸಮುದಾಯದ ವಕ್ತೃಗಳನ್ನು ತಮ್ಮ ಮೂಲದ ಬಗ್ಗೆ ಮಾಹಿತಿಯನ್ನು ಕೇಳಿದಾಗ, ಅವರು ತಮ್ಮ ಮೂಲದ ಬಗ್ಗೆ ಈ ರೀತಿ ವ್ಯಕ್ತಪಡಿಸುತ್ತಾರೆ. "ತಮ್ಮ ಮೂಲಪುರುಷನಿಗೆ ಮೂರ್ ಜನ ಮಕ್ಕಳು, ಒಬ್ಬ ಮಾರ್ವಡಿ, ಬಂಜಾರು, ಹಾಗೂ ವಾಗ್ರಿ (ಹಕ್ಕಿಪಿಕ್ಕಿ) ಕಾಂಚ ತನ್ನ ಮಕ್ಕಳಿಗೆ ಆಸ್ತಿ ಪಾಲ್ ಮಾಡುವಾಗ ಎಲ್ಲರಿಗೂ ಸಮನಾಗಿ ಹಂಚಲಿಲ್ಲ. ದೊಡ್ಡಪಾಲ್‌ನ ಮಾರ್ವಡಿಗ, ಉಳಿದದ್ದನ್ನು ಬಂಜಾರನಿಗೆ ನೀಡ್ತಾನೆ, ಕೊನ್ಗೆ ಅವನಲ್ಲಿ ಏನೂ ಉಳಿದಿಲ್ಲ, ಹೀಗಾಗಿ ವಾಗ್ರಿಗೆ (ಹಕ್ಕಿಪಿಕ್ಕಿ) ಏನೂ ಕೊಡಲಿಲ್ಲ, ಅವರೆಲ್ಲಾ ದೊಡ್ಡ್ ಶ್ರೀಮಂತರಾಗುತ್ತಾರೆ. ಆದ್ರೆ ಹಕ್ಕಿಪಿಕ್ಕಿ ಜನಾಂಗ ವೊಟ್ಟ್‌ಗೆ ಇಲ್ದೆ ಕಾಡ್‌ನಲ್ಲಿ ಅಲ್ಕೊಂಡ್ ಹಕ್ಕಿಪಕ್ಕಿಗಳನ್ನು ಹೊಡ್ಕಂಡು ಜೀವ್ನಸಾಗ್‌ಸ್ತಾರೆ, ಮುಂದೆ ಅವರೆ ಹಕ್ಕಿಪಿಕ್ಕಿಗಳಾದ್ರು.೧೭

ಈ ಮೇಲಿನ ವಕ್ತೃಗಳ ವಿವರವನ್ನು ಅವಲೋಕಿಸಿದಾಗ ಹಕ್ಕಿಪಿಕ್ಕಿ ಸಮುದಾಯವು ಮೂಲತಃ ಮಾರ್ವಡಿ, ಲಂಬಾಣಿಗಳನ್ನೊಳಗೊಂಡಿರುವುದನ್ನು ಸಂಬಂಧಪಟ್ಟ ವಕ್ತೃಗಳು ನೀಡುವ ಮತ್ತೊಂದು ಐತಿಹ್ಯ ಈ ಕೆಳಕಂಡಂತಿದೆ–

"ಒಮ್ಮೆ ಪಾರ್ವತಿ ಪರಮೇಶ್ವರ, ಆಕಾಶದಲ್ಲಿ, ಒಂದ್ ಬೀಜಾ ಬಿತ್‌ದರಂತೆ. ಆ ಬೀಜದಿಂದ ಒಂದ್ ಹೆಣ್ಣ್ ವುಟ್‌ತ್ತಂತೆ, ಆ ವುಟ್ಸ್‌ದ ಹೆಣ್ಣ್‌ನ ಬೆಟ್‌ನಿಂದ ಒಂದ್ ಮಗು ವುಟ್ ಬಂತ್, ಅವ್ನಗೆ ಆವುಡ್ಗನ ಆಸೆ ಪಡ್ತಾಳೆ. ಆದ್ರೆ ಅವ ಒಪ್ಪಲ್ಲ, ಪುನಃ ಇನ್ನೊಂದ್ ಮಗುಗೆ ಜನ್ಮ ನೀಡ್ತಾಳೆ ಅವ್ನೂ ಅವ್ನ ಜೊತೆ ಮಲ್ಗಕ್ಕೆ ಒಪ್ಪೋದಿಲ್ಲಾ ಸರಿ ಮೂರ್‍ನೆ ಮಗುಗೆ ಜನ್ಮ ನೀಡ್ತಾಳೆ ಅವ್ನು ತಾಯಿ ಜೊತೆ ಮಲ್ಗಕ್ಕೆ ಒಪ್ಪತ್ತಾನೆ, ಸರಿ ಅವ್ರಗೆ ಮಗು ವುಟ್ಟತ್ತೆ, ಅದೇ ಜಲ್ಮ ಇವನಿಂದ್ ಹಲವ್ ಮಕ್ಳ್ ವುಟ್ತಾರೆ, ಅವ್ರಲ್ಲಿ ಜೋಗಿ, ಬೈಲ, ಮಾದಾಗತಿ, ಲಂಬಾಣಿ, ಹಕ್ಕಿಪಿಕ್ಕಿ ಎಂದು ಹೇಳುತ್ತಾರೆ. ಹೀಗೆ ಹಕ್ಕಿಪಿಕ್ಕಿ ಸಮುದಾಯವು ವಿವಿಧ ಕುಲಗಳಾಗಿ ವಿಭಜನೆಯಾದ ಬಗೆಯನ್ನು ಹೇಳುತ್ತಾರೆ.೧೮

ಬೇಟೆಗೆ ಸಂಬಂಧಪಟ್ಟಂತೆ ಹಕ್ಕಿಪಿಕ್ಕಿಯವರು ಹೇಳುವ ಐತಿಹ್ಯವೊಂದು ಹೀಗಿದೆ, "ರಾಮಾಯಣದಲ್ಲಿ ವಾಲಿ, ಮಹಾರಾಜನೊಮ್ಮೆ ಬ್ಯಾಟೆಗೆ, ಕಾಡ್ಗೆ ಹೋಗಿರುತ್ತಾನೆ. ಬ್ಯಾಟೆಯಾಡಿದ ನಂತರ ಎಲ್ರೂ ಭೋಜನಕ್ಕೆ ಸಿದ್ದ ಮಾಡ್ಕೋತಾರೆ. ಆದ್ರೆ ವಾಲಿ ಮಹಾರಾಜ ಒಂದ್ ವ್ರತ ಮಾಡ್ತಾ ಇರ್ತಾನೆ. ಯೆಣ್ಣ್ ಮಕ್ಕಳ್ ಬಡಸದ್ರೆ, ಮಾತ್ರ ವೂಟ ಮಾಡೋದ್, ಇಲ್ಲಾ ಅಂದ್ರೆ ವೂಟಾನೇ ಮಾಡೋಂಗೆ ಇಲ್ಲ, ಈ ಸುದ್ದಿ ತಿಳಿದು ಎಲ್ರೂ ಯೋಚನೆ ಮಾಡ್ತಾ ಇರ್ತಾರೆ. ಬ್ಯಾಟೆಗೆ, ಜೊತ್ಗ ಹೋಗಿದ್ದ ಕುಂಬಾರನ್ಗ ಗೊತ್ತಾಗಿ, ಒಂದ್ ತಂತ್ರ ಮಾಡ್ತಾನೆ, ಒಂದ್ ಮಣ್ಣ್‌ನ ಗೊಂಬ್ ತಯಾರಿಸಿ, ಗೊಂಬೆಯಿಂದ ವೂಟ ತಯಾರ್ ಮಾಡ್ತಾನೆ. ರಾಜ ವೂಟ್ ಮಾಡ್ಕಂದ್ ವಿಸ್ರಾಂತಿ ಪಡ್ಕಂಡ್ ಹೊರಟೋಯ್ತಾನೆ. ಕೊನ್ಗೆ ಮಣ್ಣ್‌ನ್ ಗೊಂಬೆ ಅನಾಥ ಆಯ್ತದೆ. ಪಾರ್ವತಿ ಪರಮೇಶ್ವರರು ಆ ಮಾರ್ಗವಾಗಿ ಬರ್ತಾ ಇರ್ತಾರೆ, ಅಂದವಾಗಿರುವ ಮಣ್ಣಿನ ಬೊಂಬೆ ನೋಡಿ ಅದ್ಕೆ ಜೀವ ತುಂಬ್ತಾರೆ. ಅಲ್ಲೆ

ಬ್ಯಾಟೆ ಆಡ್ತ ಬಂದ ಬೇಡ, ಅವಳನ್ ಇಷ್ಟ ಪಟ್ಟಾ, ಮದ್ವೆ ಆಗ್ತಾನೆ. ಅವ್ರ ಕುಲದವ್ರ ನಾವು ನಮ್ಮ ವಾಗ್ರಿ 'ಹರನಾ ಶಿಕಾರಿ' ಅನ್ತಾರೆ.೧೯

ಹಕ್ಕಿಪಿಕ್ಕಿಯವರು ತಾವು ಎಲ್ಲಿಂದ ಬಂದವರು ಎಂಬುದಕ್ಕೆ ಸಂಬಂಧಪಟ್ಟಂತೆ ಐತಿಹಾಸಿಕ ಹಿನ್ನೆಲೆಯೊಂದನ್ನು ವಕ್ತೃಗಳು ಹೀಗೆ ವ್ಯಕ್ತಪಡಿಸಿದ್ದಾರೆ. "ಹಿಂದೆ ನಾವ್ ರಜಪೂತ್ ವಂಶಸ್ಥರು. ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನದಲ್ಲಿ ಬಾಳ ಶ್ರೀಮಂತರಿದ್ವಿ, ಶಿವಾಜಿ ಮಹಾರಾಜರೇ ನಮ್ ಗುರುಗಳು. ಅವ್ರ ಚಾಮುಂಡೇಶ್ವರಿಯನ್ನ, ಚೆನ್ನಾಗಿ ಪೂಜಿಸಿ, ಭಕ್ತರಾಗಿ ಕುಲದೇವತೆಯಾಗಿ ನೆಡಸ್‌ಕೊಳ್ಳ್ತಿದ್ರು. ಅಕ್ಬರ್ ಮತ್ತು ರಾಣಾ ಪ್ರತಾಪ್ ಸಿಂಗ್‌ರ, ಜಗಳದಿಂದಾಗಿ ಯುದ್ಧಾ ಆದಾಗ ನಾವ್ ಈಕಡೆ ಬಂದವ್ರು. ಅಕ್ಬರ್ ದೊರೆ ದೇಶನೆಲ್ಲಾ ತನ್ನದಾಗಿಸಿ ಕೊಳಬೇಕು ಅನ್ತ ರಾಣಾನ ಪ್ರದೇಶಕ್ಕೆ ಬರ್ತಾನೆ. ಆಗ ರಾಣಾ ಹೋಗಿ ಚಾಮುಂಡೇಶ್ವರಿಗೆ ಅಮ್ಮಾ...ಅಮ್ಮಾ ತಾಯಿ ಅಕ್ಬರ್ ಬಂದ್ ಅವ್ನೆ, ನೀನ್ ನನ್ಗೆ ಜಯ ಹಾಗೊಂಗೆ ವರ ಕೊಡು ಅಂದ. ತಕ್ಷಣ ದೇವ್ರು ಎರಡು ಹುಣಸೆ ಬೀಜಕೊಟ್‌ಬಿಟ್ಟ್ ಇವ್ನ ದೊಡ್ಡದಾಗಿ ಬೆಳಸ್ದ್ರೆ ಅಕ್ಬರ್ ನೀನ್ ಗೆಲ್ಲಕ್ ಹಾಗೋದಿಲ್ಲ ಅನ್ತ ವರಕೊಡ್ತಾಳೆ. ಅವು ಬೆಳೆತಾ ಇದ್ದಾಗ ಅಕ್ಬರ್‌ನಿಗೆ ಸೋಲಾಯ್ತದೆ. ತಾಯಿ ಇನ್ನೊಂದ್ ಮಾತ್ ಹೇಳ್ತಾಳೆ, ನಾನ್ ಒಂದ್ ಬಂಗಾರದ್, ಕುದುರೆ ಕೊಡ್ತಿನಿ ಅದ್ನ 'ಅತ್', ಅದು ಒಂದೇ ಏಟ್‌ಗೆ 'ದೇವ್ ಕೊಂಡ್'ಕ್ಕೆ ಹೋಗುತ್ತೆ, ಅಂತ ಹೇಳಿ ಕೊಟ್ಟಿದ್ದು. ಹಾಗೆ ಅಲ್ಲಿಗೆ ಹೋಯ್ತಾನೆ. ಅಲ್ಲಿ ತಾನ ಮಾಡ್‌ಕ್ಕೊತಾನೆ, ಇನ್ನೊಂದ್ ಹೊಡತಕ್ಕೆ, 'ಸುರಿಸ್ ಕೊಂಡಕ್ಕೆ' ಹೋದ, ಆಗ ಮಾತಾಯಿ ಪ್ರತ್ಯಕ್ಷ ಆಗ್‌ಬುಟ್ಟು, ಈಗ್ ನಾನ್ ಒಂದ್ ಕತ್ತಿ ಕೊಡ್ತೀನಿ. ಅಕ್ಬರ್ ಸಿಕ್ತಾನೋ ಅಥವಾ ಅವ್ನ್ ಮಗ ಸಿಕ್ತಾನೋ ಗೊತ್ತಿಲ್ಲ, ಅಂತೇಳಿ ಮಾಯ ಆಗ್ಬುಟ್ಳು. ಆಮೇಲೆ ಅಕ್ಬರ್ ಸಿಗ್‌ಲಿಲ್ಲ ಅವ್ನ್ ಮಗ ಸಿಗ್ತ, ದೇವತೆ ಮೊದ್ಲೆ ಹೇಳಿರ್‌ತಳೆ, 'ಮೊದುಲ್ನೆ ರಕ್ತ ನನ್ಗೆ' ಕಾಣಸ್ಬೇಕು, 'ಎರಡ್ನೆ ರಕ್ತ ನಿನ್ಗೆ' ಅಂತ ಮಾತ್ಕೊಟ್ಟಿರ್ತಳೆ. ಆದ್ರೆ ರಾಣಾ ಮರ್‌ತ್ ಬುಟ್ಟು ತನ್ನ್ ಹಣೆಗೆ ಹಚ್ಕೊಂಡಿದ್ದುದ್ರಿಂದ ಕ್ವೋಪಸ್‌ಕೊಂಡು, ದೇವತೆ, 'ನಿನ್ ಕತ್ತಿ ನಿನ್ಗೆ ಸಾಯಿಸಲಿ' ಅಂತ ಶಾಪಕೊಡ್ತಾಳೆ. ರಾಣಾ ಸಾಯ್ತಾನೆ. ಅವ್ನ ಹಿಂದ್‌ಗುಂಟೇನೆ ಅವಳ್ ಮಡ್ದೀನು ಸಾಯ್ತಾಳೆ. ಆಗ ನಾವು ಗತಿಯಿಲ್ಲದೆ, ನಾವ್ ಅಲ್ಲಿ ಇಲ್ಲಿ ಬೇಡ್ಕಂಡ್ ತಿಂತಾ... ಬ್ಯಾಟೆ ಆಡ್ತಾ, ಊರ್ ಊರ್ ಸುತ್ಕಂಡು, ಈ ಕರ್ನಾಟಕಕ್ಕೆ ಬಂದಿದ್ದು" ಎಂದು ತಮ್ಮ ಐತಿಹಾಸಿಕ ಕತೆಯನ್ನು ಹೇಳುತ್ತಾರೆ.೨೦ ಈ ಐತಿಹ್ಯವನ್ನು ಗಮನಿಸಿದಾಗ ಹಕ್ಕಿಪಿಕ್ಕಿ ಸಮುದಾಯವು ಅಲೆಮಾರಿಗಳಾಗಿದ್ದರು ಎಂಬ ಅಂಶವನ್ನು ಗುರುತಿಸಲು ಸಹಾಯಕವಾಗಬಲ್ಲದು.

ಹೀಗೆ ಗುಜರಾತ್‌ನಲ್ಲಿ ಇದ್ದಂತಹ ನಮ್ಗೆ "ಹದನಾಲ್ಕು ವರ್ಷ ನಿರಂತರವಾಗಿ, ಬರ್‌ಗಾಲ ಬಂದ್ ಬಿಡ್ತೆ, ಆಗ್ ಅನಿವಾರ್ಯವಾಗಿ, ಕಾಡಿಗೆ ಹೋಗಿ ಪ್ರಾಣಿಗಳನ್ನ ತಿನ್ತಾ, ತಮಿಳ್‌ನಾಡಿಗೆ ಬಂದ್, ಆಮೇಲೆ ಕರ್ನಾಟಕಕ್ಕೆ ಬಂದು ಅಂತ ಕರ್ನಾಟಕದಲ್ಲಿ ಹನ್ನೊಂದು ತಲೆಮಾರಿನವ್ರು ವಾಸಮಾಡುತ್ತಿದ್ದಾರೆ.೨೧ ತಮ್ಮ ತಲೆಮಾರುಗಳನ್ನು ಹೇಳುವುದರ ಮೂಲಕ ಇವರು ಶಾಶ್ವತ ನೆಲೆ ನಿಂತ ಸಮುದಾಯವಾಗಿರಲಿಲ್ಲ ಆದರೆ ಸರ್ಕಾರದ ಯೋಜನೆಗಳಿಂದ ಒಂದೆಡೆ ನಿಲ್ಲಲು ಫಲಪ್ರದವಾಗಿದೆ.

ಹೀಗೆ ಹಕ್ಕಿಪಿಕ್ಕಿ ಸಮುದಾಯದ ಬಗ್ಗೆ ಅನೇಕ ಕಥೆಗಳು ಐತಿಹಾಸಿಕ ಮತ್ತು

ಪೌರಾಣಿಕತೆಗಳ ಮಿಶ್ರವಾಗಿರುವುದು ಸ್ಪಷ್ಟವಾಗುತ್ತದೆ. ಹೀಗೆ ಮೌಖಿಕ ಪರಂಪರೆಯಲ್ಲಿ ದಾಖಲಾಗುವುದರ ಮೂಲಕ ತಮ್ಮ ಸಮುದಾಯಗಳ ಬಗ್ಗೆ ವಿವಿಧ ರೀತಿಯ ಕಥೆಗಳನ್ನು ಹೇಳುವುದರ ಮೂಲಕ ತಮ್ಮ ಮೂಲದ ಬಗ್ಗೆ ಹೇಳುತ್ತಾರೆ. ಅಲೆಮಾರಿಗಳಾಗಿ ವಿಶಿಷ್ಟ ಸಂಸ್ಕೃತಿಯಲ್ಲಿ ಬುಡಕಟ್ಟು ಸಮುದಾಯಗಳು ಉಸಿರಾಡುತ್ತಿವೆ.

ಅಂತಹ ಸಂಸ್ಕೃತಿಯಲ್ಲಿ ಹಕ್ಕಿಪಿಕ್ಕಿ ಸಮುದಾಯದ ಸಂಸ್ಕೃತಿಯು ಒಂದು. ಅಲೆಮಾರಿಗಳಾಗಿದ್ದು, ಒಂದೆಡೆ ನೆಲೆ ನಿಂತಿರುವ ಈ ಸಮುದಾಯ ಹಿನ್ನೆಲೆಯನ್ನು ಅಧ್ಯಯನ ಮಾಡುವುದರಿಂದ ಈ ಸಮುದಾಯದ ಚಾರಿತ್ರಿಕ ಅಂಶಗಳತ್ತ ಬೆಳಕು ಚೆಲ್ಲುವುದರ ಮೂಲಕ ಇಡೀ ಹಕ್ಕಿಪಿಕ್ಕಿ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಜೀವನವನ್ನು ಅರಿಯಲು ಸಹಾಯಕವಾಗಬಲ್ಲದು ಎಂಬ ಪರಿಕಲ್ಪನೆಯಿಂದ ಹಕ್ಕಿಪಿಕ್ಕಿ ಸಮುದಾಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರಮುಖವಾಗಿ ಹಲವಾರು ಬುಡಕಟ್ಟು ಜನಾಂಗಗಳಿದ್ದು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಇರುಳಿಗ ಹಾಗು ಹಕ್ಕಿಪಿಕ್ಕಿ ಜನಾಂಗದ ಬಗ್ಗೆ ಸ್ಥೂಲ ಪರಿಚಯವನ್ನು ಈ ಅಧ್ಯಯನದಲ್ಲಿ ಮಾಡಿಕೊಡಲಾಗಿದೆ. ಆ ಮೂಲಕ ಇವರ ಹಿನ್ನೆಲೆ ಆಚಾರ-ವಿಚಾರಗಳಲ್ಲಿನ ನಂಬಿಕೆ ಇತ್ಯಾದಿ ಅಂಶಗಳ ಜೊತೆಗೆ ಬುಡಕಟ್ಟಿನ ಜನರ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡಲು ಇದು ಸಹಕಾರಿಯಾಗಲಿದೆ.

## ೩-ಇಂದಿನ ಸಮಾಜದಲ್ಲಿ ಬುಡಕಟ್ಟುಗಳ ಸ್ಥಾನಮಾನ

ಭಾರತದಲ್ಲಿ ಬ್ರಿಟೀಷರ ಆಳ್ವಿಕೆಗೆ ಮೊದಲು ಬುಡಕಟ್ಟುಗಳ ಸ್ವಾತಂತ್ರ್ಯಕ್ಕೆ ಯಾವುದೇ ಧಕ್ಕೆ ಬಂದಿರಲಿಲ್ಲ. ಮಂಗಲ್ ದೊರೆಗಳ ಹಲವಾರು ಶತಮಾನಗಳ ಆಳ್ವಿಕೆಯ ಕಾಲದಲ್ಲಿಯೂ ಬುಡಕಟ್ಟುಗಳು ಸ್ವತಂತ್ರ್ಯವಾಗಿದ್ದವು. ಬ್ರಿಟೀಷರು ಭಾರತದಲ್ಲಿ ಆಡಳಿತ ನಡೆಸಲು ಪ್ರಾರಂಭ ಮಾಡಿದ ನಂತರ ಭಾರತದಾದ್ಯಂತ ಏಕರೀತಿಯ ಆಳ್ವಿಕೆಯನ್ನು ಅಸ್ತಿತ್ವಕ್ಕೆ ತಂದರು. ಭಾರತದಾದ್ಯಂತ ರೈಲ್ವೆ, ರಸ್ತೆ ಸಂಪರ್ಕಗಳನ್ನ ಕಲ್ಪಿಸಿ ಬುಡಕಟ್ಟು ಸಮುದಾಯಗಳನ್ನು ಒಕ್ಕಲೆಬ್ಬಿಸುವ ಕೆಲಸವನ್ನು ಮಾಡಿದರು. ಅನಿವಾರ್ಯವಾಗಿ ಬುಡಕಟ್ಟು ಸಮುದಾಯಗಳು ನಗರ ಬದುಕನ್ನು ಅನುಸರಿಸಬೇಕಾಯಿತು. ಸ್ವಾತಂತ್ರ್ಯ ನಂತರ ಭಾರತದಲ್ಲಿ ಬುಡಕಟ್ಟು ಸಮುದಾಯಗಳು ತೀವ್ರಗತಿಯಲ್ಲಿ ಬದಲಾವಣೆ ಹೊಂದುತ್ತಿವೆ.

ಬುಡಕಟ್ಟು ಸಮುದಾಯಗಳು ಹಿಂದೆ ಮುಖ್ಯ ಸಮಾಜದಿಂದ ದೂರವಿದ್ದವು. ಇಂದು ನಗರೀಕರಣದ ಪ್ರಭಾವದಿಂದ ಸಮಾಜದ ಮುಖ್ಯವಾಹಿನಿಯ ಜೊತೆ ಪೈಪೋಟಿ ನಡೆಸುವ ವ್ಯವಸ್ಥೆ ನಿರ್ಮಾಣವಾಗಿದೆ. ಕೈಗಾರಿಕೀಕರಣ, ನಗರೀಕರಣ, ಆಧುನೀಕರಣ, ಪಾಶ್ಚಾತ್ತೀಕರಣದ ಪ್ರಭಾವ ಬುಡಕಟ್ಟು ಸಮುದಾಯಗಳನ್ನು ಬದಲಾವಣೆಯ ಹಾದಿಯಲ್ಲಿ ಕೊಂಡೋಯ್ಯುತ್ತಿವೆ.

ಬುಡಕಟ್ಟು ಸಮುದಾಯಗಳಿಗೆ ಸಾಂಸ್ಕೃತಿಕ ಅನನ್ಯತೆಗಳಿರದೆ. ಸಾಮಾಜಿಕ.

ಆರ್ಥಿಕ, ಅನನ್ಯತೆಗಳು ಕಂಡುಬರುತ್ತದೆ. ಬುಡಕಟ್ಟುಗಳ ದೇಸಿಯ ತಂತ್ರಜ್ಞಾನ, ದೇಸಿಯ ಔಷಧಪದ್ಧತಿ, ಇವುಗಳ ಸಂರಕ್ಷಣೆ ಅತ್ಯಂತ ಅತ್ಯಗತ್ಯವಾಗುತ್ತದೆ. ಆ ನಿಟ್ಟಿನಲ್ಲಿ ಈ ಸಮುದಾಯಗಳ ಸ್ಥಿತ್ಯಂತರಗಳನ್ನು ಈ ಅಧ್ಯಾಯದಲ್ಲಿ ಮನಗಾಣಬಹುದು.

ಕರ್ನಾಟಕದಲ್ಲಿ ಹಲವಾರು ಬುಡಕಟ್ಟು ಸಮುದಾಯ ಕಂಡುಬಂದರೂ, ಇಂದು ಸಂವಿಧಾನಾತ್ಮಕವಾಗಿ ಐವತ್ತು ಬುಡಕಟ್ಟುಗಳನ್ನು ಪಟ್ಟಿ ಮಾಡಲಾಗಿದೆ. ಬೆಂಗಳೂರು, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯ ಪರಿಸರದಲ್ಲಿ ಹಕ್ಕಿಪಿಕ್ಕಿಗಳು, ಇರುಳರ್, ಇರುಳಿಗ, ಕಣಿಯನ್, ಕಣ್ಯನ್, ಕೋಟಾ, ಕುಡಿಯ, ಮೇಲಕುಡಿ, ಸೋಲಿಗ ಬುಡಕಟ್ಟು ಸಮುದಾಯಗಳು ನೆಲೆಸಿದ್ದಾರೆ. ಈ ಬುಡಕಟ್ಟು ಸಮುದಾಯಗಳಲ್ಲಿ 'ಹಕ್ಕಿಪಿಕ್ಕಿ' ಮತ್ತು 'ಇರುಳಿಗ' ಸಮುದಾಯಗಳನ್ನು ಪ್ರಮುಖವಾಗಿ ನನ್ನ ಅಧ್ಯಯನದಲ್ಲಿ ಬಳಸಿಕೊಂಡಿರುವ ಬುಡಕಟ್ಟು ಸಮುದಾಯಗಳಾಗಿವೆ. ಇಂದಿನ ಸಮಾಜದಲ್ಲಿ ಇವರ ಸ್ಥಾನಮಾನಗಳಲ್ಲಿ ಸಾಕಷ್ಟು ಬದಲಾವಣೆಗಳಾಗುತ್ತಿರುವುದನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮಾಹಿತಿಯನ್ನು ಸಂಗ್ರಹಿಸಿ, ಮುಖಾಮುಖಿ ಸಂದರ್ಶಿಸಿ ಈ ಸಮುದಾಯದ ಸ್ಥಿತ್ಯಂತರಗಳನ್ನು ಸ್ಪಷ್ಟಪಡಿಸುತ್ತಿದ್ದೇನೆ.

ಭಾರತದ ಎಲ್ಲ ಸಮುದಾಯಗಳನ್ನೂ ನಾಗರೀಕತೆಯ ಮುಖ್ಯವಾಹಿನಿಗೆ ತರುವ ಪ್ರಶ್ನೆ ಚರ್ಚೆಗೆ ಬಂದಿದೆ. ಬುಡಕಟ್ಟು ಸಮುದಾಯದವರಿಗೆ ಸಂಬಂಧಿಸಿದಂತೆ ಈ ಪ್ರಶ್ನೆ ಚರ್ಚೆಗೆ ಬರಲು ಕಾರಣ ವಸಾಹತು ಸರಕಾರದ ಆರ್ಥಿಕ ನೀತಿ. ಅರಣ್ಯ ಇಲಾಖೆಯವರ ವ್ಯವಹಾರಕ್ಕೆ ಅಡ್ಡಿ ಆತಂಕ ಆಗದಂತೆ ಬುಡಕಟ್ಟು ಸಮುದಾಯಗಳನ್ನು ನಿರ್ವಹಿಸುವುದು ಮುಖ್ಯ ಕಾರಣವಾಗಿತ್ತು. ಅದರ ಜೊತೆಗೆ ಕಾನೂನು ಮತ್ತು ಶಿಸ್ತು ಕಾಪಾಡುವ ದೃಷ್ಟಿಯಿಂದಲೂ ಅಗತ್ಯವಾಗಿತ್ತು. ಟೀ, ಕಾಫಿ, ಪ್ಲಾಂಟುರುಗಳ ಉದ್ಯಮ, ಊರಿನ ವ್ಯಾಪಾರಿಗಳ ವ್ಯವಹಾರಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳುವುದು ಕೂಡ ಅಂದಿನ ವಸಾಹತು ಸರಕಾರದ ಜವಾಬ್ದಾರಿಯಾಗಿತ್ತು. ಅದಕ್ಕಾಗಿ ಅದು ಬುಡಕಟ್ಟು ಸಮುದಾಯಗಳನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವ ಪ್ರಶ್ನೆ ಎತ್ತಿತು. ನಂತರ 'ಆಧುನೀಕರಣಗೊಳಿಸುವ' ಉದ್ದೇಶದಿಂದ ಮುಖ್ಯವಾಹಿನಿಗೆ ಸೇರಿಸಬೇಕೆನ್ನುವ ಪ್ರಶ್ನೆಯನ್ನು ಮುಂದೆ ಇಟ್ಟಿತ್ತು. ಶಾಲೆ, ರಸ್ತೆ, ಅಭಿವೃದ್ಧಿ ಯೋಜನೆಗಳಲ್ಲಿ ಪಾಲು ಇತ್ಯಾದಿಗಳು ಮುಖ್ಯವಾಹಿನಿಯಲ್ಲಿ ಸೇರಿಸಿಕೊಳ್ಳುವ ಸುಲಭ ಮಾರ್ಗಗಳಾದವು.

ಭಾರತದ ಅಸಮಾನ ಸಾಮಾಜಿಕ ವ್ಯವಸ್ಥೆಯಲ್ಲಿ ಧಿಕ್ಕರಿಸಲ್ಪಟ್ಟ ಬುಡಕಟ್ಟು ಸಮುದಾಯಗಳಂತಹ ಅಸಹಾಯಕ ಸಮುದಾಯಗಳನ್ನು ಎಲ್ವಿನ್ ಹೃದಯ ಮೂಲಕ ಗ್ರಹಿಸಿದ್ದೇ ಹೆಚ್ಚು. ವಸಾಹಾತು ದೇಶವೊಂದರಿಂದ ಪಾದ್ರಿಯಾಗಿ ಬಂದಿದ್ದ, ಇಲ್ಲವೇ ಸಾಹಿತ್ಯದ ವಿದ್ಯಾರ್ಥಿಯಾಗಿದ್ದ ಕಾರಣಕ್ಕಾಗಿಯೇ ಎಲ್ವಿನ್ ಸಾಂಪ್ರದಾಯಿಕ ಮಾನವ ಶಾಸ್ತ್ರಜ್ಞರಂತೆ ಶುದ್ಧ ಅಕಾಡೆಮಿಕ್ ಚೌಕಟ್ಟಿನಲ್ಲಿ ತರ್ಕಬದ್ಧ ಚರ್ಚೆಗಳಿಗೆ ಹೋಗುವುದಿಲ್ಲ. ಬುಡಕಟ್ಟು ಸಮುದಾಯಗಳನ್ನು ಅಂತಃಕರಣದ ಮೂಲಕ ನೋಡಬೇಕು ಎಂಬುದನ್ನು ಎಲ್ವಿನ್‌ರವರು ತಮ್ಮ ನಿಲುವುಗಳಲ್ಲಿ ಅಭಿವ್ಯಕ್ತಿಸುತ್ತಾರೆ.

ಭಾರತದ ಬೆಟ್ಟಕಾಡುಗಳಲ್ಲಿ ಜನರ ನಡುವೆ ವಾಸಮಾಡಬಲ್ಲವರು ಸುಖಿಗಳು; ಏಕೆಂದರೆ, ಅವರು ಅನೇಕ ಕಷ್ಟಗಳನ್ನು ಎದುರಿಸಬೇಕಾದರೂ, ಕರುಣೆಯ ಅಸಂಖ್ಯಾ ಕಾರ್ಯಗಳಿಂದ ಆ ಜನರಿಗೆ ಲಕ್ಷ್ಯಕೊಡುವ ಅನಿರ್ವಚನೀಯ ಆನಂದ ಅವರದಾಗುತ್ತದೆ. ಸೆಕ್ರವೇರಿಯಟ್‌ನಲ್ಲಿ ದೂರ ವಾಸಿಸಬೇಕಾದ ಚಿಂತಕರು, ಯೋಜಕರು, ಆಡಳಿತಗಾರರ ಪಾಲಿಗೆ ಕಠಿಣತರ ಕಾರ್ಯವಿದೆ. ಏಕೆಂದರೆ, ಅವರಿಗೆ ಈ ಸದ್ಯ ಸಂತೃಪ್ತಿಯಿಲ್ಲ; ಆದರೆ ಅವರು ಪರಿಣಾಮಕಾರಿಯಾಗಿ ಕೆಲಸ ಮಾಡಬೇಕಾದರೆ ಪ್ರೇಮದಿಂದ ಅವರು ಸ್ಫೂರ್ತಿಗೊಳ್ಳಬೇಕು.೨೨

ಅಹಿಂಸೆ ಶೋಷಣೆಯನ್ನು ಅಸಾಧ್ಯಗೊಳಿಸುತ್ತದೆ. ಮತ್ತು ಪ್ರಾಯಶಃ ಬುಡಕಟ್ಟುಗಳಿಗಿರುವ ಅತಿ ದೊಡ್ಡ ಅಪಾಯ ಸಾಂಸ್ಕೃತಿಕ ವಿನಾಶವಲ್ಲ, ಆರ್ಥಿಕ ಶೋಷಣೆ ಎಂದು ಗಾಂಧಿ ನುಡಿದ ಮಾತುಗಳು. ಬುಡಕಟ್ಟು ಜನರು ತಮ್ಮ ಭೂಮಿಯ ವಿಸ್ತಾರ ಪ್ರದೇಶಗಳನ್ನೇ ಕಳೆದುಕೊಂಡಿದ್ದಾರೆ. ಈಗಲೂ ಕಳೆದುಕೊಳ್ಳುತ್ತಿದ್ದಾರೆ. ಅವರಲ್ಲಿ ಲಕ್ಷಾಂತರ ಮಂದಿ ಋಣ ಬಂಧನದಲ್ಲಿದ್ದಾರೆ. ಅನೇಕರು ಜೀತಗಾರರ ಮಟ್ಟಕ್ಕಿಳಿಸಲ್ಪಟ್ಟಿದ್ದಾರೆ. ಬೃಹತ್ ಕೈಗಾರಿಕೆ ಯೋಜನೆಗಳು ಅನಿವಾರ್ಯವಾಗಿ ಅವರ ಪರಂಪರಾಗತ ಭೂಮಿಯನ್ನು ತಪ್ಪಿಸುತ್ತಿವೆ. ಪುನರ್ವಸತಿ ಕಾರ್ಯ ಯಾವಾಗಲೂ ಸಮರ್ಪಕವಾಗಿ ಈಡೇರಿಸುವುದಾದರೆ, ಒಂದೊಂದಾಗಿ ಎಲ್ಲ ಪ್ರದೇಶಗಳಲ್ಲಿ, ಪ್ರೇಮ ಕರುಣೆಗಳ ಶಕ್ತಿಗಳನ್ನು ಬಿಡುಗಡೆಗೊಳಿಸುವುದರ ಮೂಲಕ ಶೋಷಣೆಯ ಪ್ರತಿಯೊಂದು ಪ್ರಕಾರವನ್ನು ವರ್ಜಿಸಬೇಕಾದದ್ದು ಅತ್ಯಗತ್ಯ ಎಂಬ ವಿಚಾರವನ್ನು ಎಲ್ವಿನ್ ಪ್ರಸ್ತಾಪಿಸುತ್ತಾರೆ.

ಘುರ್ಯೆರವರು ಪರಿಶಿಷ್ಟ ಬುಡಕಟ್ಟುಗಳ ಸಮಸ್ಯೆಗಳ ಅಧ್ಯಯನವೂ ಕೂಡ ಮಹತ್ವ ಪೂರ್ಣವಾದುದ್ದು ಎಂದು ಹೇಳುತ್ತಾರೆ. ಅವರ ಪ್ರಕಾರ ಭಾರತೀಯ ಬುಡಕಟ್ಟು ಸಮುದಾಯಗಳು “ಹಿಂದುಳಿದ ಹಿಂದುಗಳೇ ಆಗಿದ್ದು, ಅವರ ಹಿಂದುಳಿದಿರುವಿಕೆಯು ಹಿಂದೂ ಸಮಾಜದೊಂದಿಗಿನ ಅವರ ಅಪರಿಪೂರ್ಣವಾದ ಸಮರತೆಯಿಂದಲೇ ಉಂಟಾಗಿದೆ. ಸಂತಾಲರು, ಬಿಲ್ಲರು ಮತ್ತು ಗೊಂಡ ಬುಡಕಟ್ಟು ಸಮುದಾಯಗಳನ್ನು ಈ ಮಾತಿಗೆ ಉದಾಹರಣೆಗಳಾಗಿ ಅವರು ಸೂಚಿಸಿದ್ದಾರೆ. ಬುಡಕಟ್ಟು ಸಮುದಾಯಗಳ ಸಮಸ್ಯೆಗಳಿಗೆ ಪರಿಹಾರವಾಗಿ ಅವರನ್ನು ಪ್ರತ್ಯೇಕವಾಗಿ ಇರಿಸುವುದೇ ಸೂಕ್ತವೆಂದು ಸಲಹೆ ನೀಡಿದ ವೆರೀಯರ್ ಎಲ್ವಿನ್ ರವರ ಸಿದ್ಧಾಂತವನ್ನು ಪೂರ್ಣವಾಗಿ ಅಲ್ಲಗಳೆದ ಘುರ್ಯೆಯವರು ಅದಕ್ಕೆ ಪ್ರತಿವಾದ ಎಂಬಂತೆ ೧೯೪೩ರಲ್ಲಿ “ದಿ ಅಬೊರಿಜಿನ್ಸ್ –‘ಸೋ ಕಾಡ್’– ಅಂಡ್ ದೇರ್ ಫ್ಯೂಚರ್” ಎಂಬ ಗ್ರಂಥದಲ್ಲಿ ಬುಡಕಟ್ಟು ಸಮುದಾಯಗಳನ್ನು ಉಳಿದ ಸಮುದಾಯದೊಂದಿಗೆ ಸಮೀಕರಿಸುವುದೇ ಸೂಕ್ತವಾದ ಮಾರ್ಗವೆಂದು ಬಲವಾಗಿ ಪ್ರತಿಪಾದಿಸಿದ್ದಾರೆ. ಬುಡಕಟ್ಟು ಸಮುದಾಯಗಳ ಪುನರ್ವಸತೀಕರಣಕ್ಕೆ ಸಂಬಂಧಿಸಿದಂತೆ ಸ್ವತಂತ್ರ ಭಾರತ ಸರ್ಕಾರವು ಅನುಸರಿಸುತ್ತಿರುವ ಧೋರಣೆ ಮತ್ತು ಕ್ರಮಗಳು ಪ್ರತ್ಯೇಕತೆ ಮತ್ತು ವಿಘಟನೆಯ ಬೀಜಗಳನ್ನು ಬಿತ್ತುತ್ತಿವೆ ಎಂಬ ಕಟು ಟೀಕೆಯನ್ನು ಮಾಡಿದ್ದಾರೆ. ಇಂತಹ ಕ್ರಮ ಸಂವಿಧಾನದಲ್ಲಿ ಪ್ರಸ್ತಾಪವಾಗಿರುವ ಸಮಗ್ರತಾ ದೃಷ್ಟಿಗೆ ಸಂಪೂರ್ಣವಾಗಿ ವಿರುದ್ಧವಾಗಿದೆ ಎಂದು ಎಚ್ಚರಿಸಿದ್ದಾರೆ. ಬ್ರಿಟೀಷರು ಮಾಡಿದಂತೆ

ಪ್ರತ್ಯೇಕವಾದ "ಪರಿಶಿಷ್ಟ ಪ್ರದೇಶಗಳನ್ನು" ಸೃಷ್ಟಿಸುವ ವಿಚಾರವನ್ನು ನಾವು ಮಾಡುವುದಿದ್ದರೆ ಅದರಿಂದ ವಿಘಟನೆಯನ್ನು ನಾವೇ ಪ್ರೋತ್ಸಾಹಿಸಿದಂತಾಗುತ್ತದೆ. ಎಂದೂ ಕೂಡ ಅವರು ತಿಳಿಸಿದ್ದಾರೆ.

ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸುತ್ತಿವೆ. ಅದಕ್ಕಾಗಿಯೇ ಪಂಚವಾರ್ಷಿಕ ಯೋಜನೆಗಳನ್ನು ಅನುಷ್ಠಾನಕ್ಕೆ ತಂದು ಸಾಕಷ್ಟು ದೊಡ್ಡ ಮೊತ್ತದಲ್ಲಿ ಹಣ ಒದಗಿಸಲಾಗುತ್ತದೆ. ಅರಣ್ಯವಾಸಿಗಳಾದ ಬುಡಕಟ್ಟು ಸಮುದಾಯಗಳಿಗೆ ಅಭಿವೃದ್ಧಿ ಮತ್ತು ಪ್ರಗತಿಗಾಗಿ ಅರಣ್ಯ ನೀತಿಗಳು ಅಡ್ಡಿ ಮಾಡುತ್ತವೆ. ದಿವಂಗತ ಪ್ರಧಾನ ಮಂತ್ರಿಗಳಾದ ಜವಹಾರ್ ಲಾಲ್ ನೆಹರೂರವರು ೧೯೫೮ರಲ್ಲಿ ಅರಣ್ಯದಲ್ಲಿರುವ ಬುಡಕಟ್ಟು ಸಮುದಾಯಗಳಿಗೆ ಅನುಕೂಲವಾಗಬೇಕೆಂಬ ಉದ್ದೇಶದಿಂದ ಅರಣ್ಯ ನೀತಿ ನಿಯಮಗಳಿಗಾಗಿ ಹಾಗೂ ಜನರ ರಕ್ಷಣೆಗಾಗಿ "ಪಂಚಶೀಲ" ವೆಂಬ ಸೂತ್ರವನ್ನು ಮಂಡಿಸಿ ಇದೊಂದು ಬುಡಕಟ್ಟು ಸಮುದಾಯದವರಿಗೆ ಎಲ್ಲಾ ರೀತಿಯಿಂದ ಬೆರೆಯಲು ಮತ್ತು ವಿವಿಧತೆಯಲ್ಲಿ ಏಕತೆ ತರಲು ಸಾಧ್ಯವೆಂದು ತಿಳಿಸಿದರು.

ವೆರಿಯರ್ ಎಲ್ವಿನ್‌ರವರ "ದಿ ಫಿಲಾಸಫಿ ಆಫ್ ನೇಫಾ"(The Philosophy of NEFA) ಎಂಬ ಕೃತಿಗೆ ತಾವು ಬರೆದಿರುವ ಮುನ್ನುಡಿಯಲ್ಲಿ ಪಂಡಿತ್ ಜವಾಹರ್‌ಲಾಲ್ ನೆಹರೂರವರು "ಆದಿವಾಸಿ ಪಂಚಶೀಲ" ಎಂಬುದಾಗಿ ಐದು ತತ್ವಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಇವು ನೇರವಾಗಿ ಆದಿವಾಸಿಗಳ ಪುನರ್ವಸತೀಕರಣಕ್ಕೆ ಸಂಬಂಧಿಸಿದ್ದಾಗಿವೆ. ಅವು ಈ ಕೆಳಗಿನಂತಿವೆ:

೧. ಬುಡಕಟ್ಟು ಸಮುದಾಯಗಳ ಜೀವನ ವಿಧಾನದ ಮೇಲೆ ಏನನ್ನೂ ಒತ್ತಾಯ ಪೂರ್ವಕವಾಗಿ ಹೇರಕೂಡದು. ಅವರ ಪದ್ಧತಿಯ ಮೂಲಕವೇ ಅವರನ್ನು ಮೇಲೆತ್ತುವ ಪ್ರಯತ್ನ ನಡೆಸುವುದು ವಿಹಿತವಾದುದು. ಆದಿವಾಸಿ ಕಲೆ ಮತ್ತು ಸಂಸ್ಕೃತಿಯ ಅಭಿವೃದ್ಧಿಗೆ ನಮ್ಮಿಂದ ಸಾಧ್ಯವಾಗುವ ಎಲ್ಲಾ ಪ್ರೋತ್ಸಾಹ ಮತ್ತು ಸಹಾಯ ನೀಡುವುದು ಅಗತ್ಯ.

೨. ಬುಡಕಟ್ಟು ಸಮುದಾಯಗಳು ನೆಲೆಸಿರುವಂತಹ ಪ್ರದೇಶಗಳ ಮೇಲೆ ಮತ್ತು ಅರಣ್ಯಗಳ ಮೇಲೆ ಅವರು ಹೊಂದಿರುವ ಹಕ್ಕನ್ನು ಗೌರವಿಸುವುದು ಅಗತ್ಯ.

೩. ಆಡಳಿತಾತ್ಮಕ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ನೇರವಾಗಿ ಭಾಗವಹಿಸಲು ಸಾಧ್ಯವಾಗುವಂತೆ ಬುಡಕಟ್ಟು ಸಮುದಾಯಗಳಿಗೆ ಶಿಕ್ಷಣ ನೀಡುವುದು ಅಗತ್ಯ. ಈ ಕಾರ್ಯಗಳಲ್ಲಿ ಅವರಿಗೆ ತರಬೇತಿ ನೀಡಲು ಹೊರಗಡೆಯ ತಾಂತ್ರಿಕ ಸಿಬ್ಬಂದಿ ವರ್ಗದವರು ಮಹತ್ವದ ಪಾತ್ರ ನಿರ್ವಹಿಸಬೇಕಾಗುವುದು. ಆದರೆ ಬುಡಕಟ್ಟು ಸಮುದಾಯಗಳಿಗೆ ದಿಗಿಲು ಹುಟ್ಟಿಸುವ ರೀತಿಯಲ್ಲಿ ನಾಗರಿಕ ಸಿಬ್ಬಂದಿ ವರ್ಗದವರನ್ನು ದೊಡ್ಡ ಸಂಖ್ಯೆಯಲ್ಲಿ ಕಳುಹಿಸುವುದು ಸೂಕ್ತವಲ್ಲ.

೪. ಬುಡಕಟ್ಟು ಸಮುದಾಯ ಪ್ರದೇಶಗಳಲ್ಲಿ ಒಂದೇ ಬಾರಿಗೆ ಹಲವಾರು ಯೋಜನೆಗಳನ್ನು ಪ್ರಕಲ್ಪ [Project]ಗಳನ್ನು ಹಾಕಿಕೊಳ್ಳಕೂಡದು. ಹಾಗೂ ಅವರ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಸ್ಥೆಗಳೊಂದಿಗೆ ಸ್ಪರ್ಧಿಸುವ ರೀತಿಯಲ್ಲಿ ನಮ್ಮ ಕಾರ್ಯಯೋಜನೆಗಳಿರುವುದೂ ಸರಿಯಲ್ಲ.

೫. ಬುಡಕಟ್ಟು ಸಮುದಾಯಗಳ ಕಲ್ಯಾಣ ಕಾರ್ಯದ ಸಾಧನೆಯನ್ನು ಅವರಲ್ಲಿ ವ್ಯಕ್ತಿತ್ವ ಮತ್ತು ಕರ್ತೃತ್ವದಲ್ಲಿನ ಪ್ರಗತಿಯ ಮೂಲಕ ಅಳೆಯಬೇಕೇ ವಿನಃ ಕೇವಲ ಅಂಕಿ-ಸಂಖ್ಯೆಗಳ ಮೂಲಕ ಅಥವಾ ಅವರಿಗಾಗಿ ಖರ್ಚು ಮಾಡಿರುವ ಹಣದ ಮೊತ್ತದ ಮೂಲಕವಲ್ಲ.

ಇಂತಹ ಸದುದ್ದೇಶ ಕಾರ್ಯಗಳಿಗೆ ಆಗಾಗ್ಗೆ ಕಾರ್ಯಕ್ರಗಳ ಅನುಷ್ಠಾನದ ಬಗ್ಗೆ ಮೌಲ್ಯಮಾಪನ(Evaluation) ಅತ್ಯಂತ ಸಮಯೋಚಿತ ಸಾಧನ. ಇದರಿಂದ ಮೂಲ ಸ್ವರಪದ ಲೋಪದೋಷದ ಮತ್ತು ಅಲ್ಲಿ ಬರುವ ಅಡ್ಡಿ-ಅಡಚಣೆಗಳ ಪರಿಚಯವಾಗಿ ಅವನ್ನು ಸೂಕ್ತವಾಗಿ ಮತ್ತು ಸಫಲವಾಗಿ ಎದುರಿಸಿ ಸುಲಭವಾಗಿ ಯಶಸ್ಸು ಸಂಪಾದಿಸಲು ಮಾರ್ಗ ಅಥವಾ ದಿಕ್ಕು-ದೆಶೆ ಸಿಗುತ್ತದೆ. ಸರ್ಕಾರದಿಂದ ಸಿಗುವ ಧನ ಜನೋಪಯೋಗಕ್ಕಾಗಿ ಸೀಮಿತವಾಗಿದ್ದು, ಯಾವ ಜನರಿಗೋಸ್ಕರವಾಗಿ ಆ ಧನ ವ್ಯಯಸಲ್ಪಡುವುದೋ ಅದಕ್ಕಾಗಿ ಅದರ ಸಾಫಲ್ಯಕ್ಕಾಗಿ ಯಶಸ್ವಿ ಹೋರಾಟವೂ ಒಂದು ಈ ರೀತಿಯ ಕಾರ್ಯಕ್ರಮಗಳ ಒಂದು ಅಂಗ.

ಬುಡಕಟ್ಟು ಸಮುದಾಯಗಳಿಗಾಗಿ ರೂಪಿಸಿದ ಅನೇಕ ರೀತಿಯ ಕಲ್ಯಾಣ ಕಾರ್ಯಕ್ರಮಗಳು ಆರೋಗ್ಯ, ಶಿಕ್ಷಣ ಕ್ಷೇತ್ರದಲ್ಲಿ ಹಾಗೂ ಆರ್ಥಿಕ ಸ್ಥಿತಿಯನ್ನು ಬುಡಕಟ್ಟು ಸಮುದಾಯಗಳ ರೀತಿ-ನೀತಿಗಳಲ್ಲಿ ಸುಧಾರಣೆ ತಂದು ಅವರ ಜೀವನಕ್ಕೊಂದು ಸ್ಥಿರತೆ ಒದಗಿಸುವುದು ಇತರ ಜನರೊಡನೆ ಹೊಂದಿಕೊಳ್ಳಲು ಸಹಾಕಾರಿಯಾಗುವುದರಲ್ಲಿ ಸಂದೇಹವಿಲ್ಲ. ಯೋಜನಾ ಬದ್ಧ ಕಲ್ಯಾಣ ಕಾರ್ಯಕ್ರಮಗಳನ್ನು ಮತ್ತು ಸರ್ಕಾರದ ಅಶೋತ್ತರಗಳನ್ನು ಅಂದರೆ ಅವರ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಲು ಪ್ರಯತ್ನ ಪಡುವಲ್ಲಿ ಬುಡಕಟ್ಟು ಸಮುದಾಯಗಳ ಕಾರ್ಯಶೀಲತೆ ಹಾಗೂ ಸಹಕಾರ ಅಗತ್ಯ.

ಬುಡಕಟ್ಟು ಸಮುದಾಯವನ್ನು ಉದ್ಧಾರ ಮಾಡುವ ಕಾರ್ಯಕ್ರಮಗಳು ನಿಜವಾಗಿಯೂ ಅವರನ್ನು ಉದ್ಧಾರ ಮಾಡುತ್ತಿಲ್ಲ. ಬದಲಿಗೆ ಅವರನ್ನು ಶೋಷಣೆ ಮಾಡುತ್ತಿವೆ. ಬುಡಕಟ್ಟು ಜನರಿಗೆ ಅವರದ್ದೇ ಆದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಬದುಕು ಇದೆ. ಎರಡನೆಯದಾಗಿ ಚಾರಿತ್ರಿಕವಾಗಿ ಅವರು ರೂಢಿಸಿಕೊಂಡು ಬಂದ ಬದುಕಿಗೆ ಅನುಗುಣವಾಗಿ ಅವರನ್ನು ಬದುಕಲು ಬಿಡಿ ಎನ್ನುವುದು ಎರಡನೆ ವಾದ. ನನ್ನ ಪ್ರಕಾರ ಈ ಎರಡು ವಾದಗಳು ಬೇರೆ ಬೇರೆ ಅಲ್ಲ. ಒಂದೇ ಸಮಸ್ಯೆಯ ಎರಡು ಮುಖಗಳು. ಒಂದು ವೇಳೆ ಅವರನ್ನು ಉದ್ಧಾರ ಮಾಡುವ ಯೋಜನೆಗಳನ್ನು ನಿಜವಾಗಿಯೂ ಅವರನ್ನು ಉದ್ಧಾರ ಮಾಡುತ್ತಿದ್ದರೆ ಎರಡನೆ ಪ್ರಶ್ನೆಯೇ ಉದ್ಭವ

ಆಗುತ್ತಿರಲಿಲ್ಲ. ಎರಡನೇ ಪ್ರಶ್ನೆ ಯಾಕೆ ಉದ್ಭವ ಆಗಿದೆ ಎಂದರೆ ಮೊದಲಿನ ಕೆಲಸ ಪರಿಪೂರ್ಣವಾಗಿ ಆಗಿಲ್ಲ ಎನ್ನುವ ಕಾರಣದಿಂದ.

ಬುಡಕಟ್ಟು ಸಮುದಾಯಕ್ಕೆ ಅವರದ್ದೇ ಆದ ಒಂದು ಬದುಕಿದೆ, ಅದರ ಪ್ರಕಾರ ಬದುಕಲಿ ಬಿಡಿ ಎನ್ನುವ ವಾದವನ್ನು ಮುಂದಿಟ್ಟ ಕೂಡಲೇ ಕೆಲವು ಪ್ರಶ್ನೆಗಳು ಹುಟ್ಟುತ್ತವೆ. ಒಂದು ಅದು ಸಾಧ್ಯವೇ? ಈಗ ಬೇಡ ಹಿಂದೆ ಅದು ಸಾಧ್ಯವಾಗಿತ್ತೆ? ಹಿಂದೆ ಅನ್ನುವಾಗ ವಸಾಹತು ಕಾಲ ಅಥವಾ ಪರದೇಶಿ ಆಳ್ವಿಕೆ ನಮ್ಮ ಕಣ್ಣ ಮುಂದೆ ಬರುತ್ತದೆ. ವಸಾಹತು ಆಳ್ವಿಕೆಗೆ ನಮ್ಮಲ್ಲಿನ ಎಲ್ಲವೂ ಸರಕುಗಳೇ. ಸರಕನ್ನಾಗಿ ಪರಿವರ್ತಿಸುವ ಅವರ ಕಾಯಕದಲ್ಲಿ ಕಾಡು, ನಾಡು ಎನ್ನುವ ವ್ಯತ್ಯಾಸ ಇಲ್ಲ. ಯಾವುದರಿಂದ ಹೆಚ್ಚು ಲಾಭ ಬರುತ್ತದೋ ಅದನ್ನು ಅವರು ನಿರ್ದಾಕ್ಷಣ್ಯವಾಗಿ ವಶಪಡಿಸಿಕೊಂಡಿದ್ದಾರೆ. ಕೆಲವು ಪ್ರದೇಶದ ಕಾಡುಗಳು ಕಾಫಿ, ಟೀ, ತೋಟಗಳಾಗಿ ಪರಿವರ್ತನೆಯಾದರೆ ಇನ್ನೂ ಕೆಲವು ಪ್ರದೇಶದ ಕಾಡುಗಳು ರೈಲ್ವೆ ಹಳಿಗಳಾಗಿ ನಾಶವಾದವು. ಹೀಗೆ ಎಲ್ಲವನ್ನು ಸರಕನ್ನಾಗಿಸುವ ವಸಾಹತು ಆಳ್ವಿಕೆ ಬಗ್ಗೆ ನಮಗೆಲ್ಲರಿಗೂ ಸಾಕಷ್ಟು ತಿಳಿದಿದೆ. ಈ ಬಗ್ಗೆ ಬೇಕಾದಷ್ಟು ಚರ್ಚೆಗಳು ನಡೆದಿವೆ. ಬುಡಕಟ್ಟು ಬದುಕು ನಾಶವಾಗುವುದರಲ್ಲಿ ಅದೇ ಪ್ರಮುಖ ಪಾತ್ರ ವಹಿಸಿದೆ ಎನ್ನುವುದು ಒಂದು ಸಾರ್ವಕಾಲಿಕ ಸತ್ಯ. ವಸಾಹತು ಪೂರ್ವದಲ್ಲಿ ನಮ್ಮ ಬುಡಕಟ್ಟಿನವರ ಬದುಕು ಹೇಗಿತ್ತು? ನಮ್ಮ ಸಮಾಜದ ಮೇಲ್‌ವರ್ಗದವರಿಂದ ಬುಡಕಟ್ಟು ಬದುಕಿಗೆ ತೊಂದರೆಯಾಗಿಲ್ಲವೇ? ಒಂದು ವೇಳೆ ಬ್ರಿಟೀಷರು ಬರದಿದ್ದರೆ ನಮ್ಮ ಬುಡಕಟ್ಟು ಅಥವಾ ಸಮಾಜದ ಕೆಳವರ್ಗದವರ ಸ್ಥಿತಿ ಈಗಿರುವುದಕ್ಕಿಂತ ಉತ್ತಮ ಇರುತ್ತಿತ್ತೇ? ಈ ಎಲ್ಲ ಪ್ರಶ್ನೆಗಳು ಹೆಚ್ಚು ಕಡಿಮೆ ನಮ್ಮ ಮುಖ್ಯವಾಹಿನಿ ಮತ್ತು ಬುಡಕಟ್ಟು ಜನರ ಸಂಬಂಧ ಸುತ್ತ ಇವೆ. ಜತೆಗೆ ಈ ಎಲ್ಲವೂ ಚರಿತ್ರೆಗೆ ಸೇರಿದವು. ನಿಖರವಾಗಿ ಇದು ಹೀಗೆ ಎಂದು ತೀರ್ಮಾನಕ್ಕೆ ಬರುವುದು ಕಷ್ಟ. ಚರಿತ್ರೆಯಲ್ಲಿ ಪ್ರತಿಯೊಂದು ವಿವರಣೆಯನ್ನು ಕೂಡ ಪ್ರಶ್ನಿಸಲ್ಪಡಬಹುದು. ಹಾಗೆಂದು ಈ ಪ್ರಶ್ನೆಗಳನ್ನು ಚರ್ಚಿಸದೆ ಬಿಡುವುದು ಸರಿಯಲ್ಲ. ಯಾಕೆಂದರೆ ಬುಡಕಟ್ಟು ಬದುಕಿನ ಬಗ್ಗೆ ಚರ್ಚೆ ನಡೆಯುತ್ತಿರುವುದೇ ಕೆಲವೊಂದು ಗೃಹೀತಗಳನ್ನು ಇಟ್ಟುಕೊಂಡಿದ್ದಾರೆ. ಆದುದ್ದರಿಂದ ಅವರು ಸುಖದಿಂದ ಇರಲು ಕೆಲವೊಂದು ಮೂಲಭೂತ ಸುಧಾರಣೆಗಳು ಆಗಬೇಕಾಗಿದೆ.

ಬುಡಕಟ್ಟು ಸಂಸ್ಕೃತಿಯನ್ನು ವಿಕಾರಗೊಳಿಸುವಲ್ಲಿ ವಸಾಹತುಶಾಹಿ ವ್ಯವಸ್ಥೆಯ ಕರಿನೆರಳು ಪ್ರಮುಖ ಪಾತ್ರ ವಹಿಸಿದೆ. ಸಂಸ್ಕೃತಿಯ ಚಿಂತಕರಾದ ಡಾ.ಡಿ.ಆರ್ ನಾಗರಾಜ್‌ರವರು ವಸಾಹತುಶಾಹಿ ಪ್ರಭಾವದ ಬಗ್ಗೆ ಹೀಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. "ಸಮಾಜಗಳಿಗೆ ವಿಚಿತ್ರ ರೀತಿಯ ಮರೆವು ಆವರಿಸಿಕೊಂಡಿದೆ. ಅದರಲ್ಲೂ ತಾನು ಚಿಂತಿಸುತ್ತಿದ್ದ, ಪ್ರತಿಕ್ರಿಯಿಸುತ್ತಿದ್ದ, ಭಾವಿಸುತ್ತಿದ್ದ ಕ್ರಮಗಳು ಮರೆತು ಹೋಗಿರುವುದು ದೊಡ್ಡ ದುರಂತವಾಗಿದೆ. ವಸಾಹತುಶಾಹಿ ವ್ಯವಸ್ಥೆಯ ನಂತರ ಭಾರತೀಯ ಸಮಾಜಕ್ಕೆ ಈ ರೀತಿಯ ವಿಸ್ಮೃತಿ ಈಗ ಆವರಿಸಿ ಬಿಟ್ಟಿದೆ"

ಬುಡಕಟ್ಟು ಸಮುದಾಯಗಳಲ್ಲಿ ಸ್ವಂತ ಆಸ್ತಿಯ ಕಲ್ಪನೆ ಇರಲಿಲ್ಲ. ಇವರು ಪ್ರಾರಂಭದಲ್ಲಿ ಆಹಾರ ಸಂಗ್ರಹಣೆ ಮಾಡುತ್ತಿದ್ದರು ಮತ್ತು ಬೇಟೆಯಾಡುತ್ತಿದ್ದರು. ನಂತರ

ಕೃಷಿಯ ಕಡೆ ಗಮನಕೊಡುವುದರ ಮೂಲಕ ಒಂದೆಡೆ ನೆಲೆನಿಲ್ಲುವಂತಾದರು. ಪ್ರಾರಂಭದಲ್ಲಿ ಇವರು 'ಕುಮರಿ' ಬೇಸಾಯ ಮಾಡುತ್ತಿದ್ದರು. ಇವರು ಒಂದೆಡೆ ನಿಂತು ಬದುಕಿದವರಲ್ಲ. ಜಾಗದಿಂದ ಜಾಗಕ್ಕೆ ಸ್ಥಳಂತರ ಹೊಂದುತ್ತಿದ್ದರು. ಯಾವುದೇ ಭೂಮಿಯಲ್ಲಿ ಕಾಡನ್ನು ಕಡಿದರೂ ಏಳು ವರ್ಷ ಬಿಟ್ಟರೆ ಅದು ಮತ್ತೆ ಕಾಡಾಗಿ ಪರಿವರ್ತಿತವಾಗುತ್ತಿತ್ತು. ನೇಗಿಲನ್ನು ಉಪಯೋಗಿಸದೆ ಕೃಷಿ ಪದ್ಧತಿಯನ್ನು ಅನುಸರಿಸುತ್ತಿದ್ದರು. ಕಾಡಿನಲ್ಲಿ ಕೃಷಿ ಮಾಡಿದರೂ ಸಮತೋಲನ ಕಾಪಾಡಿಕೊಂಡು ಬರುತ್ತಿದ್ದರು. ಆದರೆ ಇಂದು ವಸಾಹತುಶಾಹಿ ವ್ಯವಸ್ಥೆಯ ಪ್ರಭಾವದಿಂದ ಅಗಾದವಾದ ಬದಲಾವಣೆಗಳಾಗಿವೆ.

ಕ್ರಿ.ಶ. ೧೪೯೮ರಲ್ಲಿ ವಾಸ್ಕೋಡಿಗಾಮ ಈ ದೇಶದ ಪಶ್ಚಿಮ ಪ್ರದೇಶದ ಕಲ್ಲಿಕೋಟೆ ತಲುಪಿದಾಗಲೇ ಪಶ್ಚಿಮಘಟ್ಟಗಳ ಕಾಡುಗಳಲ್ಲಿನ ಅರ್ಥವ್ಯವಸ್ಥೆ ರೂಪುಗೊಳ್ಳತೊಡಗಿತು. ಭಾರತದ ಸಾಂಬಾರು ಪದಾರ್ಥಗಳ ಆಸೆಯಿಂದ ಬಂದ ಬ್ರಿಟೀಷರು ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಆ ಮೂಲಕ ತಮ್ಮ ಆರ್ಥಿಕ ಹಿಡಿತವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನ ಮಾಡಲಾಯಿತು. ಈ ವಸಾಹತುಗಳ ತೀವ್ರವಾದಂತಹ ವ್ಯಾಪರದ ಚಟುವಟಿಕೆಗಳ ನಡುವೆ ಇಲ್ಲಿನ ಕಾಡುಗಳು ವಾಣಿಜ್ಯದ ತೋಟಗಳಾಗಿ ಪರಿವರ್ತಿತವಾಗತೊಡಗಿದವು.

ವಸಾಹತುಶಾಹಿ ಪೂರ್ವದಲ್ಲಿ ಬುಡಕಟ್ಟುಗಳ ಬದುಕಿನ ಬಗ್ಗೆ ಐತಿಹಾಸಿಕ, ಸಾಮಾಜಿಕ, ಆರ್ಥಿಕ ಇತ್ಯಾದಿ ಮೂಲಗಳಿಂದ ತೀರ್ಮಾನಕ್ಕೆ ಬರಬಹುದು. ನಮ್ಮ ಸಂಸ್ಕೃತಿಯ ಅಡಿಪಾಯವೆಂದು ಪ್ರಚಾರ ಪಡೆದಿರುವ ರಾಮಾಯಣ, ಮಹಾಭಾರತಗಳಂತಹ ಪೌರಾಣಿಕ ಗ್ರಂಥಗಳಿಂದ ಈ ವಿಶ್ಲೇಷಣೆಯನ್ನು ಆರಂಭಿಸಲಾಗಿದೆ. ರಾಮಾಯಣದ ಅರ್ಧದಷ್ಟು ಘಟನೆಗಳು ನಡೆಯುವುದೇ ಅರಣ್ಯದಲ್ಲಿ. ಹಾಗೆಂದು ರಾಮಾಯಣದ ಮುಖ್ಯ ಪಾತ್ರಧಾರಿಗಳನ್ನು ಬುಡಕಟ್ಟು ಸಮುದಾಯದವರೆಂದು ಕರೆಯಲು ಸಾಧ್ಯವಿಲ್ಲ. ಯಾಕೆಂದರೆ ಅವರು ಊರಿನ ಮೇಲ್‌ವರ್ಗಕ್ಕೆ ಸೇರಿದವರೆಂದು ರಾಮಾಯಣ ತುಂಬಾ ಸ್ಪಷ್ಟವಾಗಿ ತಿಳಿಸುತ್ತದೆ. ಊರಿನ ಸಮಸ್ಯೆ ಹಿಡಿದುಕೊಂಡು ಅರಣ್ಯವಾಸಿಗಳಾಗುತ್ತಾರೆ. ಆ ಸಮಸ್ಯೆ ಪರಿಹಾರಕ್ಕೆ ಅರಣ್ಯವಾಸಿಗಳನ್ನು ಬಳಸಿಕೊಳ್ಳುತ್ತಾರೆ. ತಕರಾರುಗಳನ್ನು ಪರಿಹರಿಸಿ ಅವರನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವ ಉದ್ದೇಶ ಇದ್ದರೆ ಅದನ್ನು ಬೇರೆ ರೀತಿಯಲ್ಲಿ ನೋಡಬಹುದಿತ್ತು. ಅದಕ್ಕೋಸ್ಕರ ಯಾವುದೋ ಸಮುದಾಯದ ಮೌಲ್ಯಗಳ ದೃಷ್ಟಿಯಿಂದ ಸಹಜವಾಗಿ ನಡೆದ ಕ್ರಿಯೆಯನ್ನು ಮತ್ತೊಂದು ಸಮುದಾಯದ ಮೌಲ್ಯದಿಂದ ಅಳೆದು ತಪ್ಪೆಂದು ತೀರ್ಮಾನಕ್ಕೆ ಬರುವುದು ಸ್ವಾರ್ಥ ಸಾಧನೆ ಅಲ್ಲದೆ ಬೇರೆನೂ ಆಗಲು ಸಾಧ್ಯವಿಲ್ಲ. ಇಲ್ಲೆಲ್ಲಾ ನಾಡಿನ ಸಮಸ್ಯೆ ಪರಿಹಾರಕ್ಕೆ ಕಾಡನ್ನು ಬಳಸಿಕೊಳ್ಳಲಾಗಿದೆ. ನಾಡಿನ ಜನರು ತಮ್ಮ ಮೌಲ್ಯಗಳಿಂದ ಬುಡಕಟ್ಟು ಜನರ ಬದುಕನ್ನು ಅಳೆದು ತೀರ್ಮಾನಕ್ಕೆ ಬರುವ ಕ್ರಮ ರೂಢಿಯಾಗಿತ್ತು. ಅದು ಅನಿವಾರ್ಯವಾಗಿ ಅಂದಿನ ಅರಣ್ಯವಾಸಿಗಳಿಗೆ ಸಮಸ್ಯೆ ಸೃಷ್ಟಿಸಿದೆ. ಅವರ ಬದುಕನ್ನು ಸ್ಥಿತ್ಯಂತರಗೊಳಿಸಿದೆ.

ಇನ್ನು ಚರಿತ್ರೆ ಸಂದರ್ಭದಲ್ಲಿ ಬುಡಕಟ್ಟು ಬದುಕನ್ನು ಬುಡಮೇಲುಗೊಳಿಸಿದ

ಬುಡಕಟ್ಟು ಜನರ ಬದುಕನ್ನು ಆವರಿಸಿಕೊಳ್ಳುವ ಪ್ರವೃತ್ತಿ ನಮ್ಮ ಸಂಸ್ಕೃತಿಯ ಭಾಗವೂ ಆಗಿತ್ತು. ನಂತರದ ವಸಾಹತು ಕಾಲದಲ್ಲಿ ಅರಣ್ಯ ಪ್ರದೇಶದ ಅಳತೆ ನಡೆಯಿತು. ವ್ಯಾಪ್ತಿ ನಿರ್ಧಾರವಾಯಿತು. ಅರಣ್ಯ ವಸಾಹತು ಸರಕಾರದ ಸೊತ್ತಾಯಿತು. ಸುತ್ತಲಿನ ಜನರು ಅರಣ್ಯ ಪ್ರವೇಶ ಮಾಡುವುದು ನಿಷೇಧವಾಯಿತು. ಸಾವಿರಾರು ವರ್ಷಗಳಿಂದ ಅರಣ್ಯದಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನರು ಕಾನೂನು ಬಾಹಿರವಾಗಿ ಅರಣ್ಯ ಪ್ರದೇಶದಲ್ಲಿ ಇರುವವರು ಎಂದಾಯಿತು. ಹಲವಾರು ಅರಣ್ಯಗಳು ಟೀ, ಕಾಫಿ, ರಬ್ಬರ್ ತೋಟಗಳಾಗಿ ಪರಿವರ್ತನೆಗೊಂಡವು. ಅರಣ್ಯ ಪ್ರದೇಶ ವಿಸ್ತಾರವಾಗಿ ಇದ್ದಕಡೆ ಆ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನರು ಇನ್ನೂ ಹಿಂದಕ್ಕೆ ಸರಿದರು. ಆದರೆ ಎಷ್ಟೋ ಕಡೆ ಅಂತಹ ಸಾಧ್ಯತೆಗಳಿಲ್ಲದೆ ವಾಣಿಜ್ಯ ಬೆಳೆಗಳನ್ನು ಬೆಳೆಯುವ ತೋಟಗಳಲ್ಲಿ ಕೂಲಿಯಾಗಿ ದುಡಿಯುವುದು ಅನಿವಾರ್ಯವಾಯಿತು.

ವಸಾಹತು ಸರಕಾರದ ಆಳ್ವಿಕೆ ಹೋದ ನಂತರ ಬುಡಕಟ್ಟು ಜನರು ನೆಮ್ಮದಿಯಿಂದ ಬದುಕಬಹುದು ಎನ್ನುವ ಒಂದು ನಂಬಿಕೆ ಇತ್ತು. ಈ ನಂಬಿಕೆಯ ಹಿಂದೆ ಹಲವಾರು ಇತರ ನಂಬಿಕೆಗಳು ಕೆಲಸ ಮಾಡಿವೆ. ಅರಣ್ಯಗಳನ್ನು ನಂಬಿಕೊಂಡು ಬಂದ ಲಕ್ಷಾಂತರ ಬುಡಕಟ್ಟು ಸಮುದಾಯಗಳು ನೆಲೆ ಕಳೆದುಕೊಂಡಿವೆ. ಉದ್ಯೋಗ ಅರಸಿ ನಗರ ಪ್ರದೇಶಗಳಿಗೆ ವಲಸೆ ಹೋಗುವುದು ಮತ್ತು ಅಲ್ಲಿನ ಜೋಪಡಿ ಪಟ್ಟಿಗಳಲ್ಲಿ ನೆಲೆ ಕಾಣುವುದು ಸಾಮಾನ್ಯವಾಯಿತು. ಸರಕಾರ ಅವರಿಗೆ ಯಾವುದೇ ತೊಂದರೆ ಕೊಡದೆ ಅವರನ್ನು ಅವರ ಪಾರಂಪರಿಕ ಬದುಕಿಗೆ ಅನುಗುಣವಾಗಿ ಬದುಕಲು ಬಿಡಬೇಕು. ವೆರಿಯರ್ ಎಲ್ವಿನ್‌ರವರಂತಹ ತರಹದ ಹಲವಾರು ಸಂಶೋಧಕರು, ಗಾಂಧೀಜಿಯವರ ಗ್ರಾಮೀಣ ಬದುಕಿನ ಸೂತ್ರಗಳಿಂದ ಪ್ರಭಾವಿತರಾದ ಸ್ವಯಂಸೇವಕರು, ಅರಣ್ಯ ಪ್ರದೇಶ ಬುಡಕಟ್ಟು ಜನರ ಸಮುದಾಯ ನೀತಿಗೆ ಅನುಸಾರ ನಿರ್ವಾಹಕರಾಗಿದ್ದಾರೆ.

ಆಶ್ರಮ ಶಾಲೆ (ಬುಡಕಟ್ಟು ಮಕ್ಕಳಿಗೆ ಮೀಸಲಿರುವ ವಸತಿ ಶಾಲೆ) ಇತ್ಯಾದಿ ಅಭಿವೃದ್ಧಿ ಕಾರ್ಯಕ್ರಮಗಳು ಮಾತ್ರ ಕರ್ನಾಟಕದಲ್ಲಿ ಇವೆ. ಜನರ ಬದುಕು ತುಂಬಾ ಹದಗೆಟ್ಟಿದೆ. ಬುಡಕಟ್ಟು ಜನರು ಮುಖ್ಯವಾಹಿನಿಯಿಂದ ದೂರವೇ ಇದ್ದಾರೆ. ತಮ್ಮ ಉದ್ಧಾರವನ್ನು ತಾವೇ ಮಾಡಿಕೊಳ್ಳಲಿ ಬುಡಕಟ್ಟಿನವರಿಗೆ ಅವರದ್ದೇ ಆದ ಚಾರಿತ್ರಿಕವಾಗಿ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಬದುಕಿದೆ. ಚಾರಿತ್ರಿಕವಾಗಿ ಅವರು ರೂಪಿಸಿಕೊಂಡು ಬಂದ ಬದುಕಿಗೆ ಅನುಗುಣವಾಗಿ ಅವರಿಗೆ ಬದುಕಲು ಅವಕಾಶ ಮಾಡಿಕೊಡುವುದು ಅವರ ಅಭಿವೃದ್ಧಿಗೆ ಸರಿಯಾದ ಕ್ರಮ. ಬುಡಕಟ್ಟು ಜನರು ಇಷ್ಟ ಪಡಲಿ ಬಿಡಲಿ, ಅವರನ್ನ ಮುಖ್ಯವಾಹಿನಿಯ ಕಡೆ ತರುವುದು ಅನಿವಾರ್ಯ ಎನ್ನುವುದು ನನ್ನ ಅಭಿಪ್ರಾಯವಾಗಿದೆ.

ಬುಡಕಟ್ಟು ಜನರು ಉದ್ಧಾರವಾಗಬೇಕಾದರೆ ಪ್ರತ್ಯೇಕವಾಗಿ ಉಳಿಯಬೇಕು ಎನ್ನುವ ವಾದದ ಹಿಂದೆ ಒಂದು ಬಗೆಯ ಆದರ್ಶ ಸಮಾಜದ ಕಲ್ಪನೆ ಇದೆ. ಆದರ್ಶ ಸಮಾಜದ ರೂಪಿಸುವಿಕೆ ಮತ್ತು ಅದನ್ನು ಕಲುಷಿತಗೊಳಿಸುವಿಕೆ – ಎಷ್ಟು ಸರಿ? ಮೊದಲಿಗೆ ಬುಡಕಟ್ಟು ಜನರ ಸಾಮಾಜಿಕ/ಆರ್ಥಿಕ/ರಾಜಕೀಯ ಬದುಕು

ಉತ್ತಮವಾಗಿದೆ ಎನ್ನುವ ತೀರ್ಮಾನಕ್ಕೆ ಹೇಗೆ ಬರುತ್ತೇವೆ? ಎಂಬ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ.

ಭಾರತೀಯ ಸಂಸ್ಕೃತಿ ಬಹುಮುಖಿ ಸಂಸ್ಕೃತಿಯನ್ನು ಪ್ರತಿನಿಧಿಸುವ ಒಂದು ಸಂಕೀರ್ಣ ಭೂಪ್ರದೇಶವಾಗಿದೆ. ಪ್ರತಿಯೊಂದು ನೆಲದ ವಿವಿಧ ಭಾಷೆಗಳು, ಅಲ್ಲಿಯ ಜನರ, ಆಚಾರ-ವಿಚಾರಗಳು, ರೂಢಿಸಿಕೊಂಡಂತಹ ಮೌಲ್ಯಗಳನ್ನು ಅವಲೋಕಿಸಿದಾಗ ಸಾವಿರಾರು ಸಂಸ್ಕೃತಿಯ ವಿಶೇಷಗಳು ನಮ್ಮಲ್ಲಿ ದಿಗ್ಭ್ರಮೆವುಂಟು ಮಾಡುತ್ತವೆ. ಅಲ್ಲಿಯ ಜನತೆಯ ಉಸಿರಿನೊಡನೆ ಬೆಳೆದುಬಂದಿವೆ. ಈ ಸಾಂಸ್ಕೃತಿಕ ವಿಶೇಷಗಳ ಮೇಲೆ ವಸಹಾತುಶಾಹಿ ವ್ಯವಸ್ಥೆ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಬ್ರಿಟೀಷರು ಈ ಸಂಸ್ಕೃತಿಯ ಮೇಲೆ ಆಕ್ರಮಣ ಮಾಡದೆ ಪಟ್ಟಭದ್ರ, ಪ್ರತಿಗಾಮಿ ಧೋರಣೆಗಳ ಪ್ರಭಾವವು ಸಹ ಆಗಿರುವುದನ್ನು ಸೂಕ್ಷ್ಮವಾಗಿ ಪರಿಶೀಲಿಸಿಕೊಳ್ಳುವ ಅಗತ್ಯವಿದೆ.

ಬ್ರಿಟೀಷರ ಕಾಲದಲ್ಲಿ ಬುಡಕಟ್ಟು ಜನರ ಅಸ್ಥಿರತೆಯ ಭೀತಿ ಹೆಚ್ಚಾಗ ತೊಡಗಿತು.ಬ್ರಿಟೀಷರ ಕಾಲದಲ್ಲಿ ಭಾರತದ ವ್ಯಾಪಾರ ವ್ಯವಹಾರದಲ್ಲಿ ಏಕಸ್ವಾಮ್ಯವನ್ನು ಸ್ಥಾಪಿಸಲಾಯಿತು. ಬ್ರಿಟೀಷರು ರಾಜಕೀಯವಾಗಿ ಭಾರತವನ್ನು ಆಕ್ರಮಿಸಿಕೊಂಡರು. ತಮ್ಮ ಮೂಲೋದ್ದೇಶವಾದ ಸಾಂಬಾರು ಪದಾರ್ಥಗಳ ರಫ್ತಿಗೂ ಹೆಚ್ಚು ಗಮನಕೊಟ್ಟರು. ಇದರ ಪರಿಣಾಮವಾಗಿ ಅರಣ್ಯಗಳೆಲ್ಲಾ ಕಾಫಿ, ಟೀ, ಏಲಕ್ಕಿ, ಮೆಣಸು, ಕೋಕಾ ಹಾಗೂ ರಬ್ಬರ್ ತೋಟಗಳಾಗಿ ಪರಿವರ್ತಿತಗೊಳ್ಳ ತೊಡಗಿದವು. ಆದರೆ ಹೀಗೆ ಪರಿವರ್ತಿತಗೊಂಡ ತೋಟಗಳ ಇಡೀ ಮಾಲಿಕತ್ವವನ್ನು ಕೆಲವೇ ಮಂದಿಗೆ ವಹಿಸಿಕೊಟ್ಟು ಮೂಲನಿವಾಸಿಗಳನ್ನು ಅತಂತ್ರರನ್ನಾಗಿಸುವ ವ್ಯವಸ್ಥೆ ಬ್ರಿಟೀಷರ ಕಾಲದಲ್ಲಿ ನಡೆಯಿತ್ತು.

ಭಾರತದ ಬುಡಕಟ್ಟು ಸಮುದಾಯಗಳ ಮೇಲೆ ಬ್ರಿಟೀಷರು ಮತ್ತು ಭಾರತದ ಮಹಾ ನೇಮಿಷ್ಟರು ಉಂಟುಮಾಡಿದ ಪ್ರಭಾವ ಹಾಗೂ ಅದರಿಂದಾಗಿ ಅವರ ನಂಬಿಕೆ ಮತ್ತು ಮೌಲ್ಯಗಳ ಮೇಲಾದ ಅಪಚಾರವನ್ನು ವೆರಿಯರ್ ಎಲ್ವಿನ್ ತಮ್ಮ ಸ್ವಂತ ಅನುಭವದಿಂದ ವರ್ಣಿಸುತ್ತಾರೆ.



"ಭಾರತದದಲ್ಲಿ ಸೌಂದರ್ಯ ಅಷ್ಟೇ ಅಲ್ಲ, ಸತ್ಯದ ಮುಖ್ಯ ಶತ್ರುವೆಂದರೆ, ಅದರಲ್ಲಿಯೂ ಗುಡ್ಡಗಾಡುಗಳಲ್ಲಿ, ಮಹಾನೇಮಿಷ್ಟತೆ. ಇದು ತುಂಬ ಮುಖ್ಯವಾದುದ್ದರಿಂದ ಈ ವಿಚಾರವಾಗಿ ನಾಲ್ಕು ಮಾತು ಹೆಚ್ಚು ಹೇಳಲೇಬೇಕು. ಮನೋಧರ್ಮದಿಂದಲೇ ಆಗಲಿ, ಐತಿಹಾಸಿಕ ಅಥವಾ ಸಂಪ್ರದಾಯಿಕವಾಗಿಯೇ ಆಗಲಿ, ಭಾರತ ಮಹಾನೇಮಿಷ್ಟವಾದ ದೇಶವಲ್ಲ ಎಂದು ಒತ್ತಿ ಹೇಳುತ್ತೇನೆ. ಈ ಮಹಾನೇಮಿಷ್ಟತೆ ಬಂದು ಪಶ್ಚಿಮದಿಂದ; ಕೊಂಚಮಟ್ಟಿಗೆ ಹೇಳುವುದಾದರೆ ಪ್ರೋಟೆಸ್ಟಂಟ್ ಪಾದ್ರಿಗಳಿಂದ, ಈ ಪಾದ್ರಿಗಳು ಗಾಂಧೀಜಿಯ ಮೇಲೆ ಅವರಿಗೆ(ಗಾಂಧೀಜಿಗೆ) ಅರಿವಾಗದಂತೆಯೇ ಪ್ರಭಾವವನ್ನು ಬೀರಿದ್ದಾರೆ ಎಂದು ನನಗೆ ಸಂದೇಹ. ಈಗ ಈ ದೇಶದಲ್ಲಿ ಸ್ವಾಭಿಮಾನದ ಹಾಗೂ ಸ್ವಧರ್ಮಾಭಿಮಾನದ ಮಹಾನೇಮಿಷ್ಟತೆ ಇದೆ. ಇದು ಜೀವನದ ಎಷ್ಟೋ ಸೌಂದರ್ಯೋಪಾಸನಾ ಸಂಬಂಧವಾದ ಮೌಲ್ಯಗಳಿಗೆ ಕಂಟಕಪ್ರಾಯವಾಗಿದೆ. ಹಳ್ಳಿಯ ಜನಸಾಮಾನ್ಯರ ದೃಷ್ಟಿಯಲ್ಲಿ ನೋಡಿದರೆ ಇದು ಅವರ

ಸುಖಕ್ಕೆ ಹುಳಿಹಿಂಡಿದಂತಾಗಿದೆ.

ಗಿರಿಜನರಲ್ಲಿ ಏನು ಸಿಗುವುದೋ ಅದನ್ನು ಕಸಿದುಕೊಳ್ಳಲು ತಮ್ಮ ಇಡೀ ಜೀವನವನ್ನು ಮುಡುಪಾಗಿಟ್ಟು, ಸಮಾಜದಲ್ಲಿ ದೊಡ್ಡ ಮನುಷ್ಯರೆನಿಸಿಕೊಂಡ ಅನೇಕ ಜನರಿದ್ದಾರೆ. ನಮ್ಮಲ್ಲಿ ಅವರು ಗಿರಿಜನರನ್ನು ಶಾಖಾಹಾರಿಗಳನ್ನಾಗಿ ಬೇರೆ ಯಾವುದನ್ನೂ ಅವರಿಗೆ ಕೊಡಲಿಲ್ಲ. ಪಾನನಿರೋಧವನ್ನು ಜಾರಿಗೆ ತರಲಾಯಿತು. ಅವರಿಗೆ ಮದುವೆ ಮುಂಜಿಗಳಲ್ಲಿ ಆನಂದವೀಯುವ ಬೇರೊಂದನ್ನು ನೀಡಲಿಲ್ಲ. ಅವರ ಸರಳ ಉಡುಪು ಅಸಹ್ಯವೆಂದು ಹೇಳಿ ಅವರ ಮೇಲೆ ಹೊಸ ಆರ್ಥಿಕ ಹೊರೆಯನ್ನು ಹೊರಿಸಿದ್ದಾರೆ. ಯುವಕ ಯುವತಿಯರ ಪ್ರೇಮ ಸುಖಕ್ಕೆ ಅಡ್ಡಿ ತರಲಾಗಿದೆ. ಬಡಜನರಿಂದ ಬಣ್ಣ, ಅಂದ-ಚೆಂದ ಮತ್ತು ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಿದೆ.

ಹಿಂದೂಮತ ಒಪ್ಪಿತವಲ್ಲವೆಂಬ ಆಪಾದನೆಯನ್ನು ಕೆಲವು ಸಲ ಮಾಡಿದ್ದಾರೆ. ಹಿಂದೂಮತದ ಕೆಲವು ವಿಚಾರಗಳು ಗಿರಿಜನರಿಗೆ ಒಳ್ಳೆಯದಲ್ಲವೆಂದು ಹೇಳಿರುವುದು ನಿಜ. ಹಿಂದೂ ಸಾಮಾಜಿಕ ಸುಧಾರಕರು ಗಿರಿಜನ ಸಮಾಜದಿಂದ ಕೆಟ್ಟದ್ದನ್ನು ತೆಗೆದುಹಾಕುವ ಬದಲು, ತಂದು ಹಾಕುವ ಸಂಭವವುಂಟು.

ಮೊದಲು ಇಲ್ಲದ ಕಟ್ಟುನಿಟ್ಟಾದ ಜಾತಿಪದ್ಧತಿ, ವಿಧವಾವಿವಾಹ ನಿಷೇಧಪದ್ಧತಿ ಇವೆಲ್ಲಾ ಹಿಂದೂ ಸಾಮಾಜಿಕ ಸುಧಾರಕರು ಮಧ್ಯ ಭಾರತದ ಗಿರಿಜನರಲ್ಲಿ ತಂದ ಸುಧಾರಣೆಗಳು ಇಷ್ಟೇ ಅಲ್ಲದೆ, ಅದನ್ನು ತಿನ್ನಬಾರದು ಇದನ್ನು ಕುಡಿಯಬಾರದು ಎಂಬ ನಿಷೇಧಗಳನ್ನು ತರಲಾಗಿದೆ. ಇವೆಲ್ಲಕ್ಕಿಂತ ಹೆಚ್ಚಿನ ವಿಚಾರವೆಂದರೆ ಹಿಂದೂಮತ ಗಿರಿಜನ ಪ್ರದೇಶದಲ್ಲಿ ಹರಡಿದಂತೆ ಅವರಿಗೆ ಸಮಾಜದಲ್ಲಿ ದೊರೆಯುತ್ತಿದ್ದ ಕೀಳುಸ್ಥಾನ". ಎಲ್ವಿನರ ಈ ಮಾತುಗಳ ಹಿನ್ನೆಲೆಯನ್ನು ಗಮನಿಸಿದಾಗ, ನಮ್ಮಲಿನ ವೈದಿಕಶಾಹಿಯ ವಸಾಹತುಶಾಹಿ ವ್ಯವಸ್ಥೆ ಬುಡಕಟ್ಟು ಸಂಸ್ಕೃತಿಗಳನ್ನು ಹೇಗೆ ಸುತ್ತಿತು, ಎಂಬುದನ್ನು ಅಭಿವ್ಯಕ್ತಿಸುತ್ತದೆ.

ಆದಿವಾಸಿಗಳು ಕೇವಲ ಭಾರತದ ವೈವಿಧ್ಯತೆ ಉಳಿಯುವ ಸಲುವಾಗಿಯೇ ಕಾಡಿನಲ್ಲಿ ಪ್ರತ್ಯೇಕವಾಗಿರಕೂಡದು ಅವರು ಅಭಿವೃದ್ಧಿ ಹೊಂದಬೇಕಾದರೆ, ಕಾಡನ್ನು ಬಿಟ್ಟು ಹೊರಬರಬೇಕು ಎನ್ನುತ್ತಾರೆ. "ಆದಿಮ ಜನಾಂಗಗಳಿಗೆ ಅಭಿವೃದ್ಧಿಯ ಸಾಧ್ಯತೆಯಿಲ್ಲ ಎಂದರೆ ಅದಕ್ಕೆ ಕಾರಣ ಅವರು ಪ್ರತ್ಯೇಕತೆಯಲ್ಲಿಯೇ ಉಳಿದಿರಲು ನಿರ್ಧರಿಸಿರುವುದು. ಆದರೆ ಒಮ್ಮೆ ಅವರು ತಮ್ಮ ಕಾಡಿನ ಮೂಲೆಗಳಿಂದ ಹೊರ ಬಂದು ನಾಗರಿಕತೆಯಲ್ಲಿ ಪಾಲ್ಗೊಳ್ಳತೊಡಗಿದರೆ ಅವರ ಪ್ರಗತಿಯ ಹಾದಿಯಲ್ಲಿ ಕಂಟಕವಿರಲಾರದು, ಎಂದು ಹೇಳುವುದರ ಮೂಲಕ ಬುಡಕಟ್ಟು ಸಮುದಾಯಗಳು ಜಗತ್ತಿನ ವೇಗದ ಲಯಗಳಿಗೆ ತಕ್ಕಂತೆ ಬದಲಾವಣೆಗಳಾಗಬೇಕೆಂಬ ಸಂದೇಶವನ್ನು ಕೊಡುತ್ತಾರೆ.೨೨

### ಇರುಳಿಗರು ಹಿಂದಿನ ಸಾಮಾಜಿಕ ಸ್ಥಾನಮಾನ :

ಬಹುಕಾಲ ನಾಗರಿಕ ಜನರ ಸಂಪರ್ಕವಿಲ್ಲದೆ ಗುಡ್ಡಗಾಡುಗಳಲ್ಲಿ ವಾಸವಾಗಿದ್ದ ಈ ಜನರು ತಮ್ಮ ಮೂಲ ಸಂಸ್ಕೃತಿಯನ್ನು ತಮಗರಿವಿಲ್ಲದೇ ಉಳಿಸಿಕೊಂಡು ಬರಲು ಸಾಧ್ಯವಾಗಿದೆ. ಇವರ ಸಾಮಾಜಿಕ ವ್ಯವಸ್ಥೆಗೆ ವೇದೋಪನಿಷತ್ತುಗಳ, ಪುರಾಣ, ಧರ್ಮ ಶಾಸ್ತ್ರಗಳ ಪರಂಪರೆ ಇರುವುದಿಲ್ಲ. ಕಾಲಾನುಕಾಲದಲ್ಲಿ ತಲೆದೋರಿದ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಮಾಡಿಕೊಂಡ ನಿಯಮಗಳಿಗೆ ಹಿಂದೂ ವೈದಿಕ ಧರ್ಮಶಾಸ್ತ್ರದ ಪ್ರಭಾವ ಇರಲು ಸಾಧ್ಯವಿಲ್ಲ. ವರ್ತಮಾನ ಕಾಲದಲ್ಲಿ ತಮ್ಮ ಬುಡಕಟ್ಟು ಸಮುದಾಯಗಳ ನಿಯಮಗಳಿಗೆ ಬದ್ಧರಾಗಿ ಬದುಕನ್ನು ನಡೆಸುತ್ತಿರುವುದನ್ನು ನಾವು ಕಾಣಲು ಸಾಧ್ಯವಾಗಿದೆ.

ಇರುಳಿಗರಲ್ಲಿ ಅವರದ್ದೇ ಆದ ವಿಶಿಷ್ಟ ಸಾಮಾಜಿಕ ವ್ಯವಸ್ಥೆಯಿದೆ. ಪ್ರಾದೇಶಿಕವಾಗಿ ಒಂದೆಡೆ ವಾಸಿಸುವ ಗುಡಿಸಲವಾಸಿಗಳು, ಗುಹಾವಾಸಿಗಳು. ಅನುಕೂಲ ನೆಲೆಗಳನ್ನು ಹುಡುಕಿಕೊಂಡು ಚದುರಿದಂತೆ ಅಲ್ಲಲ್ಲೇ ವಾಸಿಸುತ್ತಿರುವುದು ಸರಿಯಷ್ಟೇ ; ಇಂಥ ಇರುಳಿಗರು ಸೇರಿ ತಮ್ಮ ಕುಲಕ್ಕೆ ನಾಡಗೌಡ, ಕಟ್ಟುಗೌಡ, ಕೋಲಕಾರ ಎಂಬ ಮುಮ್ಮನಸರನ್ನು ಪರಂಪರಾನುಗತವಾಗಿ ನೇಮಿಸಿಕೊಂಡು ಬಂದಿದ್ದಾರೆ. ಈ ಮೂವರೊಳಗೆ ನಾಡಗೌಡನೇ ಪ್ರಮುಖ ಹಾಗೂ ಹೆಚ್ಚು ಗೌರವಾಧಿಕಾರಗಳನ್ನು ಹೊಂದಿರುತ್ತಾನೆ. ಕಟ್ಟುಗೌಡ ಪ್ರಧಾನನಾದರೂ ನಾಡಗೌಡನಿಗೆ ವಿಧೇಯ. ಕೋಲಕಾರ ತಮ್ಮ ಮೇಲಿನ ಗೌಡಗಳು ಹೇಳಿದಂತೆ ಕೇಳುವ ಸೇವಕ. ಸಾಮಾಜಿಕ ಆಡಳಿತದಲ್ಲಿ ನಾಡಗೌಡ, ಕಟ್ಟುಗೌಡಗಳಿಗೆ ಸಹಕಾರಿಯಾಗಿದೆ.

### ಇಂದಿನ ಸಾಮಾಜಿಕ ಸ್ಥಾನಮಾನ :

ಇರುಳಿಗ ಬುಡಕಟ್ಟು ಸಮುದಾಯದಲ್ಲಿ ಆಹಾರ, ಆರೋಗ್ಯ, ಅಕ್ಷರದ ಕೊರತೆಯಿದ್ದವು. ಆದರೆ ಹಿಂದೆ ಅನ್ಯೋನ್ಯತೆಯ, ಕಷ್ಟ ಸುಖಗಳಲ್ಲಿ ಸಮಭಾಗಿಗಳಾಗಿ ಬದುಕುವ ದೃಷ್ಟಿಕೋನ ಅವರಲ್ಲಿತ್ತು. ನೆಮ್ಮದಿಯ ಬದುಕನ್ನು ನಡೆಸುತ್ತಿದ್ದರು. ಇಂದು ಆಧುನಿಕತೆಯ ಪ್ರಭಾವದಿಂದ ಬದಲಾವಣೆಗೆ ಒಳಗಾಗುತ್ತಿರುವುದು ಕಂಡುಬರುತ್ತದೆ.

ಇರುಳಿಗರಲ್ಲಿ ೨೦ ವರ್ಷಗಳ ಹಿಂದೆ ಇದ್ದಂತಹ ಹಲವಾರು ರೀತಿಯ ರೀತಿ-ನೀತಿಗಳು ಇಂದು ಇಲ್ಲವಾಗಿದೆ ಎಂದು ಹೇಳಬಹುದು. ೩೦-೪೦ ವರ್ಷಗಳ ಹಿಂದೆ ಗವಿಗಳಲ್ಲಿ ವಾಸವಾಗಿದ್ದ ಇರುಳಿಗರು ಇಂದು ಗವಿಯನ್ನು ತೊರೆದು ಊರುಗಳಲ್ಲಿ ಮತ್ತು ಬೆಟ್ಟಗುಡ್ಡಗಳಲ್ಲಿನ ತಳದಲ್ಲಿ ಬಂದು ವಾಸವಾಗಿದ್ದಾರೆ. ಇಂದೂ ಕೆಲವರು ಹುಲ್ಲಿನ ಮನೆಗಳಲ್ಲಿ ಹಾಗೂ ಆಶ್ರಯ ಮನೆಗಳಲ್ಲಿ ವಾಸಿಸುತ್ತಿರುವುದನ್ನು ನೋಡಬಹುದಾಗಿದೆ. ಇವರು ತಮ್ಮನ್ನ "ಇಲಿಗರು" ಎಂದು ಕರೆಯಿಸಿಕೊಳ್ಳಲು ಮತ್ತು ಗುರುತಿಸಿಕೊಳ್ಳಲು ಇಷ್ಟ ಪಡುತ್ತಿಲ್ಲಾ. ತಮ್ಮನ್ನು ಪೂಜಾರಿಗಳು ಎಂದು ಗುರುತಿಸಿಕೊಳ್ಳಲು ಇಷ್ಟ ಪಡುತ್ತಿದ್ದಾರೆ. ಆಹಾರದ ಕ್ರಮದಲ್ಲಿ ಇಂದು ಬಹಳ ವ್ಯತ್ಯಾಸವನ್ನು ನೋಡಬಹುದು. ಇಲಿ ಹಿಡಿಯುವ ಕೆಲಸ ತೊರೆದು ಇತರೆ ಉದ್ಯೋಗ ಮಾಡುತ್ತಿದ್ದಾರೆ. ಕುಲ, ಬೆಡಗು,

ಬಳಿಗಳ ಬಗ್ಗೆ ಅರಿವು ಇಲ್ಲದೆ ಇರುವುದು ತಮ್ಮ ರೂಢಿ ಸಂಪ್ರದಾಯ ಮರೆತು ಸ್ಥಿತ್ಯಂತರ ಹೊಂದುತ್ತಿರುವ ದ್ಯೋತಕವಾಗಿದೆ.

ಹುಟ್ಟು, ಮದುವೆ, ಸಾವುಗಳ ಆಚರಣೆಗಳಲ್ಲಿ ಸ್ಥಿತ್ಯಂತರವನ್ನು ಕಾಣಬಹುದಾಗಿದೆ. 'ಆಧುನಿಕ' ಹೆಸರುಗಳು ಹೊಸಬರಲ್ಲಿ ಕಾಣಸಿಗುತ್ತವೆ. ತೀರ ಈಚಿನವರೆಗೂ ಗಂಡು-ಹೆಣ್ಣುಗಳು ತಮಗೆ ಬೇಕಾದ ಗಂಡು ಹೆಣ್ಣುಗಳನ್ನು ಆಯ್ಕೆ ಮಾಡಿಕೊಂಡು ಹೋಗುವ ಸ್ವಾತಂತ್ರ್ಯವಿತ್ತು. ಆದರೆ ಇಂದು ಗಂಡು ಮತ್ತು ಹೆಣ್ಣುಗಳನ್ನು ಮನೆಗೆ ಹೋಗಿ ನೋಡುವ ಕ್ರಮ ಆರಂಭವಾಗಿದೆ. ವರದಕ್ಷಿಣೆ ಮತ್ತು ಇತರೆ ಉಡುಗೊರೆಗಳು ಕಂಡು ಬರುತ್ತಿವೆ.

ಹಿಂದೆ ಕುಲ ಪಂಚಾಯ್ತಿ ವ್ಯವಸ್ಥೆಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ಇಂದು ಬದಲಾವಣೆಯನ್ನು ನೋಡಬಹುದಾಗಿದೆ. "ಕಟ್ಟುಮನೆ" ಸಂಸ್ಕೃತಿಯು ಇಲ್ಲವಾಗಿದೆ.

ಸಾವಿನ ಸಮಯದಲ್ಲಿ ಕಂಡು ಬರುತ್ತಿದ್ದ ಕಲ್ಲು ಸೇವೆ, ಶವ ಸಂಸ್ಕಾರದ ವ್ಯವಸ್ಥೆಯು ಇಂದು ಇಲ್ಲವಾಗಿರುವುದನ್ನು ಕಾಣಬಹುದಾಗಿದೆ. ಹಿಂದೆ ಕಾಡುಗಳಲ್ಲಿ ಕಲ್ಲು ಪೂಜೆ, ಹಿರಿಯರ ಪೂಜೆಗಳನ್ನು ಮಾತ್ರ ಮಾಡುತ್ತಿದ್ದರು. ಇಂದು ಈ ಸ್ಥಳದಲ್ಲಿ ಮಲೈ ಮಹದೇಶ್ವರ ಚಾಮುಂಡೇಶ್ವರಿ ಇತ್ಯಾದಿ ದೇವರುಗಳು ಬಂದಿರುವುದು ಸಂಪ್ರದಾಯ ಸ್ಥಿತ್ಯಂತರಕ್ಕೆ ಬಹಳ ಉತ್ತಮವಾದ ಉದಾಹರಣೆಯಾಗಿದೆ. ಆಲದಮರ ಇವರಿಗೆ ಪವಿತ್ರ. ಇಂದು ಈ ಜಾಗದಲ್ಲಿ ಅರಳಿಮರ ಆಕ್ರಮಿಸಿದೆ "ಕಣಿ" ಹೇಳುವ ಧಾರ್ಮಿಕ ಆಚರಣೆಯು ಇಂದು ಕಡಿಮೆಯಾಗುತ್ತಿವೆ. ಮದುವೆ ಮತ್ತು ಇತರೆ ಕಾರ್ಯಕ್ರಮಕ್ಕೆ ಪುರೋಹಿತರನ್ನು ಕರೆಯುವ ವ್ಯವಸ್ಥೆಯನ್ನು ಕಾಣಬಹುದು.

**ಉದ್ಯೋಗ :**

ಬುಡಕಟ್ಟು ಸಮುದಾಯದ ಜನರು ಅರಣ್ಯದಲ್ಲಿ ವಾಸಿಸುವಂತಹ ಸಂದರ್ಭದಲ್ಲಿ ತಮ್ಮ ಆಸೆ-ಆಕಾಂಕ್ಷೆಯಿಂದ ಪರ ವಸ್ತುಗಳಿಗೆ ತೊಂದರೆಯಾಗದಂತೆ ಜೀವನ ನಡೆಸುತ್ತಿದ್ದರು. ಜೊತೆಗೆ ಹಸಿವನ್ನು ಈಡೇರಿಸಿಕೊಳ್ಳುತ್ತಿದ್ದರು. ಇವರು ಋತುಮಾನಕ್ಕೆ ಅನುಗುಣವಾಗಿ ಲಭ್ಯವಾಗುತ್ತಿದ್ದ ಗೆಡ್ಡೆ-ಗೆಣಸು, ಕಾಡಿನ ಪ್ರಾಣಿಗಳು, ಪಕ್ಷಿಗಳನ್ನು ಪರಿಮಿತಿಯಲ್ಲಿ ಉಪಯೋಗಿಸಿ ಜೀವನವನ್ನು ನಡೆಸುತ್ತಿದ್ದರು, ಎಂಬುವುದನ್ನು ಇವರ ಬಗ್ಗೆ ನಡೆಸಿದ ಹಲವು ಅಧ್ಯಯನಗಳು ಸ್ಪಷ್ಟ ಪಡಿಸುತ್ತವೆ. ಅರಣ್ಯ ಸಂಪತ್ತಿನ ಮೇಲೆ ವಸಾಹತುಕರಣದ ಕರಿನೆರಳು ಎಂದು ಚಿತ್ತೋ, ಅಂದಿನಿಂದ ಆದಿವಾಸಿ ಸಮುದಾಯಗಳು ಅತಂತ್ರ ಸ್ಥಿತಿಗೆ ತಳ್ಳಲ್ಪಟ್ಟವು. ಅನೇಕ ಬುಡಕಟ್ಟು ಸಮುದಾಯಗಳು ಜೀವನಕ್ಕಾಗಿ ಉದ್ಯೋಗ ಅನ್ನುವುದಕ್ಕಿಂತ ಬದುಕುವುದಕ್ಕೆ, ಅನ್ನವನ್ನು ಹುಡುಕುವುದಕ್ಕೆ, ಹಲವಾರು ಪರ್ಯಾಯ ಮಾರ್ಗಗಳನ್ನು ಈ ಸಮುದಾಯಗಳು ಕಂಡುಕೊಳ್ಳಬೇಕಾಯಿತ್ತು. ಅರಣ್ಯದಲ್ಲಿ ಕಾಡು ಪ್ರಾಣಿ, ಪಕ್ಷಿಗಳನ್ನು, ಕೊಂದು ತಿನ್ನುವ ಬೇಟೆ ಹಂತವನ್ನು ದಾಟಿ ಪಶುಪಾಲನೆ, ಕೃಷಿ ಹಂತದಲ್ಲಿರುವಂತಹ ಅನೇಕ ಪ್ರಕಾರದ ಬುಡಕಟ್ಟುಗಳಲ್ಲಿ 'ಇರುಳಿಗರು' ಪ್ರಮುಖವಾದ ಸಮುದಾಯಗಳು ಎಂದರೆ

ತಪ್ಪಾಗಲಾರದು.

ಇಂದಿನ ಜಾಗತಿಕರಣದ ಸಂದರ್ಭದಲ್ಲಿ, ಜೀವನ ಮುಂದುವರಿಕೆಗಾಗಿ, ಹಲವು ರೀತಿಯ ವೃತ್ತಿಗಳಲ್ಲಿ, ಮಹಿಳೆ–ಮಕ್ಕಳು ಮತ್ತು ಪುರುಷರು ತೊಡಗಿಸಿಕೊಂಡಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧ್ಯಯನ ಮಾಡಲಾಗಿದೆ. ಬಹುಮುಖ್ಯವಾಗಿ ಈ ಸಮುದಾಯದ ಜನರು ಕೃಷಿಕರಿಗಿಂತಲೂ, ಕೂಲಿಕಾರ್ಮಿಕರಾಗಿ, ಗ್ರಾಮ–ನಗರ ಪ್ರದೇಶಗಳಲ್ಲಿ ದಿನನಿತ್ಯ ಶ್ರಮವಹಿಸುತ್ತಿದ್ದಾರೆ. ಅದಕ್ಕೆ ತಕ್ಕ ಪ್ರತಿ ಫಲವು ಲಭಿಸದೆ ಮತ್ತು ವೃತ್ತಿ ದೊರೆಯದಂತಹ ಜನರು ಕೃಷಿಯೇತರ ಚಟುವಟಿಕೆಗಳಾದ ಮನೆ, ಪಾತ್ರೆತೊಳೆಯಲು, ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಸಿಮೆಂಟ್, ಗಾರೆಬೆರೆಸುವಂತಹ ಕೆಲಸಗಳಲ್ಲಿ, ದೈಹಿಕ ಶ್ರಮವನ್ನೆ ಬಂಡವಾಳ ಮಾಡಿಕೊಂಡು ದುಡಿಯುತ್ತಿದ್ದಾರೆ. ಅಲ್ಲದೆ ಸೌದೆ ಕಡಿಯುವ ಕೆಲಸವನ್ನು ಇವರು ನಿರ್ವಹಿಸುತ್ತಾರೆ. ಬುಟ್ಟಿ ನೇಯುವುದು, ಕಸಬರಿಗೆ ಕಟ್ಟಿ ಮಾರುವುದು, ಕುರಿ, ಕೋಳಿ, ಮೇಕೆ, ದನಕರುಗಳನ್ನು ಸಾಕುವ ಕಸುಬು ಮಾಡುತ್ತಿದ್ದಾರೆ. ಸಮೀಪದ ದೊಡ್ಡ ಊರುಗಳಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘಕ್ಕೆ ಹಾಲು ಮಾರುವ, ಇರುಳಿಗರನ್ನು ನಾವಿಂದು ಕಾಣಬಹುದಾಗಿದೆ.

ಈ ಸಮುದಾಯಗಳಿಗೆ ಬೇಟೆ ಬಹುಮುಖ್ಯವಾದ ಕಸುಬು. ಬೇಟೆಗೆ ಇವರು ಹೆಚ್ಚಿನ ಆದ್ಯತೆ ನೀಡುತ್ತಿದ್ದರು. ದೊಡ್ಡ ದೊಡ್ಡ ಪ್ರಾಣಿಗಳ ಬೇಟೆ ನಿಲ್ಲಿಸಿದ್ದರು. ಚಿಕ್ಕ ಚಿಕ್ಕ ಪ್ರಾಣಿಗಳನ್ನು ಇಂದಿಗೂ ಬೇಟೆಯಾಡಿ ಮಾಂಸಾಹಾರವನ್ನು ಸ್ವಲ್ಪ ಮಟ್ಟಿಗಾದರೂ ಬಳಸುತ್ತಿದ್ದಾರೆ. ಅಂಥವುಗಳಲ್ಲಿ ಪ್ರಮುಖವಾಗಿ ಇಲಿಬೇಟೆ, ತೋಡನಬೇಟೆ, ಕಾಡುಕೋಳಿಬೇಟೆ, ಕೂರ್ಗನಬೇಟೆ, ಮೊಲದಬೇಟೆ, ಮಂಗನಬೇಟೆ, ಕೀರನಬೇಟೆ, ಜೇನುಬೇಟೆ, ಹೆಜ್ಜೇನುಬೇಟೆ, ಕಾಡುಹಂದಿ, ಮುಳ್ಳುಹಂದಿ, ಚಿಪ್ಪಿನ ಹಂದಿಬೇಟೆ, ಕಾಡುಬೆಕ್ಕು, ಪುನುಗು ಬೆಕ್ಕು ಹೀಗೆ ತಮಗೆ ಬೇಕಾದುದ್ದನ್ನು ಆಹಾರಕ್ಕಾಗಿ ಮಾತ್ರ ಬೇಟೆಯಾಡುತ್ತಿದ್ದರು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅವರು ಬೇಟೆಯಾಡುತ್ತಿದ್ದ ವಿವಿಧ ಪ್ರಾಣಿಗಳ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ. ಆದರೆ ಇಂದು ಕಾಡು ನಾಶವಾಗಿ ಕಾಡು ಪ್ರಾಣಿಗಳ ಸಂತತಿಯೂ ನಶಿಸಿ ಹೋಗುತ್ತಿದೆ. ಹೀಗಾಗಿ ಇರುಳಿಗರ ಬೇಟೆಯೂ ಮೊದಲಿನ ವರ್ಚಸ್ಸನ್ನು ಉಳಿಸಿಕೊಂಡಿಲ್ಲವೆಂದು ಹೇಳಬಹುದು. ಕಾಡಿನಲ್ಲಿ ದೊರಕುವ ಬೇಲದಹಣ್ಣು, ಹುರೇಹಣ್ಣು, ಸೀಗೆಕಾಯಿ ಗೋಯಗಳನ್ನು ಸಂಗ್ರಹಿಸುತ್ತಿದ್ದರು. ಅರಣ್ಯ ಇಲಾಖೆಯ ಕಾನೂನಿಗೆ ಒಳಪಟ್ಟು ಅವರು ಬದುಕುತ್ತಿದ್ದಾರೆ. ಕಾಡಿನ ಬಿದಿರಿನಿಂದ ಬುಟ್ಟಿ ನೇಯುತ್ತಿದ್ದಾರೆ. ಇದಕ್ಕು ಅರಣ್ಯ ಇಲಾಖೆಯವರು ತಡೆಯೊಡ್ಡುತ್ತಿದ್ದಾರೆ.

ಇತ್ತೀಚೆಗೆ ಸರ್ಕಾರದ ಸಹಾಯದಿಂದ ಭೂಮಿಯನ್ನು ಪಡೆದು ವ್ಯವಸಾಯದಲ್ಲಿ ತೊಡಗಿಸಿಕೊಂಡಿರುವ ಈ ಸಮುದಾಯಗಳು ಎತ್ತುಗಳನ್ನು ಉಪಯೋಗಿಸಿ ವ್ಯವಸಾಯ ಮಾಡುತ್ತಿದ್ದಾರೆ. ವ್ಯವಸಾಯಕ್ಕೆ ಬೇಕಾದ ಸಲಿಕೆ, ಗುದ್ದಲಿ, ಕುಂಟೆ, ರಂಟೆ ಮುಂತಾದವುಗಳನ್ನು ತಾನೇ ಸಿದ್ಧಪಡಿಸಿಕೊಳ್ಳುತ್ತಿದ್ದಾರೆ. ವ್ಯವಸಾಯ ತಮಗೆ ಹೆಚ್ಚಿನ ಅನುಕೂಲತೆಗಳನ್ನು ಕಲ್ಪಿಸಿಕೊಡುತ್ತಿಲ್ಲ. ಆದಾಯಗಳು ಕಡಿಮೆ ಎಂಬ ಅಂಶವನ್ನು

ಹೇಳುತ್ತಾರೆ.

ಹಲವಾರು ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಗ್ರಾಮೀಣ ಸಮುದಾಯದ ಅಸಂಘಟಿತ ಕೂಲಿಕಾರ್ಮಿಕರೆಲ್ಲರೂ, ಅದರಲ್ಲಿ ಇರುಳಿಗ ಸಮುದಾಯವು ಅನಿವಾರ್ಯತೆಯಿಂದ ಇಂದು ಶರವೇಗದಲ್ಲಿ ಬೆಳೆಯುತ್ತಿರುವ ನಗರಗಳತ್ತ ದಾಪುಗಾಲು ಇಡುತ್ತಿದ್ದಾರೆ. ಇವರ ವಲಸೆ ಪ್ರವೃತ್ತಿಯು ಬೆಂಗಳೂರು ಗ್ರಾಮಾಂತರ ಪರಿಸರದ ರಾಮನಗರ, ಮಾಗಡಿ, ಆನೇಕಲ್, ಚನ್ನಪಟ್ಟಣ, ಕನಕಪುರ,ದೇವನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೋಕುಗಳಲ್ಲಿ ಕಂಡುಬರುತ್ತಿವೆ.

ಹೀಗೆ ಇರುಳಿಗ, ಬುಡಕಟ್ಟು ಸಮುದಾಯಗಳು, ತಮ್ಮ ಜೀವನೋಪಾಯಕ್ಕೆ ಈ ರೀತಿಯ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

**ಶಿಕ್ಷಣ :**

"ಸಮಾಜದ ಕೊನೆಯ ಸ್ಥರದಲ್ಲಿರುವ ವ್ಯಕ್ತಿ, ಶಿಕ್ಷಣದ ಒಳಗೆ ಬರಲಾಗದಿದ್ದರೆ, ಆ ಶಿಕ್ಷಣವೇ ನಿರ್ಲಕ್ಷಿತರನ್ನು ಹುಡಿಕಿಕೊಂಡು ಹೋಗಬೇಕು. ಇಲ್ಲದಿದ್ದರೆ ಆ ಶಿಕ್ಷಣದ ವ್ಯವಸ್ಥೆಯೇ ನಿಷ್ಪ್ರಯೋಜಕವೆಂದು" ಸ್ವಾಮಿವಿವೇಕಾನಂದರವರು ಶತಮಾನದ ಹಿಂದೆ ನುಡಿದಂತಹ ಮಾತುಗಳು ಔಚಿತ್ಯ ಪೂರ್ಣವೆನಿಸಿವೆ. ಏಕೆಂದರೆ ೩೦-೪೦ ವರ್ಷಗಳ ಹಿಂದೆ ಅಲೆಮಾರಿಗಳಾಗಿದ್ದಂತಹ ಈ ಸಮುದಾಯಗಳು ಇಂದು ಸಂಪೂರ್ಣವಾಗಿ ತಮ್ಮನ್ನು ತಾವು ತೊಡಗಿಸಿ ಕೊಂಡಿರುವುದು ಸಹ ಶಿಕ್ಷಣದ ಪ್ರಗತಿಯನ್ನು ಪ್ರತಿಬಿಂಬಿಸುತ್ತದೆ. ಇರುಳಿಗರಲ್ಲಿ ಅಕ್ಷರಸ್ಥರ ಸಂಖ್ಯೆ ಬಹಳ ಕಡಿಮೆ, ಸರ್ಕಾರಿ ಅಥವಾ ಖಾಸಗಿ ನೌಕರರು ಈ ಸಮುದಾಯದಲ್ಲಿ ಅತ್ಯಂತ ವಿರಳ. ಬೆರಳೆಣಿಕೆಯಷ್ಟು ಮಂದಿ ಶಿಕ್ಷಣವನ್ನು ಪಡೆದವರು ಕಂಡುಬರುತ್ತಾರೆ. ಆದರೆ ಇತ್ತೀಚೆಗೆ ಶಾಲೆಗೆ ಹೋಗಿ ಶಿಕ್ಷಣ ಪಡೆದುಕೊಳ್ಳುವವರ ಸಂಖ್ಯೆ ಹೆಚ್ಚಾಗುತ್ತಿದೆ.

ಬುಡಕಟ್ಟು ಜನರು ಆಧುನೀಕರಣದ ಪ್ರಭಾವಕ್ಕೆ ಒಳಗಾಗಿದ್ದರೂ ಕೆಲವೊಂದು ಸಂದರ್ಭದಲ್ಲಿ ಕಾಡಿನಲ್ಲಿ ಸಿಗುವ ಗಿಡಮೂಲಿಕೆಗಳನ್ನು ಪರಿಚಯ ಮಾಡಿಕೊಂಡು ದೇಹದ ಅನಾರೋಗ್ಯ, ರೋಗರುಜಿನಗಳನ್ನು ತಡೆಗಟ್ಟುವ ಕೆಲಸದಲ್ಲಿ ಮಗ್ನರಾಗಿರುವ ವಿಷಯವನ್ನು ಪ್ರಸ್ತಾಪಿಸುತ್ತಾರೆ. ನಾಟಿವೈದ್ಯ ಪದ್ದತಿಯಿಂದ ಶರೀರದ ಪ್ರತಿಯೊಂದು ಅಂಗಾಂಗಕ್ಕೂ ಔಷಧಿಯನ್ನು ನೀಡಬಲ್ಲವರಾಗಿದ್ದಾರೆ. ನಾಯಿ ಕಚ್ಚಿದರೆ, ನೆಗಡಿ, ಕಿವಿನೋವು, ವಾಂತಿ, ಅಜೀರ್ಣ, ಹೊಟ್ಟೆ ಕಟ್ಟು, ಹೊಟ್ಟೆ ಉಬ್ಬು, ಜಂತು ಹುಳು, ಬಾಯಿ ಹುಣ್ಣು, ಬಿದ್ದಗಾಯ, ದಡಾರ, ಹಾವುಕಡಿತ, ಶೀಘ್ರ ಪ್ರಸವ, ಬಂಜೆನಿವಾರಣೆ, ಇತ್ಯಾದಿ ಖಾಯಿಲೆಗಳಿಗೆ ಸಂಬಂಧಪಟ್ಟಂತೆ ತಮ್ಮ ನಾಟಿವೈದ್ಯ ಪದ್ದತಿಯಿಂದಲೇ ಗುಣಪಡಿಸಿಕೊಳ್ಳುವ ಪ್ರಯತ್ನವನ್ನು ಈ ಸಮುದಾಯಗಳು ನಡೆಸುತ್ತಿವೆ. ಆದರೆ ಇರುಳಿಗ ಸಮುದಾಯದ ಜೇನುಕಲ್ಲುಪಾಳ್ಯದಲ್ಲಿ ಇರುಳಿಗ ಜನರಲ್ಲಿ ಸುಮಾರು ೮೦% ಪೋಲಿಯೋ ರೋಗಕ್ಕೆ ತುತ್ತಾಗಿರುವ ಅಂಶ ಬೆಳಕಿಗೆ ಬಂದಿದೆ. ಮುಖ್ಯ ರಸ್ತೆಯಿಂದ 'ಹಾಡಿಗೆ' ತೆರಳ ಬೇಕಾದರೆ ಸುಮಾರು ೩-೪ ಕಿ.ಮೀ ದೂರವನ್ನು ಕ್ರಮಿಸಬೇಕಾಗುತ್ತದೆ.

ಇಲ್ಲಿ ಆಸ್ಪತ್ರೆಯ ಸೌಲಭ್ಯಗಳಿರುವುದಿಲ್ಲ. ಇಲ್ಲಿನ ಬಹುಪಾಲು ಜನ ಪೋಲಿಯೋ ರೋಗಕ್ಕೆ ತುತ್ತಾಗಿದ್ದಾರೆ. ಸರ್ಕಾರವು ಸಂಪೂರ್ಣ ಪೋಲಿಯೋ ಮುಕ್ತ ರಾಷ್ಟ್ರವನ್ನಾಗಿ ಮಾಡಲು ಹಲವಾರು ಯೋಜನೆಗಳನ್ನು ಒಂದೆಡೆ ಹಮ್ಮಿಕೊಂಡಿದ್ದಾರೆ. ಮತ್ತೊಂದೆಡೆ ಆ ಸಮುದಾಯಗಳನ್ನು ತಲುಪದೇ ಇರುವುದು ಸೋಜಿಗವೆನಿಸುತ್ತದೆ.

ಗರ್ಭಿಣಿ ಸ್ತ್ರೀಯರ ಹೆರಿಗೆಯನ್ನು ಮಾಡಿಸಲು ತಾವೇ ಗುಡಿಸಲನ್ನು ನಿರ್ಮಾಣ ಮಾಡಿಕೊಳ್ಳುತ್ತಿದ್ದ ಜನ ಇಂದು ಆಸ್ಪತ್ರೆಗೆ ತೆರಳುವ ಮೂಲಕ ಪವಿತ್ರ ಅಪವಿತ್ರ ಮೌಲ್ಯಗಳಿಂದ ದೂರವಾಗುವ ಮುನ್ಸೂಚನೆಗಳನ್ನು ಇರುಳಿಗ ಸಮುದಾಯದಲ್ಲಿ ಕಾಣಬಹುದು.

ಹೀಗೆ ಇರುಳಿಗ ಸಮುದಾಯದವರು ದೈನಂದಿನ ಬದುಕಿಗೆ ಅವಶ್ಯಕವಾಗುವ ಆಧ್ಯಾತ್ಮಿಕ ಕ್ಷೇತ್ರದ ಹಾಗೂ ಆರೋಗ್ಯ ಪ್ರಪಂಚಕ್ಕೆ ಮೀಸಲಾದ ಸಾಮಾಗ್ರಿಗಳ ವ್ಯವಹಾರವನ್ನು ತಮ್ಮ ಉಪವೃತ್ತಿಯನ್ನು ಮಾಡಿಕೊಂಡಿದ್ದಾರೆ. ಇಂದು ಆಸ್ಪತ್ರೆಯ ಸೌಲಭ್ಯವನ್ನು ಪಡೆದುಕೊಳ್ಳುವುದರ ಮೂಲಕ ತಮ್ಮ ಮೂಲ ವೃತ್ತಿಯಿಂದ ದೂರ ಸರಿದು, ಪ್ರತಿಯೊಂದಕ್ಕೂ ವೈದ್ಯರನ್ನು ಅವಲಂಬಿಸಿರುವುದು ಸಹಭಾಗಿ ಅವಲೋಕನ ಸಂದರ್ಭದಲ್ಲಿ ಕಂಡುಬಂದಿದೆ.

**ಹಕ್ಕಿಪಿಕ್ಕಿ ಸಮುದಾಯದ ಹಿಂದಿನ ಸಾಮಾಜಿಕ ಸ್ಥಾನಮಾನ :**

ಹಕ್ಕಿಪಿಕ್ಕಿಯರದು ಮಾತೃಪ್ರಧಾನವಾದ ಕುಟುಂಬ. ಅವರಲ್ಲಿ ಹೆಣ್ಣು ಹೆಚ್ಚಿನ ಸ್ಥಾನಮಾನಗಳನ್ನು ಹೊಂದಿರುತ್ತಾಳೆ. ಮನೆಯ ಎಲ್ಲಾ ನಿರ್ವಹಣೆಯ ಜವಾಬ್ದಾರಿಯೂ ಆಕೆಯ ಮೇಲಿರುತ್ತದೆ. ಗಂಡಸು ಕೇವಲ ಬೇಟೆ ಮತ್ತು ವ್ಯಾಪಾರ ಮಾಡುವುದರಲ್ಲಿ ಪ್ರಮುಖವಷ್ಟೇ ಹೊರತು ಇತರೆ ಎಲ್ಲ ವಿಷಯಗಳಲ್ಲೂ ಎರಡನೆ ದರ್ಜೆಯಲ್ಲಿದ್ದಾನೆ. ತಾನು ದುಡಿದು ತಂದ ಎಲ್ಲ ವರಮಾನವನ್ನೂ ಹೆಂಡತಿಯ ಕೈಗೆ ಕೊಡುತ್ತಾನೆ. ಒಂದು ಬೀಡಿಗೆ ಹಣ ಬೇಕೆಂದರೂ ಹೆಂಡತಿಯನ್ನೆ ಕೇಳಬೇಕು ಇಲ್ಲವೇ ಆಕೆಯೆ ಅಂಗಡಿಯಲ್ಲಿ ಕೂಡಿಸಬೇಕು. ಮಕ್ಕಳು, ಸೊಸೆಯರ ಮೇಲೆ ಹೆಣ್ಣಿನದೇ ಹೆಚ್ಚು ನಿಯಂತ್ರಣವಿರುತ್ತದೆ.

ಮಕ್ಕಳ ಪೋಷಣೆ ಬಹುತೇಕವಾಗಿ ಮುದುಕರ ಜವಾಬ್ದಾರಿಯಾಗಿರುತ್ತದೆ. ಸುಮಾರು ೧೦ ರಿಂದ ೧೨ ವರ್ಷದ ವರೆಗೆ ಮಾತ್ರ ಯಾವುದೇ ಮಗು ಅಜ್ಜ ಅಜ್ಜಿ ಇಲ್ಲವೇ ತಂದೆ ತಾಯಿಯರ ನಿಯಂತ್ರಣದಲ್ಲಿರುತ್ತದೆ. ಉಳಿದಂತೆ ಆತ ಇಲ್ಲವೇ ಆಕೆ ಸ್ವತಂತ್ರವಾಗಿ ವ್ಯಾಪಾರ ಇಲ್ಲವೇ ಗುಡಿಕೈಗಾರಿಕೆಗಳಲ್ಲಿ ತೊಡಗಿರುತ್ತಾರೆ. ಗಂಡು ಆ ವಯಸ್ಸಿಗಾಗಲೆ ಮದುವೆಯ ವಿಷಯದಲ್ಲಿ ತನ್ನ ಕುಟುಂಬದವರ ನಿಯಂತ್ರಣದಲ್ಲಿರುತ್ತಾನೆ ಅಥವಾ ಸ್ವಂತ ನಿರ್ಧಾರ ತೆಗೆದುಕೊಳ್ಳುತ್ತಾನೆ. ಬಹುವಾಗಿ ಈ ಅಂಶ ಹೆಣ್ಣಿಗೂ ಅನ್ವಯಿಸುತ್ತದೆ. ಹಕ್ಕಿಪಿಕ್ಕಿಯರಲ್ಲಿ ಕೌಟುಂಬಿಕವಾಗಿ ಬಹುತೇಕ ಶಿಥಿಲತೆ ಇದೆಯೆಂದು ಮೇಲುನೋಟಕ್ಕೆ ಕಂಡರೂ, ಹೆಚ್ಚು ನಿಯಂತ್ರಿತ ಸಂಕೀರ್ಣಾವಸ್ಥೆಯಲ್ಲೂ ಇರುವುದನ್ನು ಕಾಣಬಹುದು.

ಪ್ರತಿಯೊಂದು ದಂಪತಿಗಳ ಜೋಡಿಯೂ ಪ್ರತ್ಯೇಕವಾಗಿ ಬದುಕಲು ಇಷ್ಟಪಡುತ್ತದೆ.

ಹೀಗಿದ್ದೂ ಆ ದಂಪತಿಗಳ ಮಕ್ಕಳನ್ನು ಅಲೆಮಾರಿ ಜೀವನದಲ್ಲಿ ಖಾಯಂ ಆಗಿ ನೆಲೆನಿಂತ ಮನೆಗಳಲ್ಲೇ ಮುದುಕರ ಆಶ್ರಯದಲ್ಲಿ ಬೆಳೆಯುತ್ತವೆ. ಈ ಅವಧಿಯಲ್ಲಿ ಹೊರಗಿನಿಂದ ಎಂ.ಓ. ಮೂಲಕ ಜೀವನ ನಿರ್ವಹಣೆಗೆ ಹಣವನ್ನು ಕಳುಹಿಸುತ್ತಿರುತ್ತಾರೆ.

ಹಕ್ಕಿಪಿಕ್ಕಿಯರಲ್ಲಿ ಅನಾಥತೆ ಕಡಿಮೆ. ಸುಮಾರು ೬೦ ವರ್ಷದ ಮುದುಕ ಮುದುಕಿಗೆ ಸಹ ಅದೇ ವಯಸ್ಸಿನ ವ್ಯಕ್ತಿಗಳನ್ನು ಸಮಾಜದವರೇ ಜೊತೆಮಾಡುತ್ತಾರೆ. ಯಾರೂ ಹೆಚ್ಚು ಕಾಲ ಏಕಾಂಗಿಗಳಾಗಿರುವುದಿಲ್ಲ. ಒಬ್ಬ ಗಂಡಸಿಗೆ ಹೆಂಡತಿ ಬಿಟ್ಟರೆ, ಸತ್ತರೆ ಹತ್ತು ದಿನ ಇಲ್ಲವೆ ತಿಂಗಳೊಳಗಾಗಿಯೆ ಇನ್ನೊಂದು ಹೆಣ್ಣನ್ನು ಜೊತೆ ಮಾಡುತ್ತಾರೆ. ಈ ಸಮುದಾಯದ ಒಟ್ಟು ಧೋರಣೆಯೆ ಗುಂಪು ಜೀವನ ವಿಧಾನ ಮತ್ತು ಸಾಮಾಜಿಕ ಜೀವನ ಕಂಡುಬರುತ್ತದೆ. ಕೌಟುಂಬಿಕ ವ್ಯವಸ್ಥೆಯಲ್ಲಿ ಅಷ್ಟೇ ಪ್ರತ್ಯೇಕತೆಯನ್ನು ನಾವು ಕಾಣಬಹುದಾಗಿದೆ.

ವಯಸ್ಸಾದವರು ಮಕ್ಕಳನ್ನು ಸಾಕುವುದು ತಮ್ಮ ಆದ್ಯಕರ್ತವ್ಯವೆಂದು ತಿಳಿದಿರುತ್ತಾರೆ. ತಮ್ಮ ಸ್ವಂತ ಮೊಮ್ಮಕ್ಕಳನ್ನು ಹೇಗೆ ನೋಡಿಕೊಳ್ಳುತ್ತಾರೆ? ಕೆಲವು ಮನೆಗಳಂತೂ ಬಾಲವಾಡಿಗಳ ಸ್ವರೂಪವನ್ನು ಪಡೆದಿರುತ್ತವೆ. ವ್ಯಾಪಾರದ ಕಾರಣಕ್ಕೆ ಅಲೆಮಾರಿಗಳಾದ ತಂದೆ ತಾಯಿಗಳ ಮಕ್ಕಳು ಅನಾಥವಾಗಿಯೆ ಇರುತ್ತವೆ. ಆದರೆ ಬೇರೆಯವರ ಪ್ರೀತಿ ವಿಶ್ವಾಸದಿಂದಾಗಿ ಈ ಅನಾಥತೆ ಹೆಚ್ಚು ಕಾಡುವುದಿಲ್ಲವೆಂಬುದನ್ನೂ ಗಮನಿಸಬಹುದು. ಇತರ ಜಾತಿಯ ಅನಾಥ ಮಕ್ಕಳನ್ನೂ ತಮ್ಮ ಮಕ್ಕಳಂತೆಯೆ ಸಾಕಿ ತಮ್ಮಲ್ಲೆ ಮದುವೆ ಮಾಡಿಕೊಂಡಿರುವ ಉದಾಹರಣೆಗಳಿಂದ ಹಕ್ಕಿಪಿಕ್ಕಿಯರು ನಿಜವಾದ ಮನುಷ್ಯರಾಗಿ ಕಾಣುತ್ತಾರೆ.

ಹಕ್ಕಿಪಿಕ್ಕಿ ಸಮುದಾಯವು ಆಹಾರ, ಆರೋಗ್ಯ, ಅಕ್ಷರದ ಕೊರತೆಯನ್ನು ಅನುಭವಿಸುತ್ತಿದ್ದವು. ಆದರೆ ಅನ್ಯೋನ್ಯತೆಯ, ಕಷ್ಟಸುಖಗಳಲ್ಲಿ ಸಮಭಾಗಿಗಳಾಗಿ ಬದುಕುವ ದೃಷ್ಟಿಕೋನ ಇವರಲ್ಲಿ ಕಂಡುಬರುತ್ತಿತ್ತು. ಜೊತೆಗೆ ನೆಮ್ಮದಿಯ ಜೀವನವನ್ನು ನಡೆಸುತ್ತಿದ್ದರು. ಆಧುನಿಕತೆಯ ಪ್ರಭಾವದಿಂದ ಇವರಲ್ಲೂ ಸಾಕಷ್ಟು ಬದಲಾವಣೆಗಳಾಗುತ್ತಿರುವುದು ಕಂಡುಬರುತ್ತಿದೆ.

ರಾಜಕೀಯವಾಗಿ ಗಮನಿಸಿದಾಗ ಗಾಂಧಿ ಕಂಡ ಗ್ರಾಮಸ್ವರಾಜ್ಯದ ಪರಿಕಲ್ಪನೆಯಂತೆ ಗ್ರಾಮೀಣಾಭಿವೃದ್ಧಿಯ ದೃಷ್ಟಿಕೋನಗಳಿಂದ ಗ್ರಾಮಪಂಚಾಯಿತಿ ಸದಸ್ಯರು, ತಾಲ್ಲೂಕು ಪಂಚಾಯಿತಿ ಸದಸ್ಯರು ಹಾಗೂ ಅಧ್ಯಕ್ಷರಾಗುವ ತನಕ ರಾಜಕೀಯವಾಗಿ ಪ್ರಗತಿಯನ್ನು ಸಾಧಿಸಿರುವುದು ಕಂಡುಬರುತ್ತದೆ. ಅಲ್ಲದೆ ಹಕ್ಕಿಪಿಕ್ಕಿ ಸಮುದಾಯದವರು ರಾಷ್ಟ್ರ ಮತ್ತು ರಾಜ್ಯ ರಾಜಕಾರಣದಲ್ಲೂ ಸಹ ತಮ್ಮನ್ನು ತೊಡಗಿಸಿಕೊಂಡಿರುವ ಅಂಶಗಳನ್ನು ಸ್ಪಷ್ಟ ಪಡಿಸುತ್ತಾರೆ. ಆಂಧ್ರದಲ್ಲಿ 'ಗೋಪಿ' ಎಂಬುವರು ಶಾಸಕರಾಗಿದ್ದಾರೆ ಎಂದು ವಕ್ತೃಗಳು ಹೇಳುವ ಹೇಳಿಕೆ ಬುಡಕಟ್ಟು ಸಮುದಾಯವು ಹಿಂದೆ ಕಾಡಿನಲ್ಲಿ ಅಲೆಯುತ್ತಿದ್ದು ಇಂದು ಒಂದು ಕಡೆ ನೆಲೆನಿಂತು ರಾಜಕೀಯ ಅಧಿಕಾರಗಳನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿರುವುದು ಕಂಡುಬರುತ್ತದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಕ್ತೃಗಳಿಂದ ಸಂಗ್ರಹಿಸಿದ ಮಾಹಿತಿ

ಇದಕ್ಕೆ ಪುಷ್ಟಿಕರಿಸುತ್ತವೆ.

**ಉದ್ಯೋಗ :**

ಹಕ್ಕಿಪಿಕ್ಕಿಯರು ನಾನಾ ಕಸುಬುಗಳ ಜನ. ಅವರು ಯಾವ ಸಂದರ್ಭ ಮತ್ತು ಯಾವ ಪ್ರದೇಶಗಳಲ್ಲಿದ್ದಾರೆಂಬುದು ಅವರ ಕಸುಬುಗಳ ಸ್ವರೂಪವನ್ನು ತಿಳಿಸುತ್ತದೆ. ಆದ್ದರಿಂದ ಅವರ ಮುಖ್ಯವಾದ ಕಸುಬು ಯಾವುದು ಉಪಕಸುಬು ಯಾವುದೆಂದು ಹೇಳಲು ಸಾಧ್ಯವಿಲ್ಲದಷ್ಟು ವೈವಿಧ್ಯಮಯವಾಗಿರುತ್ತದೆ. ಅವರ ಔದ್ಯೋಗಿಕ ಸ್ವರೂಪ. ಅವರು ಅಲೆಮಾರಿಗಳು ಮತ್ತು ಅರೆ ಅಲೆಮಾರಿಗಳಾಗಿರುವುದರಿಂದ ಈ ಬಗೆಯ ವ್ಯತ್ಯಾಸಗಳು ಕಂಡುಬರುತ್ತವೆ. ಅವರು ಅಲೆಮಾರಿಗಳಾಗಿದ್ದಾಗ ವ್ಯಾಪಾರ ಮುಖ್ಯವಾಗಿ ಬೇಟೆ ಮತ್ತು ಇತರ ಗುಡಿಕೈಗಾರಿಕೆಗಳು ಉಪಕಸುಬುಗಳಾಗಿರಬಹುದು. ಇಲ್ಲವೇ ಬರೀ ಬೇಟೆಯೆ ಉದ್ಯೋಗವೂ ಆಗಿರಬಹುದು. ಇತ್ತೀಚೆಗೆ ಸರ್ಕಾರದ ಪುನರ್ವಸತಿ ಯೋಜನೆಯಡಿ ಖಾಯಂ ಆಗಿ ವಾಸಿಸುವ ಕಡೆ ಕೆಲವು ಕುಟುಂಬಗಳನ್ನು ಹೊರತುಪಡಿಸಿ ಉಳಿದವು ವ್ಯವಸಾಯವನ್ನು ಅವಲಂಬಿಸಿವೆ. ವ್ಯವಸಾಯದೊಂದಿಗೆ ಅವರು ಆಗಾಗ್ಗೆ ಬೇಟೆಯನ್ನು ಮಾಡುತ್ತಾರೆ. ಹೆಂಗಸರು ಭಾಗಶಃ ಭಿಕ್ಷೆ ಮಾಡುತ್ತಾರೆ ಜೊತೆಯಲ್ಲಿ ಸಣ್ಣ ವ್ಯಾಪಾರವನ್ನೂ ಮಾಡುತ್ತಾರೆ.

**ಶಿಕ್ಷಣ :**

ಕುಟುಂಬ ಹಾಗೂ ಸಮಾಜದಲ್ಲಿ ಸಾಮರಸ್ಯ, ಶಾಂತಿ, ನೆಮ್ಮದಿ ನೆಲಸುವಂತೆ ಮಾಡಲು ಶಿಕ್ಷಣವು ಅತ್ಯಗತ್ಯ. ಆದರೆ ಬಡತನ, ಬದುಕಿನ ಅತಂತ್ರ ಸ್ಥಿತಿಗಳು, ಸಮುದಾಯಗಳನ್ನು ತುಳಿಯುತ್ತಿವೆ. ತಮ್ಮ ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ, ಉದ್ಯೋಗ ಸಮರ್ಪಕವಾಗಿ ಇರದ ಕಾರಣದಿಂದ, ಶಿಕ್ಷಣದ ಬಗ್ಗೆ ತಿಳುವಳಿಕೆ ಮತ್ತು ಅದರ ಪ್ರಾಮುಖ್ಯತೆ ಕುರಿತು ವಿಚಾರಗಳ ಅರಿವಿನ ಕೊರತೆ ಇರುವುದನ್ನು ಮಾನವ ಅಭಿವೃದ್ಧಿ ವರದಿಯು ಸ್ಪಷ್ಟ ಪಡಿಸುತ್ತದೆ. ಈ ಸಮುದಾಯಗಳು ಶಿಕ್ಷಣದಲ್ಲಿ ಅತ್ಯಂತ ಹಿಂದುಳಿದ ಸಮುದಾಯಗಳಾಗಿವೆ. ಆದುದ್ದರಿಂದ ಭೌದ್ಧಿಕ ಜಗತ್ತು, ಬುಡಕಟ್ಟಿನ ಶಿಕ್ಷಣವನ್ನು ಬಲಪಡಿಸಲು, ಅವರಲ್ಲಿ ಕೈಗೊಳ್ಳಬೇಕಾದ ಅರಿವು ಅತ್ಯಂತ ಅವಶ್ಯಕವಾಗಿದೆ.

ಬುಡಕಟ್ಟು ಜನರು ಆಧುನೀಕರಣದ ಪ್ರಭಾವಕ್ಕೆ ಒಳಗಾಗಿದ್ದರೂ ಕೆಲವೊಂದು ಸಂದರ್ಭದಲ್ಲಿ ಕಾಡಿನಲ್ಲಿ ಸಿಗುವ ಗಿಡಮೂಲಿಕೆಗಳನ್ನು ಪರಿಚಯ ಮಾಡಿಕೊಂಡು ದೇಹದ ಅನಾರೋಗ್ಯ, ರೋಗರುಜಿನಗಳನ್ನು ತಡೆಗಟ್ಟುವ ಕೆಲಸದಲ್ಲಿ ಮಗ್ನರಾಗಿರುವ ವಿಷಯವನ್ನು ಪ್ರಸ್ತಾಪಿಸುತ್ತಾರೆ. ನಾಟಿವೈದ್ಯ ಪದ್ದತಿಯಿಂದ ಶರೀರದ ಪ್ರತಿಯೊಂದು ಅಂಗಾಂಗಕ್ಕೂ ಔಷಧಿಯನ್ನು ನೀಡಬಲ್ಲವರಾಗಿದ್ದಾರೆ. ಖಾಯಿಲೆಗಳಿಗೆ ಸಂಬಂಧಪಟ್ಟಂತೆ ತಮ್ಮ ನಾಟಿವೈದ್ಯ ಪದ್ದತಿಯಿಂದಲೇ ಗುಣಪಡಿಸಿಕೊಳ್ಳುವ ಪ್ರಯತ್ನವನ್ನು ಈ ಸಮುದಾಯಗಳು ನಡೆಸುತ್ತಿವೆ.

## ಹಕ್ಕಿಪಿಕ್ಕಿ ಸಮುದಾಯದ ಇಂದಿನ ಸಾಮಾಜಿಕ ಸ್ಥಾನಮಾನ:

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಹಿಂದೆ ಅಲೆಮಾರಿ ಜೀವನವನ್ನು ನಡೆಸುತ್ತಿದ್ದರು. ಇಂದು ಒಂದು ಕಡೆ ನೆಲೆನಿಂತು ಜೀವನ ನಡೆಸುತ್ತಿರುವುದನ್ನು ಕಾಣಬಹುದು. ಹೆಜ್ಜಾಲದ ಹಕ್ಕಿಪಿಕ್ಕಿ ಕಾಲೋನಿ, ಪೆಪ್ಸಿ ಕಂಪನಿಯ ಹತ್ತಿರ ಕಂಡುಬರುವ ಬೋರಾಪುರ, ಕೆಂಗೇರಿ ಉಪನಗರದ ಸುಭಾಷ್‌ನಗರ, ಬನ್ನೇರುಘಟ್ಟದ ಭೂತನಹಳ್ಳಿ ಹತ್ತಿರದ ಹಕ್ಕಿಪಿಕ್ಕಿ ಕಾಲೋನಿಗಳನ್ನು ನೋಡಿದಾಗ ಸ್ಥಿರವಾಗಿ ನೆಲೆನಿಂತಿರುವುದನ್ನು ಕಾಣಬಹುದು. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಜೀವನ ನಡೆಸಲು ಉದ್ಯೋಗವನ್ನು ಹುಡುಕುವುದಕ್ಕೆ ಹಲವಾರು ಪರ್ಯಾಯ ಮಾರ್ಗಗಳನ್ನು ಕಂಡುಕೊಂಡಿದ್ದಾರೆ. ಅರಣ್ಯ ಕಾಯಿದೆಯ ಅನ್ವಯ ಅರಣ್ಯದಲ್ಲಿ ಕಾಡುಪ್ರಾಣಿ, ಪಕ್ಷಿಗಳನ್ನು ಕೊಂದು ತಿನ್ನುವ, ಬೇಟೆಯಾಡುವ ಪದ್ಧತಿಯನ್ನು ಬಿಟ್ಟು, ಪಶುಪಾಲನೆ, ಕೃಷಿ, ನಾಟಿವೈದ್ಯ ಮುಂತಾದವುಗಳನ್ನು ಅಳವಡಿಸಿಕೊಂಡಿದ್ದಾರೆ, ಎಂದರೆ ತಪ್ಪಾಗಲಾರದು.

ಇಂದಿನ ಜಾಗತೀಕರಣದ ಸಂದರ್ಭದಲ್ಲಿ, ಜೀವನ ಮುಂದುವರಿಕೆಗಾಗಿ, ಹಲವು ರೀತಿಯ ವೃತ್ತಿಗಳಲ್ಲಿ, ಮಹಿಳೆ-ಮಕ್ಕಳು ಮತ್ತು ಪುರುಷರು ತೊಡಗಿಸಿಕೊಂಡಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧ್ಯಯನ ಮಾಡಲಾಗಿದೆ. ಬಹುಮುಖ್ಯವಾಗಿ ಈ ಸಮುದಾಯದ ಜನರು ಕೃಷಿಕರಿಗಿಂತಲೂ, ಕೂಲಿಕಾರ್ಮಿಕರಾಗಿ, ಗ್ರಾಮ-ನಗರ ಪ್ರದೇಶಗಳಲ್ಲಿ ದಿನನಿತ್ಯ ಶ್ರಮವಹಿಸುತ್ತಿದ್ದಾರೆ. ಅದಕ್ಕೆ ತಕ್ಕ ಪ್ರತಿಫಲವು ಲಭಿಸದೆ ಮತ್ತು ವೃತ್ತಿ ದೊರೆಯದಂತಹ ಜನರು ಕೃಷಿಯೇತರ ಚಟುವಟಿಕೆಗಳಾದ ಮನೆ, ಪಾತ್ರೆತೊಳೆಯಲು, ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಸಿಮೆಂಟ್, ಗಾರೆಬೆರೆಸುವಂತಹ ಕೆಲಸಗಳಲ್ಲಿ, ದೈಹಿಕ ಶ್ರಮವನ್ನೆ ಬಂಡವಾಳ ಮಾಡಿಕೊಂಡು ದುಡಿಯುತ್ತಿದ್ದಾರೆ. ಅಲ್ಲದೆ ಸೌದೆ ಕಡಿಯುವ ಕೆಲಸವನ್ನು ಇವರು ನಿರ್ವಹಿಸುತ್ತಾರೆ. ಕೋಳಿ, ಮೇಕೆ, ದನಕರುಗಳನ್ನು ಸಾಕುವ ಕಸುಬು ಮಾಡುತ್ತಿದ್ದಾರೆ. ಸಮೀಪದ ದೊಡ್ಡ ಊರುಗಳಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘಕ್ಕೆ ಹಾಲು ಮಾರುವ, ಹಕ್ಕಿಪಿಕ್ಕಿಯವರನ್ನು ನಾವಿಂದು ಕಾಣಬಹುದಾಗಿದೆ.

ಇತ್ತೀಚೆಗೆ ಸರ್ಕಾರದ ಸಹಾಯದಿಂದ ಭೂಮಿಯನ್ನು ಪಡೆದು ವ್ಯವಸಾಯದಲ್ಲಿ ತೊಡಗಿಸಿಕೊಂಡಿರುವ ಈ ಸಮುದಾಯಗಳು ಎತ್ತುಗಳನ್ನು ಉಪಯೋಗಿಸಿ ವ್ಯವಸಾಯ ಮಾಡುತ್ತಿದ್ದಾರೆ. ವ್ಯವಸಾಯಕ್ಕೆ ಬೇಕಾದ ಸಲಿಕೆ, ಗುದ್ದಲಿ, ಕುಂಟೆ, ರಂಟೆ ಮುಂತಾದವುಗಳನ್ನು ತಾನೇ ಸಿದ್ದಪಡಿಸಿಕೊಳ್ಳುತ್ತಿದ್ದಾರೆ. ವ್ಯವಸಾಯ ತಮಗೆ ಹೆಚ್ಚಿನ ಅನುಕೂಲತೆಗಳನ್ನು ಕಲ್ಪಿಸಿಕೊಡುತ್ತಿಲ್ಲ ಆದಾಯಗಳು ಕಡಿಮೆ ಎಂಬ ಅಂಶವನ್ನು ಹೇಳುತ್ತಾರೆ.

ಹಕ್ಕಿಪಿಕ್ಕಿ ಗಂಡಸರು ಬೇಟೆ ವ್ಯಾಪಾರ ಮುಂತಾದ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕುಟುಂಬ ನಿರ್ವಹಣೆಗೆ ಬೇಕಾದಂತಹ ಆಹಾರ ಪದಾರ್ಥಗಳನ್ನು, ಆರ್ಥಿಕ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಸೂಜಿ, ದಬ್ಬಣ,

ಕಸ್ತೂರಿ, ಕರಿಮಣಿ, ಹಾಲಮಣಿ, ರುದ್ರಾಕ್ಷಿ, ನವಿಲುಗರಿ, ತುಪ್ಪ, ಉಡುವಿನ ತುಪ್ಪ ಮುಂತಾದವುಗಳನ್ನು ಮಾರಾಟ ಮಾಡಿ ಆದಾಯ ತರುತ್ತಾರೆ. ನೇಪಾಳದ ಕಡೆಯಲ್ಲಿ ದೊರಕುವ ತೆಂಗಿನಕಾಯಿಯಲ್ಲಿ ಲಭ್ಯವಾಗುವ ಪಂಚಮುಖಿರುದ್ರಾಕ್ಷಿ, ಏಕಮುಖಿರುದ್ರಾಕ್ಷಿಗಳನ್ನು ಮಾರಾಟ ಮಾಡುವುದರಿಂದ ಇವರಿಗೆ ಹೆಚ್ಚಿನ ಆದಾಯಗಳನ್ನು ತಂದುಕೊಡುತ್ತವೆ. ಜೇನುತುಪ್ಪ, ಹುಲಿಯಉಗುರು, ಹುಲಿಹಲ್ಲು, ಹದ್ದಿನಉಗುರು, ಕರಡಿಉಗುರು ಮುಂತಾದವುಗಳನ್ನು ಕೂಡ ಅವರು ಮಾರಾಟ ಮಾಡುತ್ತಾರೆ. ತಾನೇ ತಯಾರಿಸಿದ ಚೇರಿಗಳನ್ನು ವ್ಯಾಪಾರ ಮಾಡುವುದುಂಟು. ರುದ್ರಾಕ್ಷಿ, ಶಂಖಗಳನ್ನು ಮಾರಾಟಮಾಡುವುದರಿಂದ ಇವರಿಗೆ ಲಾಭಗಳುಂಟು. ನಾಟಿ ಔಷಧಿಯನ್ನು ತಯಾರು ಮಾಡಿ ಮಾರಾಟ ಮಾಡುವ ಕೆಲಸವನ್ನು ಈ ಸಮುದಾಯದವರು ಮಾಡುತ್ತಾರೆ. ಅಲ್ಲದೆ ಇತ್ತೀಚೆಗೆ ಸರ್ಕಾರಿ ನೌಕರಿಯಲ್ಲಿ ಈ ಸಮುದಾಯಗಳು ಇರುವುದು ಕಂಡುಬರುತ್ತದೆ.

ಹೀಗೆ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ತಮ್ಮ ಜೀವನೋಪಾಯಕ್ಕೆ ಈ ರೀತಿಯ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

## ಬುಡಕಟ್ಟು ಸಮಾಜ ಮತ್ತು ಸಂಸ್ಕೃತಿ

### ಸಮಾಜ :

ಮಾನವ ಜೀವನದಲ್ಲಿ ಸಮಾಜವು ಒಂದು ಅವಿಭಾಜ್ಯವಾದ ಅಂಗವಾಗಿದೆ. ಮಾನವನ ಸಮೂಹ ಜೀವನಕ್ಕೆ ಸಂಬಂಧಿಸಿದ ಸಮಸ್ತ ವ್ಯವಹಾರಗಳ ಮೇಲೆ ಸಮಾಜ ತನ್ನದೆ ಆದ ಪ್ರಭಾವವನ್ನು ಬೀರಿದೆ. ವ್ಯಕ್ತಿ ಮತ್ತು ಸಮಾಜ ಪರಸ್ಪರ ಅವಿಭಾಜನೀಯವಾದುದ್ದಾಗಿವೆ. ಪೀಟರ್ ಬರ್ಜರ್‌ರವರು "ಸಮಾಜವು ನಮ್ಮ ಹುಟ್ಟಿಗೂ ಪೂರ್ವದಲ್ಲಿದ್ದು ನಮ್ಮ ಸಾವಿನ ನಂತರವೂ ಮುಂದುವರೆಯಲಿದೆ. ಸಮಾಜದ ಸಮಯಾನುಸಾರವಾದ ಭವ್ಯನಡಿಗೆಯಲ್ಲಿ ನಮ್ಮ ಜೀವನವು ಕಾವ್ಯಕಥನಗಳಿದ್ದಂತೆ" ಎಂದು ವ್ಯಾಖ್ಯಾನಿಸಿದ್ದಾರೆ. ಮಾನವ ಸಮಾಜವನ್ನು "ಸಾಮಾಜಿಕ ಸಂಬಂಧಗಳ ಬಲೆ" ಎಂದು ಮೆಕೈವರ್ ಮತ್ತು ಪೇಜ್‌ರವರು ಹೇಳಿದ್ದಾರೆ.

ಸಮಾಜ ಎಂಬ ಪದವನ್ನು ಆಂಗ್ಲಭಾಷೆಯಲ್ಲಿ ಸೊಸೈಟಿ(Society) ಎಂದು ಕರೆಯಲಾಗಿದೆ. ಲ್ಯಾಟಿನ್ ಭಾಷೆಯ "ಸೋಸಿಯಸ್"(Socius) ಎಂಬ ಪದದಿಂದ ನಿಷ್ಪತಿಯಾಗಿದೆ. ಸೋಸಿಯಸ್ ಎಂದರೆ 'ಸಹಬಾಳ್ವೆ' ಅಥವಾ 'ಕೂಡಿ ಬಾಳುವುದು' ಎಂದರ್ಥ. ಸಮಾಜವೆಂದರೆ ಸಹಬಾಳ್ವೆ ನಡೆಸುವ ಜನರ ಸಂಘಟನೆ ಎನ್ನಲಾಗಿದೆ.

### ಸಂಸ್ಕೃತಿ :

ಸಂಸ್ಕೃತಿಯು ಮಾನವ ಸಮುದಾಯದ ವಿಶಿಷ್ಟವಾದ ಆಸ್ತಿಯಾಗಿದೆ. ಮಾನವನಿಗಿಂತಲೂ ಕೆಳಮಟ್ಟದ ಪ್ರಾಣಿ ವರ್ಗಗಳಲ್ಲಿ ಇದು ಕಂಡುಬರುವುದಿಲ್ಲ. ಸಂಸ್ಕೃತಿಯು ಬಹು ಅರ್ಥ ವ್ಯಾಪ್ತಿಯುಳ್ಳ ಪರಿಕಲ್ಪನೆಯಾಗಿದೆ. ಇದು ಮಾನವನ ಜೀವನ ವಿಧಾನದ ಪ್ರತೀಕ. ನಮ್ಮ ನಡತೆ, ನೈತಿಕತೆ, ರೂಢಿ, ಸಂಪ್ರದಾಯ, ನಂಬಿಕೆ-ಆಚರಣೆ,

ಮೌಲ್ಯಾದರ್ಶನ, ಧಾರ್ಮಿಕತೆ, ರಾಜಕೀಯ, ಆರ್ಥಿಕ ವ್ಯವಸ್ಥೆಯ ಚಟುವಟಿಕೆಗಳನ್ನು ಒಳಗೊಂಡಿದೆ.

'ಸಂಸ್ಕೃತಿ' ಎಂಬ ಪದಕ್ಕೆ ತತ್ಸಮಾನವಾದ ಆಂಗ್ಲಭಾಷೆಯ "ಕಲ್ಚರ್"(Culture)ಎಂದು ಕರೆಯಲಾಗಿದೆ. ಈ ಪದವು ಲ್ಯಾಟಿನ್ ಭಾಷೆಯ "ಕೊಲೆರ್'(Colere)ನಿಂದ ನಿಷ್ಪತ್ತಿಯಾಗಿದೆ. ಸಂಸ್ಕೃತಿ ಎಂಬುವುದು 'ಬೆಳೆಸು', 'ಕೃಷಿಮಾಡು' ಎಂಬ ಅರ್ಥವನ್ನು ನೀಡುತ್ತದೆ. ಸಂಸ್ಕೃತಿಯು ಸಮೂಹವೊಂದರ ನಂಬಿಕೆಗಳು ಮೌಲ್ಯಗಳು ಹಾಗೂ ಅಭಿವ್ಯಕ್ತಾತ್ಮಕ ಸಂಕೇತಗಳನ್ನು ಸೂಚಿಸುತ್ತದೆ. ಸಂಸ್ಕೃತಿಯು ಸಮಾಜದ ಅವಿಭಾಜ್ಯ ಭಾಗವಾಗಿದ್ದರೂ ಸಮಾಜ ಮತ್ತು ಸಂಸ್ಕೃತಿ ಬೇರೆ ಬೇರೆಯಾಗಿವೆ. ಸಂಸ್ಕೃತಿ ಎಂಬುವುದನ್ನು ಸಮಾಜವೊಂದರ ಸದಸ್ಯರು ತಮ್ಮಲ್ಲಿ ಹಂಚಿಕೊಂಡಿರುವ ವರ್ತನೆಯ ವ್ಯವಸ್ಥೆಯಾಗಿದೆ. ಅದರಂತೆ ಸಮಾಜವನ್ನು ಸಮಾನ ಸಂಸ್ಕೃತಿಯೆಂದು ಹಂಚಿಕೊಂಡಿರುವ ಒಂದು ಜನ ಸಮುದಾಯ ಎಂದು ಕರೆಯಲಾಗಿದೆ.

* ಇತಿಹಾಸದಲ್ಲಿ ಸಂಸ್ಕೃತಿ ಎಂಬ ಪದವನ್ನು ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ, ಒಂದು ನಿರ್ದಿಷ್ಟ ಜನ ಸಮೂಹವು ಮಾಡಿರಬಹುದಾದ ಉತ್ಕೃಷ್ಟಮಟ್ಟದ ಸಾಧನೆಗಳನ್ನು ಸಂಕೇತಿಸಲು ಬಳಸಲಾಗಿದೆ.

* ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರದಲ್ಲಿ ಸಂಸ್ಕೃತಿಯೂ ಒಂದು ಜನ ಸಮುದಾಯದ ಎಲ್ಲಾ ಬಗೆಯ ಸಾಧನೆಗಳನ್ನು ಒಳಗೊಂಡಿರುವ ಸರ್ವಾವೃತವಾದ ಕಲ್ಪನೆಯಾಗಿದೆ. ಇದು ಮಾನವನ ಸಾಮಾಜಿಕ ಜೀವನವನ್ನು ಪ್ರತಿಬಿಂಬಿಸುತ್ತದೆ.

ಸಂಸ್ಕೃತಿಯು ನಮ್ಮ ನಡತೆ, ನೈತಿಕತೆ, ರೂಢಿ-ಸಂಪ್ರದಾಯ, ನಂಬಿಕೆ-ಆಚರಣೆ, ಧಾರ್ಮಿಕಜೀವನ, ಮತ್ತು ಆರ್ಥಿಕ ಚಟುವಟಿಕೆಗಳನ್ನು ಸಾಮಾಜಿಕ ಹಾಗೂ ವ್ಯಕ್ತಿಗತ ಜೀವನದಲ್ಲಿ ಮಾನವನು ಸಂಪಾದಿಸಿರುವ ಎಲ್ಲಾ ಅಂಶಗಳನ್ನು ಸಂಸ್ಕೃತಿಯಲ್ಲಿ ಒಳಗೊಂಡಿರುತ್ತದೆ. ಸಂಸ್ಕೃತಿಯು ಮಾನವನು ತನ್ನ ಸಮಾಜದಿಂದ ಪಡೆದಿರುವ ಸಾಮಾಜಿಕ ಪರಂಪರೆಯಾಗಿದೆ.

ಸಮಾಜವು ಅಮೂರ್ತ ಸ್ವರೂಪವಾಗಿದ್ದು, ಇದು ನಮ್ಮ ಕಲ್ಪನೆಯನ್ನು ಅವಲಂಬಿಸಿದೆ. ಮಾನವ ಸಂಬಂಧಗಳ ಒಂದು ಸಂಘಟನಾ ವ್ಯವಸ್ಥೆಯಾಗಿದೆ. ಸಮಾಜದಲ್ಲಿ ಜನರ ಧ್ಯೇಯೋದ್ದೇಶಗಳು ಮತ್ತು ಹಿತಾಸಕ್ತಿಗಳು ಬಹಳ ವಿಸ್ತಾರ ವ್ಯಾಪಿಯನ್ನು ಒಳಗೊಂಡಿದೆ. ಸಂಸ್ಕೃತಿಯು ಸಮಾಜದ ಅವಿಭಾಜ್ಯ ಅಂಗವಾಗಿದೆ.

ಮನುಷ್ಯ ಮೂಲಭೂತ ಜೀವನದ ಸ್ಥಿತಿಗತಿಗನುಗುಣವಾಗಿ ಬದುಕುತ್ತಿದ್ದಾನೆ. ಸಮಾಜವನ್ನು ಹೀಗೆ ಇರಬೇಕೆಂದು ಬಯಸುತ್ತಾನೆ. ಭಾಷೆಯ ಸ್ಥಗಿತ ಸ್ಥಿತಿಗೆ ಸಾಂಸ್ಥಿಕ ರೂಪಕೊಟ್ಟು, ಸಂಭ್ರಮಿಸುವ ಮತಮಾನ್ಯ ವ್ಯವಸ್ಥೆಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ. ಇನ್ನೂ ಕೆಲವರು ಈ ಸ್ಥಿತಿಯಿಂದ ಹೊರಬರಲು ಒಳ ಹೋರಾಟವನ್ನು ಹುಟ್ಟು ಹಾಕಿಕೊಂಡು ಸಂಕಟ ಪಡುತ್ತಾರೆ. ಸಂಕಟ ಪಡುತ್ತಾ. ಸಿಟ್ಟಾಗುತ್ತಾ ಸ್ಥಗಿತ ಸ್ಥಿತಿಯ ಎಲ್ಲೆ ಮೀರಲು ಬಯಸುತ್ತಾರೆ. ಮೀರುವುದೇ

ಮಾನವೀಯತೆ, ಅದೇ ಸಂಸ್ಕೃತಿ ನೆಲೆ ಎಂಬ ಅಭಿಪ್ರಾಯವನ್ನು ವಿದ್ವಾಂಸರುಗಳು ಸೂಚಿಸುತ್ತಾರೆ. ಈ ಅರ್ಥದಲ್ಲಿ ಸಂಸ್ಕೃತಿ ಮತ್ತು ಸಮಾಜಕ್ಕೂ ಒಂದು ಉತ್ತಮ ಬಾಂಧವ್ಯವಿರುವುದು ಸ್ಪಷ್ಟವಾಗುತ್ತದೆ.

ಸಂಸ್ಕೃತಿಯೆನ್ನುವುದು ವ್ಯಕ್ತಿಗಿಂತ ಸಮಾಜದ ಭಾಗವಾಗಿದೆ. ವ್ಯಕ್ತಿಯು ಈ ಸಮಾಜದ, ಸಂಸ್ಕೃತಿಯ ಒಂದು ಘಟಕವಾಗಿ ಒಳಗಾಗುವ ಹೊರಗಾಗುವ, ಒಡನಾಟ ಮತ್ತು ಹೋರಾಟಗಳಲ್ಲಿ ಮಗ್ನನಾಗುತ್ತಾನೆ. ಇಲ್ಲಿಯೇ ಪ್ರಾಣಿ ಸಮಾಜಕ್ಕಿಂತ ಮನುಷ್ಯ ಸಮಾಜ ಬೇರೆಯಾಗಿ ಕಾಣುವುದು. ಮನುಷ್ಯ ಸಮಾಜಕ್ಕೂ, ಸಂಸ್ಕೃತಿಗೂ ಸಂಬಂಧ ಬೆಸೆಯುತ್ತದೆ.

ವ್ಯಕ್ತಿ ವಿನ್ಯಾಸ ಕೇವಲ ವ್ಯಕ್ತಿಯದು ಮಾತ್ರವಾಗಿರದೆ, ತಾನು ಬದುಕುತ್ತಿರುವ ಸಮಾಜ ಮತ್ತು ಸಂಸ್ಕೃತಿಯಿಂದ ಪ್ರೇರಿತವಾಗಿರುತ್ತದೆ. ವ್ಯಕ್ತಿ, ಸಮಾಜ ಮತ್ತು ಸಂಸ್ಕೃತಿಯ ಸಂಬಂಧ ತುಂಬಾ ಗಾಢವಾದುದ್ದು. ಈ ಸಂದರ್ಭದಲ್ಲಿ ಎಸ್.ಎಫ್. ನ್ಯಾಡೆಲ್‌ರವರು "ಸಮೂಹ ಮತ್ತು ಸಂಬಂಧಗಳ ಆಯಾಮದಲ್ಲಿ ಪ್ರಕಟಗೊಳ್ಳುವ ಸಾಮಾಜಿಕ ಸತ್ಯಗಳ ಮೊತ್ತವೇ ಸಮಾಜ. ಇದೇ ಮೊತ್ತದ ಕ್ರಿಯೆಯ ಆಯಾಮವೇ ಸಂಸ್ಕೃತಿ" ಎಂದು ವ್ಯಾಖ್ಯಾನಿಸಿದ್ದಾರೆ.

ಮನುಷ್ಯನದೇ ಒಂದು ಚರಿತ್ರೆ, ಒಂದು ಪುರಾಣ, ಒಂದು ಐತಿಹ್ಯ. ಈ ಮನುಷ್ಯ ರಾಜನಾಗಿ, ರಾಣಿಯಾಗಿ, ಗುಲಾಮನಾಗಿ, ಯೋಧನಾಗಿ, ಹಾಗೆಯೇ ಒಂದು ಸ್ಥಳವಾಗಿ, ದೈವವಾಗಿ, ಅಸಾಧ್ಯ ಅಂಚಿನಲ್ಲಿ ಮಿಂಚುವ ಮಹಾಶಕ್ತಿಯಾಗಿ ಐತಿಹ್ಯವಾಗುತ್ತಾನೆ. ವಿಸ್ತಾರಗೊಂಡು ಪುರಾಣವಾಗುತ್ತಾನೆ. ಮನುಷ್ಯ ಏನೆಲ್ಲಾ ಆಗುತ್ತಾನೋ ಸಂಸ್ಕೃತಿಯು ಅದೆಲ್ಲವೂ ಆಗಿರುತ್ತದೆ, ಎಂದು ಹೇಳುವ "ಬರಗೂರು ರಾಮಚಂದ್ರಪ್ಪನವರ" ಮಾತುಗಳು ಮಾನವ ಮತ್ತು ಸಂಸ್ಕೃತಿಯ ಸಂಬಂಧಗಳ ಬೆಸುಗೆಯನ್ನು ಅರಿಯಲು ಸಹಾಯಕವಾಗುತ್ತದೆ.೨೪

ಸಮಾಜಶಾಸ್ತ್ರಜ್ಞ ವೈಲ್ಡ್‌ರವರು ಹೇಳುವಂತೆ "ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟು ಸಂಸ್ಕೃತಿಯು ವಿಕಾಸವಾಗುತ್ತದೆ." ಮನುಷ್ಯನ ದೈಹಿಕ ಹಾಗೂ ಬೌದ್ಧಿಕ ಶ್ರಮ ಬಳಕೆಯಾದಂತೆಲ್ಲ ಬದಲಾವಣೆಗಳು ಆಗುತ್ತವೆ. ಹೊಸ ಹೊಸ ವಿನ್ಯಾಸಗಳು ರೂಪುಗೊಳ್ಳುತ್ತವೆ. ಇಂಥ ಬೆಳವಣಿಗೆಯನ್ನನುಸರಿಸಿ ಸಂಸ್ಕೃತಿಯೂ ವಿಕಾಸವಾಗುತ್ತದೆ. ಈ ಚಲನಶೀಲ ಸ್ಥಿತಿಯ ಮೂಲ ಶ್ರಮವಾಗಿದ್ದು ಮನುಷ್ಯನು ಕೇಂದ್ರ ಸ್ಥಾನದಲ್ಲಿರುತ್ತಾನೆ.

ಹರ್ಸ್ ಕೊವಿಟ್ಸ್ ಹೇಳುವಂತೆ 'ಜನರ ಜೀವನ ವಿಧಾನವೇ ಸಂಸ್ಕೃತಿ' ಈ ಜನ ಯಾರಾದರೂ ಆಗಿರಬಹುದು. ಎಲ್ಲಾದರೂ ವಾಸಿಸಬಹುದು. ಜನರಿದ್ದ ಕಡೆ ಸಂಸ್ಕೃತಿ ಇದ್ದೆ ಇರುತ್ತದೆ. ಆದರೆ ಹೀಗೆ ಇರುವ ಸಂಸ್ಕೃತಿ ಒಂದೇ ತೆರನಾದುದಲ್ಲ, ಒಂದೇ ವಿನ್ಯಾಸದ್ದಲ್ಲ, ಒಂದೊಂದು ಪ್ರದೇಶದಲ್ಲಿ ಒಂದೊಂದು ಜನಾಂಗಕ್ಕೆ ಒಂದೊಂದು ರೀತಿಯ ಸಂಸ್ಕೃತಿ ಇರಲು ಸಾಧ್ಯ.

"ಸಮಾಜದ ಒಬ್ಬ ಸದಸ್ಯನಾಗಿ, ಮನುಷ್ಯನು ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೀತಿ-ನಿಯಮ, ಆಚರಣೆ, ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ" ಎಂದು ಟೈಲರ್‌ರವರು ಹೇಳುತ್ತಾರೆ.

ಒಟ್ಟಾರೆಯಾಗಿ ಸಂಸ್ಕೃತಿ ಎಂದರೆ ಆಚಾರ-ವಿಚಾರ, ಉಡುಗೆ-ತೊಡುಗೆ, ಭಾಷೆ, ಆಹಾರ, ಪೌರಾಣಿಕ, ಐತಿಹಾಸಿಕ ವಿಚಾರಗಳನ್ನೊಳಗೊಂಡ ಬಹುರೂಪಿ ಪರಂಪರೆಯೆಂದರೆ ತಪ್ಪಾಗಲಾರದು.

ಮಾನವ ಸಮುದಾಯದ ಚರಿತ್ರೆ ದೀರ್ಘವಾದುದ್ದಾಗಿರುವುದರಿಂದ ಆದಿವಾಸಿಯಾಗಿದ್ದ ಮಾನವ ಕಾಲ ಬದಲಾದಂತೆ ನಾಗರೀಕತೆಯನ್ನು ಮೈಗೂಡಿಸಿಕೊಂಡು ಇಂದಿನ ಸ್ಥಿತಿಗೆ ಬಂದಿದ್ದರೂ, ಇರುಳಿಗರು ಇನ್ನೂ ತಮ್ಮ ಮೂಲ(ಆದಿವಾಸಿ) ಸಂಸ್ಕೃತಿಯ ಅಂಗವಾಗಿಯೇ ಉಳಿದಿರುವುದನ್ನು ಕಾಣಬಹುದು. ಇವರ ಬದುಕಿನಲ್ಲಿ ಏನೋ ವಿಶೇಷತೆ ಇರುವುದೆಂಬ ಅನುಮಾನ ಎದುರಾಗುತ್ತದೆ. ಒಳ ಹೊಕ್ಕಿ ನೋಡಿದಾಗ ಅವರ ಸಮಷ್ಠಿ ಪ್ರಜ್ಞೆ ಅಭಿವ್ಯಕ್ತವಾಗುತ್ತದೆ.

ಬುಡಕಟ್ಟುಗಳ ಅಧ್ಯಯನದಲ್ಲಿ ಸಂಸ್ಕೃತಿ ಬಹು ಮುಖ್ಯವಾದ ಪಾತ್ರ ವಹಿಸುತ್ತದೆ. "ಸಮಾಜದ ಒಬ್ಬ ಜೀವಿಯಾಗಿ ಮಾನವ ಪರಂಪರಾನುಗತವಾಗಿ ರೂಢಿಸಿಕೊಂಡು ಬಂದಿರುವ, ವರ್ಗಾಯಿಸಲ್ಪಡುವ, ಹಂಚಿಕೊಳ್ಳುವ, ಗೌರವಿಸುವ, ಆಲೋಚನೆಗಳ, ಮೌಲ್ಯಗಳ ಮತ್ತು ನಿರ್ಮಾಣ ಮಾಡುವ ವಸ್ತುಗಳ ಮೊತ್ತನ್ನು ಸಂಸ್ಕೃತಿ" ಎಂದು ಕರೆಯಬಹುದು.೨೫

ಹಕ್ಕಿಪಿಕ್ಕಿಗಳು ಮತ್ತು ಇರುಳಿಗರನ್ನು ಬುಡಕಟ್ಟು ಸಮುದಾಯ ಎಂದು ಪರಿಗಣಿಸುವುದರಿಂದ ಈ ಬುಡಕಟ್ಟು ಎಂದರೇನು? ಎಂಬ ಪ್ರಶ್ನೆ ಸೃಷ್ಟಿಯಾಗುತ್ತದೆ. ನಗರ, ಗ್ರಾಮೀಣ ಸಂಸ್ಕೃತಿಯಂತೆಯೇ, ಇನ್ನೊಂದು ಸಂಸ್ಕೃತಿ ವ್ಯಕ್ತವಾಗುತ್ತದೆ. ಅದೇ ಬುಡಕಟ್ಟು ಸಂಸ್ಕೃತಿ ಅಥವಾ ಅರಣ್ಯ ಸಂಸ್ಕೃತಿ. ಯಾವುದೇ ಬುಡಕಟ್ಟು ಸಮುದಾಯವನ್ನು ಅಧ್ಯಯನ ಮಾಡುವಾಗ ಅವರ ವಾಸಸ್ಥಳ, ಅವರಲ್ಲಿನ ವಾಕ್ ಪರಂಪರೆ, ಸಂಪ್ರದಾಯ, ಆಚಾರ-ವಿಚಾರ, ರೀತಿ-ರಿವಾಜುಗಳು, ನಂಬಿಕೆ, ಧರ್ಮ, ಕಲೆ, ಹುಟ್ಟಿನಿಂದ ಸಾವಿನವರೆಗೆ ಬರುವ ಎಲ್ಲಾ ಬಗೆಯ ಜೀವನಾವರ್ತದ ಆಚರಣೆಗಳು ಅವರು ಇಟ್ಟಿರುವ ನಂಬಿಕೆ, ಕೌಟುಂಬಿಕ ವ್ಯವಸ್ಥೆ, ಸಾಮಾಜಿಕ ಜೀವನ, ನಾಗರೀಕತೆಯ ಪ್ರಭಾವದಿಂದ ಆಗಿರುವ ಬದಲಾವಣೆ, ವೃತ್ತಿ, ಆಹಾರಪದ್ದತಿ ಇತ್ಯಾದಿಯಾಗಿ ಎಲ್ಲಾ ವಿಷಯಗಳನ್ನು ಗಮನಿಸಬೇಕಾಗುತ್ತದೆ. ಇಂತಹ ಅಧ್ಯಯನವು ಬುಡಕಟ್ಟು ಸಮುದಾಯದ ಆಳವಾದ ಅಧ್ಯಯನವಾದ್ದರಿಂದ ಇದನ್ನು 'ಸಮಾಜ ಶಾಸ್ತ್ರೀಯ' ದೃಷ್ಟಿಕೋನದ ಮೂಲಕ ಅಧ್ಯಯನವನ್ನು ನಡೆಸುವುದು ಸೂಕ್ತವೆನಿಸುತ್ತದೆ.

ಯಾವುದೇ ಒಂದು ಸಮುದಾಯದ ಸಂಸ್ಕೃತಿಯು ನಿಂತ ನೀರಲ್ಲ ಅದು ಸದಾ ಹರಿಯುತ್ತಿರುವ ಜೀವಜಲ. ನಿತ್ಯಪರಿವರ್ತನಶೀಲವಾದದ್ದು. ಅನ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗುವ ಪ್ರತ್ಯೇಕತೆಯನ್ನು ಕಾಯ್ದುಕೊಂಡಿರುವ ಬುಡಕಟ್ಟು ಸಮುದಾಯಗಳ ಸಂಸ್ಕೃತಿಗಳಲ್ಲಿಯೂ ಕೂಡ ಕಾಲಾಂತರದಲ್ಲಿ ಎಷ್ಟೋ ಬದಲಾವಣೆಗಳಾಗುತ್ತಿರುವುದನ್ನು ಕಾಣುತ್ತೇವೆ. ಭಾರತದಲ್ಲಿನ ಬುಡಕಟ್ಟುಗಳ ಪರಿಸ್ಥಿತಿ ಕೂಡ ಕಾಲದಿಂದ ಕಾಲಕ್ಕೆ ನಿರಂತರವಾಗಿ ಬದಲಾವಣೆ ಹೊಂದುತ್ತಲೇ ಬಂದಿದೆ. ಇದು ಅನಿವಾರ್ಯವಾಗಿದೆ. ಸಂಸ್ಕೃತಿಯ ಅಧ್ಯಯನದಲ್ಲಿ ಸಾಂಸ್ಕೃತಿಕ ಪರಿವರ್ತನೆ ಎನ್ನುವುದು

ಬಹುಮುಖ್ಯವಾದ ಅಂಶ.

ಟಿ.ಎಸ್. ಎಲಿಯಟ್ "ಮನುಷ್ಯನು ವಂಶಾನುಗತವಾದ ಕೆಲವು ಲಕ್ಷಣಗಳೊಡನೆ, ಶಕ್ತಿಗಳೊಡನೆ ಹುಟ್ಟುತ್ತಾನೆ. ಇವುಗಳನ್ನು ಯಾರೂ ಅವನಿಗೆ ಕಲಿಸಿ ಕೊಡಬೇಕಿಲ್ಲ. ಆದರೆ ಇನ್ನೂ ಕೆಲವನ್ನು ಅವನಿಗೆ ಕಲಿಸಿ ಕೊಡಬೇಕಾಗುತ್ತದೆ. ಅಥವಾ ತನ್ನ ಪರಿಸರದಿಂದ ಅವನೇ ಕಲಿತು ಕೊಳ್ಳುತ್ತಾನೆ. ಉದಾ:-ವಸ್ತ್ರಗಳ ಉಪಯೋಗ, ವ್ಯವಸಾಯ,ಇತ್ಯಾದಿಗಳು. ಈ ಹಿನ್ನೆಲೆಯಲ್ಲಿ ಇರುಳಿಗರು ಮತ್ತು ಹಕ್ಕಿಪಿಕ್ಕಿಗಳನ್ನು ಗಮನಿಸಿದಾಗ ಅವರಿಗೆ ಅವರ ತಲತಲಾಂತರದಿಂದ ಬಂದ ಕೆಲವು ಸಂಪ್ರದಾಯ, ನಂಬಿಕೆಗಳು ಆಚರಣೆಗಳು, ಆರಾಧನಾ ಪದ್ಧತಿಗಳು ರೂಢಿಗತವಾಗಿ ಮುಂದುವರೆಯುವುದರ ಜೊತೆಗೆ ಅವರು ವಾಸಿಸುವ ಪರಿಸರದ ಪ್ರಭಾವದಿಂದ ಬದಲಾವಣೆಗಳೂ ಕೂಡ ಗೋಚರಿಸುತ್ತವೆ. ಆದುದರಿಂದ ಈ ಸಮುದಾಯಗಳ ಸಂಸ್ಕೃತಿಯನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನವನ್ನು ಮಾಡಲಾಗಿದೆ.

ಒಂದು ಸಮುದಾಯದ ಜೀವನ ಶೈಲಿ ಆ ಸಮುದಾಯದ ಸಂಸ್ಕೃತಿ ಮತ್ತು ಪರಂಪರೆಯಲ್ಲಿನ ಮೌಲ್ಯಗಳನ್ನು ಆಧರಿಸಿ ರೂಪುಗೊಂಡಿರುತ್ತದೆ. ಸಂಸ್ಕೃತಿ ಆಂತರಿಕ ಮತ್ತು ಬಾಹ್ಯ ಒತ್ತಡಗಳಿಂದಾಗಿ ಬದಲಾಗುವ ಸಾವಯವ ಸಾರಭೂತವಾದ್ದರಿಂದ ಆಯಾ ಬದಲಾವಣೆಗಳಿಗೆ ತಕ್ಕಂತೆ ಜೀವನ ವಿಧಾನವು ಆಗಾಗ ಬದಲಾವಣೆಗೆ ಒಳಗಾಗುತ್ತದೆ. ಹಾಗೆಯೇ ಹಕ್ಕಿಪಿಕ್ಕಿ ಮತ್ತು ಇರುಳಿಗರು ಕೂಡ ಮೇಲಿನ ಹೇಳಿಕೆಯಂತೆಯೇ ತಮ್ಮ ಮೌಲ್ಯಗಳನ್ನು ಉಳಿಸಿಕೊಳ್ಳುವುದರ ಜೊತೆಗೆ ಕಾಲ, ದೇಶ ಪರಿಸರಕ್ಕನುಗುಣವಾಗಿ ಬದಲಾವಣೆಗೆ ಒಳಗಾಗಿದ್ದಾರೆ. ೨೬

**ಇರುಳಿಗರ ಸಮಾಜ ಮತ್ತು ಸಂಸ್ಕೃತಿ :**

ಪ್ರಕೃತಿಯಲ್ಲಿ ಪ್ರತಿನಿತ್ಯ ಸ್ಥಿತ್ಯಂತರಗಳು ಆಗುತ್ತಿವೆ. ಆದರೂ ಸೂರ್ಯೋದಯ, ಸೂರ್ಯಾಸ್ತಂಗತ, ಹಗಲು-ರಾತ್ರಿ, ಅಮವಾಸ್ಯೆ-ಹುಣ್ಣಿಮೆ, ಋತುಚಕ್ರದಲ್ಲಿನ ಬದಲಾವಣೆ, ಮರಗಿಡ ಬಳ್ಳಿಗಳ ಅನ್ಯೂನ್ಯತೆ, ಮಳೆ-ಮೋಡ, ಭೂಮಿ-ಆಕಾಶ ಇತ್ಯಾದಿಗಳನ್ನು ಗಮನಿಸಿದಾಗ ಪ್ರಕೃತಿಯಲ್ಲಿ ಒಂದು ನಿರ್ದಿಷ್ಟ ವ್ಯವಸ್ಥೆಯಿರುವುದು ಗೋಚರಿಸುತ್ತದೆ. ಮನುಷ್ಯ ಕೂಡ ಈ ಪ್ರಕೃತಿಯ ಒಂದು ಭಾಗವಾಗಿರುವುದರಿಂದ ಅವನ ಬದುಕಿನಲ್ಲಿಯೂ ಒಂದು ವ್ಯವಸ್ಥೆಗೆ ಎಲ್ಲೆಗಳಿರುತ್ತವೆ. ಅದು ಬುಡಕಟ್ಟಿನವರನ್ನು ಹೊರತಾಗಿ ಇರುವುದಿಲ್ಲ.

ಜೀವನಪಯೋಗಕ್ಕಾಗಿ ಆಹಾರ ಹುಡಕುತ್ತಾ, ಕಾಡಿನಲ್ಲಿ ಅಲೆದಾಡಿದ ಈ ಮಾನವ ಬಿಡುವಿನ ವೇಳೆಯಲ್ಲಿ, ಆನಂದ ಪಡುವುದಕ್ಕಾಗಿ ಪ್ರಾಣಿಪಕ್ಷಿಗಳನ್ನು ಅನುಕರಿಸುವುದರ ಮೂಲಕ, ಮನರಂಜನೆಯನ್ನು ಸೃಷ್ಟಿ ಮಾಡಿಕೊಂಡ. ಅದರಂತೆ ಮಾನವ ಪ್ರಾಣಿಪಕ್ಷಿಗಳ ಇರುವಿಕೆಯಲ್ಲಿನ ಮೂಲತಃ ಅವಶ್ಯಕತೆಗಳನ್ನು ಗಮನಿಸಿ ತಾನೂ ಸಹ ಅವುಗಳಂತೆ ಬದುಕುವುದನ್ನು ಕಲಿತಿದ್ದಾನೆ.

ಇರುಳಿಗ ಬುಡಕಟ್ಟು ಸಮುದಾಯದ ಸಾಮಾಜಿಕ ವ್ಯವಸ್ಥೆಯನ್ನು

ಗಮನಿಸಿದಾಗ ಅವರು ತಮ್ಮದೇ ಆದಂತಹ ರೀತಿ-ನೀತಿ, ಆಚಾರ-ವಿಚಾರಗಳನ್ನು ರೂಢಿಸಿಕೊಂಡಿದ್ದಾರೆ. ಬುಡಕಟ್ಟು ಜನರಲ್ಲಿ ಉದ್ಭವಿಸುವ ಸಮಸ್ಯೆ, ತಕರಾರು, ಇಕ್ಕಟಿನ ಪರಿಸ್ಥಿತಿ, ಸಾಂಸಾರಿಕ ತೊಡಕುಗಳು ಕಂಡು ಬಂದಾಗ ತಮ್ಮದೇ ಆದಂತಹ ನ್ಯಾಯೋಪಮಾರ್ಗಗಳನ್ನು ಕಂಡುಕೊಳ್ಳುತ್ತಾರೆ.

ಪ್ರಮುಖವಾಗಿ ಇರುಳಿಗರಲ್ಲಿ ಪಿತೃ ಪ್ರಧಾನ ವ್ಯವಸ್ಥೆ ಕಂಡು ಬಂದರೂ ಅವರಲ್ಲಿ ಪ್ರಮುಖವಾಗಿ ಹೆಣ್ಣು ಮಗುವಿನ ಜನನ ಬಹಳ ಸಂತೋಷವನ್ನುಂಟು ಮಾಡುತ್ತದೆ. ಹೆಣ್ಣು ಮಗುವಿನ ಜನನ ಶಕ್ತಿ ದೇವತೆಯ ಪ್ರತಿರೂಪವೆಂದು ಭಾವಿಸುತ್ತಾರೆ. ಮೊದಲು ಹೆಣ್ಣು ಮಗು ಹುಟ್ಟಿದರೆ ಹಬ್ಬದ ವಾತಾವರಣವನ್ನು ಸೃಷ್ಟಿಸುತ್ತಾರೆ. ಈ ಅಂಶವನ್ನು ಅವಲೋಕಿಸಿದಾಗ ಸ್ತ್ರೀಪ್ರಧಾನ ಮೌಲ್ಯಗಳು ಮಾತೃ ಪ್ರಧಾನ ವ್ಯವಸ್ಥೆಗಳು ಬುಡಕಟ್ಟು ಸಮುದಾಯಗಳಲ್ಲಿ ಹೇಗೆ ಪ್ರತಿಬಿಂಬಿತವಾಗಿವೆ ಎಂಬ ಅಂಶವು ಬೆಳಕಿಗೆ ಬರುತ್ತದೆ.

ಇರುಳಿಗರ ಜೀವನ ವಿಧಾನದಲ್ಲಿ, ಇವರ ಸಾಮಾಜಿಕ ವ್ಯವಸ್ಥೆಯನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಗಮನಿಸಿದಾಗ, ಗುಂಪುಗಳಾಗಿ ವಾಸ ಮಾಡುತ್ತಿದ್ದ ಇವರ ಸಮುದಾಯವು, ಒಂದೆಡೆ ನೆಲೆನಿಂತ ಮೇಲೆ ವಸತಿ ವ್ಯವಸ್ಥೆಯನ್ನು ರೂಢಿಸಿಕೊಂಡಿರುವುದು ಕಂಡು ಬರುತ್ತದೆ.

ಇರುಳಿಗರು ತಾವಿರುವ ಪ್ರದೇಶವನ್ನು ಊರು, ಹಳ್ಳಿ, ಕಾಲೋನಿ ಎಂದು ಕರೆದರೆ, ಇತರರು ಇವರು ವಾಸಿಸುವ ಸ್ಥಳವನ್ನು 'ಇಲ್ಲಿಗರ ಕಾಲೋನಿ', 'ಇಲ್ಲಿಗರ ದೊಡ್ಡಿ', 'ಪೂಜಾರಿ ದೊಡ್ಡಿ', ಪೂಜಾರ್ರು ಕಾಲೋನಿ ಎಂದೆಲ್ಲಾ ಕರೆಯುತ್ತಾರೆ. ಸರ್ಕಾರಿ ದಾಖಲೆಗಳಲ್ಲಿ 'ಇಲ್ಲಿಗರ ಕಾಲೋನಿ' ಎಂದು ನಮೂದಾಗಿರುತ್ತದೆ. ಎಲ್ಲಾ ಬುಡಕಟ್ಟುಗಳಲ್ಲಿಯೂ ಇರುವಂತೆ ಈ ಸಮುದಾಯದಲ್ಲೂ ಒಳ ಪಂಗಡ ವ್ಯವಸ್ಥೆಗಳು ಇವೆ. ಎಲ್ಲಾ ಸಾಮಾಜಿಕ ಕಟ್ಟುಪಾಡುಗಳಿಗೆ, ಪ್ರತಿಯೊಬ್ಬರು ತಮ್ಮ ಸಮಾಜ ವ್ಯವಸ್ಥೆಗೆ ತಲೆಬಾಗಿ ನಡೆಯುತ್ತಾರೆ.

ನ್ಯಾಯ ಪಂಚಾಯಿತಿ ವ್ಯವಸ್ಥೆಯಲ್ಲಿ ತಮ್ಮದೇ ನೀತಿ-ನಿಯಮಗಳನ್ನು ಇವರು ಅನುಸರಿಸುತ್ತಾರೆ. ಇವರಲ್ಲಿ ಪ್ರಮುಖವಾಗಿ ನಾಡಗೌಡ ಹೆಚ್ಚಿನ ಅಧಿಕಾರವನ್ನು ಹೊಂದಿರುತ್ತಾನೆ. ಇಡೀ ನಾಲ್ಕಾರು ಹಳ್ಳಿಗಳಿಗೆ ಮುಖ್ಯ ವ್ಯವಸ್ಥಾಪಕ ನ್ಯಾಯಧೀಶ ಅವನೇ ಆಗಿರುತ್ತಾನೆ. ಇರುಳಿಗ ಸಮಾಜದಲ್ಲಿ ತಲೆದೋರುವ ಎಲ್ಲಾ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸುವ ಹೊಣೆ ಈ ಮುಖ್ಯಸ್ಥನ ಜವಾಬ್ದಾರಿಯಾಗಿರುತ್ತದೆ.

ಹಬ್ಬ-ಹರಿದಿನ, ಮದುವೆ-ಮುಂಜಿ, ಇತ್ಯಾದಿ ಕಾರ್ಯಕ್ರಮಗಳಲ್ಲಿ ಹಾಗೂ ಸಾಮೂಹಿಕ ಕಾರ್ಯಗಳು ಜರುಗುತ್ತವೆ. ಜರುಗುವಂತಹ ಕಾರ್ಯಕ್ರಮಕ್ಕೆ ನಾಡಗೌಡನಂತಹ ಪ್ರಮುಖ ವ್ಯಕ್ತಿಗಳು ಒಳಗೊಂಡ ಕುಲದ ಮುಖ್ಯಸ್ಥರು ಇರುತ್ತಾರೆ. ಅವರ ಅನುಮತಿಯನ್ನು ಪಡೆಯದೆ ಕೆಲವು ನಿರ್ಧಾರಗಳನ್ನು ತೆಗೆದುಕೊಳ್ಳುವುದಿಲ್ಲ.

ಇರುಳಿಗರು ಸಾಮಾನ್ಯವಾಗಿ ಕಾಡಿನಂಚಿನಲ್ಲಿ ಊರಿಂದ ಊರಿಗೆ ತಮ್ಮ ಗೂಡುಗಳನ್ನು ನಿರ್ಮಿಸಿಕೊಂಡು ತಮ್ಮದೇ ಒಳ ಬದುಕನ್ನು ಹೊರ ಜಗತ್ತಿಗೆ ತೋರಿಕೊಡದಂತೆ ಬದುಕುತ್ತಿದ್ದರು. ಕಾಡಿನ ಪಕ್ಕ ಇವರ ವಾಸಸ್ಥಳವಿರುವ ಕಾರಣ ಆಹಾರದ ಅನ್ವೇಷಣೆ, ಸೌದೆ ಕಡಿದು ಮಾರಾಟ ಮಾಡುವುದು, ಜೇನು ಸಂಗ್ರಹಿಸಿ ಮಾರಾಟ ಮಾಡುವುದು, ಕಾಡಿನ ಪದಾರ್ಥಗಳನ್ನು ಸಂಗ್ರಹಿಸಿ ಮಾರಾಟ ಮಾಡುತ್ತಾ

ಬದುಕುತ್ತಿದ್ದಾರೆ. ಕೆಲವು ವರ್ಷಗಳ ಹಿಂದೆ ಸರಳ ಮನೆಗಳನ್ನು ಇರುಳಿಗರು ರಚಿಸಿಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ನಗರೀಕರಣಕ್ಕೆ ಅನುಗುಣವಾಗಿ ಆಧುನಿಕ ರೀತಿಯಲ್ಲಿ ಮನೆಗಳನ್ನು ನಿರ್ಮಿಸಿ ಕೊಳ್ಳುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿದೆ.ಅದರ ಫೋಟೋ ಪ್ರತಿಯನ್ನು ಕೊನೆಯಲ್ಲಿ ದಾಖಲಿಸಲಾಗಿದೆ.

ವಾಸಸ್ಥಳಕ್ಕೆ ಸಂಬಂಧಿಸಿದಂತೆ ಕೆಲವು ತಾಣಗಳಲ್ಲಿ ಇರುಳಿಗರು ವಾಸಿಸುತ್ತಾರೆ. ರಾಮನಗರ ತಾಲ್ಲೂಕಿನ ಮೆಟ್ಟರೆ ಬಯಲು-ರಾಮನಗರದಿಂದ ೧೦.ಕಿ.ಮೀ ದೂರದಲ್ಲಿರುವ ಇರುಳಿಗರ ಒಂದು ದೊಡ್ಡಿ. ಮೆಟ್ಟರೆ ಬಯಲು ಎಂದರೆ ಮೆಟ್ಟಲು ಇರುವ ಹೆಬ್ಬಂಡೆಗಳ ಬಯಲು ಎಂದು ಸ್ಥಳ ಪುರಾಣಗಳು ಉಲ್ಲೇಖಮಾಡುತ್ತವೆ. ಹೀಗೆ ಕಾಡಿನ ಸುತ್ತ ಮುತ್ತಲಿನ ಪರಿಸರದ ಅಭಿರುಚಿಯನ್ನು ಹೊಂದಿರುವ ಈ ಇರುಳಿಗರು ಬೆಟ್ಟದ ತಪ್ಪಲುಗಳಲ್ಲಿ ವಾಸಿಸಿ ಪ್ರಕೃತಿ ಸೌಂದರ್ಯವನ್ನು ಹೊಂದುವಂತರಾಗಿದ್ದಾರೆ.

ಬುಡಕಟ್ಟು ಸಮುದಾಯದ ಸಂಸ್ಕೃತಿಯ ಮೂಲ ನಿವಾಸಿಗಳಾದ ಇವರು ಜಾತಿಯತೆಯ ಅರಿವಿಲ್ಲದವರು, ಹಾಗೂ ಬುಡಕಟ್ಟು-ಬುಡಕಟ್ಟುಗಳ ನಡುವೆ ವಿಧಿ-ನಿಷೇದಗಳು ಇವೆ. ಇಂದು ಹಿಂದೂ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದರೂ ವರ್ಣ ವ್ಯವಸ್ಥೆಯ ವೃತ್ತದ ಪರಿಧಿಗೆ ಈ ಸಮುದಾಯಗಳು ಸಿಕ್ಕಿ ಹಾಕಿಕೊಂಡಂತಿಲ್ಲ. ಅನ್ಯ ಸಂಸ್ಕೃತಿಯ ಪ್ರಭಾವದಿಂದ ಸಂಸ್ಕೃತಾನುಕರಣಕ್ಕೊಳಪಟ್ಟು ಶೂದ್ರರಂತೆ ಗೋಚರಿಸುತ್ತಿದ್ದರು. ಒಂದು ಕಾಲಕ್ಕೆ ಈ ಯಾವುದೇ ಕಟ್ಟುಪಾಡುಗಳಿಗೆ ಒಳಪಡದೆ ತಮ್ಮದೇ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದ ಕೆಲವು ಕುರುಹುಗಳು ಉಳಿದಿವೆ. ಈಗ ಹಿಂದೂ ದೈವಗಳನ್ನು ಆರಾಧಿಸುತ್ತಿದ್ದರೂ, ಪೂರ್ವದ ದೈವಗಳಾದ ಕಾಡು, ಕಲ್ಲು, ಮರ, ಮತ್ತು ಅವರ ಪೂರ್ವಿಕರ ಆರಾಧನೆ ಅನುಚಾನವಾಗಿ ನಡೆಯುತ್ತಿವೆ.

## ಭಾಷೆ ಮತ್ತು ಜನಪದ ಸಾಹಿತ್ಯ :

ಭಾಷೆ ಸಂಸ್ಕೃತಿಯ ಮುಖ್ಯ ಅಂಗ. ಸಂಸ್ಕೃತಿಗೆ ಸಂಬಂಧಿಸಿದ ಎಲ್ಲಾ ಚಟುಚಟಿಕೆಗಳಿಗೆ ಭಾಷೆ ಬುನಾದಿಯಾಗಿರುತ್ತದೆ. ಭಾಷೆ-ಸಮಾಜ-ಸಂಸ್ಕೃತಿ ಇವು ಪರಸ್ಪರ ಪೂರಕವಾಗಿವೆ. ಭಾಷಾ ಸಮುದಾಯದಲ್ಲಿ ಕತೆ ಗಾದೆ, ಒಗಟು, ವಾಗ್ರೂಢಿ ಹಾಗೂ ಹೆಸರುಗಳ ಮೂಲಕ ಸಮುದಾಯದ ಸಂಸ್ಕೃತಿ ಅಭಿವ್ಯಕ್ತವಾಗುತ್ತದೆ. ಸಮುದಾಯ ಭಾಷಿಕ ಚಟುವಟಿಕೆಗಳು ಸಾಮಾಜಿಕ ಸ್ತರವನ್ನು ಸಮೀಕರಿಸಿಕೊಂಡು ಸಾಂಸ್ಕೃತಿಕ ಸ್ತರದಲ್ಲಿ ವಿರಮಿಸುತ್ತದೆ. ಹೀಗಾಗಿ ಸಾಮಾಜಿಕ ಭಾಷಾಧ್ಯಯನವು ಭಾಷೆ ಮತ್ತು ಸಂಸ್ಕೃತಿ ದೃಷ್ಟಿಯಿಂದ ಸ್ವಾರಸ್ಯಕರವಾದ ಸಂಗತಿಗಳನ್ನು ತಿಳಿಸಿಕೊಡುತ್ತಾರೆ.

ಭಾಷೆ ಸಂಸ್ಕೃತಿಯ ವಾಹಕ. ಒಂದು ಸಂಸ್ಕೃತಿಯ ಶಾಬ್ದಿಕ ಹಾಗೂ ಕ್ರಿಯಾತ್ಮಕ ಬಗೆಗಳನ್ನು ವಿವರಿಸಲು ಅಧ್ಯಯನಕಾರರು ಭಾಷೆಯನ್ನ ಮೊರೆ ಹೋಗಬೇಕಾಗುತ್ತದೆ. ಭಾಷೆಯು ಒಂದು ಸಮುದಾಯದ ಸಂಸ್ಕೃತಿಯ ವಿಶಿಷ್ಟ ಅಂಶಗಳನ್ನು ತನ್ನಲ್ಲಿ ಹುದುಗಿಟ್ಟುಕೊಂಡಿರುತ್ತದೆ. ಭಾಷೆ ಕೇವಲ ಪದಗಳನ್ನಷ್ಟೆ ಒಳಗೊಂಡಿದೆ. ಆ ಪದಗಳ ಹಿಂದೆ ಆ ಭಾಷಾ ಸಮುದಾಯದ ಜನರ ಬದುಕು-ಜೀವನ ಕ್ರಮದ ಅನೇಕ

ಅಂಶಗಳನ್ನೊಳಗೊಂಡಿರುತ್ತದೆ.

ಮಾನವ ತನ್ನ ಭಾವನೆಗಳನ್ನು ಭಾಷೆಯ ಮೂಲಕ ಹಂಚಿಕೊಳ್ಳುತ್ತಾನೆ. ಒಂದು ಸಾಮಾಜಿಕ ಸಂಬಂಧವನ್ನು ನಿಶ್ಚಿತಗೊಳಿಸಿಕೊಳ್ಳಲು ಮಾತು ಬೆಳಸುತ್ತಾನೆ. ಮನಸ್ಸಿನ ವಿವಿಧ ಅವಸ್ಥೆಗಳು, ವ್ಯಕ್ತಿ ವಾಸಿಸುವ ಪ್ರದೇಶ, ವ್ಯಕ್ತಿ ಮಾತನಾಡುವ ಸಂದರ್ಭ, ವ್ಯಕ್ತಿಯ ಎತ್ತರ, ಬಣ್ಣ, ತೂಕ ಮುಂತಾದ ದೈಹಿಕ ವಿವರಗಳು ತಾಳ್ಮೆ, ಕೋಪ ಮುಂತಾದ ಮಾನಸಿಕ ಚಟುಚಟಿಕೆಗಳು ಇವು ಭಾಷೆಯ ಸಾಮಾಜಿಕ ಚಹರೆಗಳೆಂದು ಗುರುತಿಸುತ್ತೇವೆ. ಲಿಂಗ, ವಯಸ್ಸು ಇವುಗಳನ್ನು ಜನಾಂಗದೊಡನೆ ಜೋಡಿಸುವ ಪ್ರವೃತ್ತಿ ಬೆಳೆದಿದೆ. ಈ ಎಲ್ಲ ಅಂಶಗಳು ಒಂದು ಸಮುದಾಯದ ಸ್ವರೂಪವನ್ನು ಗುರುತಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಒಬ್ಬರು ಹೇಳಿದ್ದನ್ನು ಮತ್ತೊಬ್ಬರು ಅರ್ಥಮಾಡಿಕೊಂಡ ಕೇಳುವ ಪ್ರತಿಕ್ರಿಯಿಂದ ಪ್ರತಿಕ್ರಿಯೆ ವ್ಯಕ್ತ ಪಡಿಸಲು ಇರುವ ಮಾಧ್ಯಮಗಳಲ್ಲಿ ಭಾಷೆ ಒಂದು. ಯಾವುದೇ ಜನಾಂಗ ಆಡುವ ಭಾಷೆ ಅವರವರ ಪರಿಸರದ್ದು, ಬದುಕಿನದ್ದು. ಮನುಷ್ಯ ಯಾವಾಗ ಭಾಷೆಯನ್ನು ಕಲಿತನೋ ಅಂದಿನಿಂದ ಅವನೊಂದಿಗೆ ಸಾಹಿತ್ಯವು ಜನ್ಮ ತಾಳಿತು ಎಂದರೆ ತಪ್ಪಾಗಲಾರದು. ಕಾಡು ಮೇಡುಗಳಲ್ಲಿ ವಾಸ ಮಾಡುವಂತಹ ಇರುಳಿಗರಲ್ಲಿ ಅವರದೇ ಆದಂತಹ ನಿರ್ದಿಷ್ಟ ಭಾಷೆಯಿರುವುದಿಲ್ಲ. ಕನ್ನಡ ಮಿಶ್ರಿತ ತಮಿಳು ಭಾಷೆಯನ್ನು ಆಡುತ್ತಾರೆ. ಇರುಳಿಗರು ಕನ್ನಡವನ್ನೆ ಸದ್ಯಕ್ಕೆ ತಮ್ಮ ಭಾಷೆಯನ್ನಾಗಿ ಬಳಸುತ್ತಿರುವುದು ಕಂಡು ಬರುತ್ತದೆ. ಆದ ಕಾರಣ ಅವರಿಂದ ಸಂಗ್ರಹಿತವಾದ ಯಾವುದೇ ಜನಪದ ಸಾಹಿತ್ಯ ಪ್ರಕಾರವೂ ಅನ್ಯಭಾಷೆಯಲ್ಲಿರದೇ, ಅಚ್ಚ ಕನ್ನಡದಲ್ಲಿಯೇ ಲಭ್ಯವಿದೆ. ಅದನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಡಾ. ಕೆ.ಕೆಂಪೇಗೌಡರ ಭಾಷಿಕ ಮಾತುಗಳು ಉಲ್ಲೇಖರ್ಹವಾಗಿದೆ. ಏಕೆಂದರೆ ಇರುಳಿಗರ ಉಪಭಾಷೆಯ ಅಧ್ಯಯನ ಮಾಡಿರುವ ಇವರ ನಿಬಂಧದಲ್ಲಿ ಈ ಕೆಳಕಂಡಂತೆ ಉಲ್ಲೇಖವಾಗಿದೆ.

The illigas or Iruligas found in Karnataka say that their ancestors were the native of Niligiri Hills. However, the author of this paper has made a descriptive study of the Language of illigas of Karnataka. He has also attempted to account the Socio Economic life of this people. He has listed a number of interesting features regarding the Phonology and grammer of Irula Language. Irula language lexically resembles more Kannada than Tamil. Grammatically, it resembles Tamil. He has accounted all the phonological and morphological features in detail in his doctoral dissertation.೨೭

ಉತ್ತರ ಆರ್ಕಟ್ ಮತ್ತು ದಕ್ಷಿಣ ಆರ್ಕಟ್ ಕಡೆಯಿಂದ ಬಂದವರು. ಇರುಳಿಗರು ಧರ್ಮಪುರಿಯಲ್ಲಿ ನೆಲೆಗೊಂಡು ವ್ಯಾಪಕವಾಗಿ ಹರಡಿದ್ದ ಕನ್ನಡ ಭಾಷೆಯನ್ನು ಕಲಿತರು. ಆದಾದ ನಂತರ ಮುಂದುವರೆದ ಇವರ ಪೀಳಿಗೆ ಕನ್ನಡ ಭಾಷೆಯನ್ನು ಕಲಿತಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಏಕೆಂದರೆ ಸುಮಾರು ೩೦೦-೩೫೦ ವರ್ಷಗಳ

ಹಿಂದೆ ಧರ್ಮಪುರಿ ಜಿಲ್ಲೆಗೆ ಆನೇಕಲ್ ಮತ್ತು ಕನಕಪುರ ಪ್ರದೇಶಗಳು ಒಳಪಟ್ಟಿತು. ಹೀಗೆ ಬಂದವರು ರಾಮನಗರ ಮಾಗಡಿ ತಾಲ್ಲೂಕುಗಳಲ್ಲಿ ಹರಡಿಕೊಂಡಿರುವ ಸಾಧ್ಯತೆಯನ್ನು ಈ ಮೇಲಿನ ಭಾಷಿಕ ಅಂಶಗಳು ಪುಷ್ಟೀಕರಿಸುತ್ತವೆ.

ಅವರಾಡುವ ಭಾಷೆಯು ತಮಿಳು ಭಾಷೆಗೆ ತೀರ ಸಂವಾದಿಯಾಗಿಯೆಂದು ಹೇಳಬಹುದು. ಅವರಾಡುವ ಭಾಷೆಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿ ಕೆಲವು ಉದಾಹರಣೆಗಳನ್ನು ಅಧ್ಯಯನದ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ.

ಇರುಳಿಗರು ಮಾತನಾಡುವ ಸಂದರ್ಭದಲ್ಲಿ ಅವರು ಬಳಸುವ ಪದಗಳು ಈ ಕೆಳಕಂಡಂತಿವೆ.

* ಎಂತ್ಕೋದಿದ್ದು ನಿನ್ನೋಡದಾ (ನಿನ್ನ ಗಂಡ ಎಲ್ಲೋದ್ಯಾನ)
* ಕಾಫಿ ಪುಟ್ಗೋಪೆ ಅಲ್ಲಾರು (ಎಲ್ಲರಿಗೂ ಕಾಫಿ ಮಾಡಿ ಕೊಡು)

ಈ ರೀತಿಯ ವಾಕ್ಯಗಳ ಬಳಕೆಯನ್ನು ಗಮನಿಸಿದಾಗ ಇರುಳಿಗರ ಬಗ್ಗೆ ಭಾಷಾ ವಿಜ್ಞಾನಿಗಳು ಅಧ್ಯಯನ ಮಾಡುವುದಕ್ಕೆ ಹೆಚ್ಚಿನ ಆಕರಗಳನ್ನು ಒದಗಿಸುತ್ತದೆ.

ನಮ್ಮ ನಿತ್ಯ ಜೀವನದಲ್ಲಿ ಅನುಭವಗಳನ್ನು ಮೀರಿದ ಸಂಗತಿಗಳನ್ನು ಮತ್ತು ಆಧ್ಯಾತ್ಮಿಕ ಅಭಿವ್ಯಕ್ತಿಯನ್ನು ವ್ಯಕ್ತಪಡಿಸುವಾಗ ಸಾಮಾನ್ಯವಾಗಿದ್ದ ಭಾಷೆ ಸಾಹಿತ್ಯವನ್ನು ಪ್ರವೇಶಿಸಿತು. ಮನುಷ್ಯನ ಆಂತರಿಕ ಜೀವನಕ್ಕೆ ಸಂಬಂಧಿಸಿದ ಸಾಹಿತ್ಯವು ಅವನು ಬೆಳೆದಂತೆಲ್ಲಾ ವಿಸ್ತೃತಗೊಳ್ಳುತ್ತಾ ಬಂದಿತು. ಅನುಭವದ ಪ್ರಮಾಣವು ಹೆಚ್ಚಾದಂತೆಲ್ಲಾ ಸಾಹಿತ್ಯದ ಪ್ರಮಾಣವು ಹೆಚ್ಚಾಗುತ್ತಾ ಬಂದಿತು. ಹೀಗೆ ಬುಡಕಟ್ಟು ಸಮುದಾಯದ ಕಾಲದಿಂದಲೂ ಬೆಳೆಸಿಕೊಂಡ ಸಾಹಿತ್ಯವನ್ನು ಜನಗಳ ಸಾಹಿತ್ಯವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಜನಪದ ಸಾಹಿತ್ಯವು ಜನರ ಪ್ರತಿಬಿಂಬವನ್ನು ಆಯಾ ಜನ ಸಮುದಾಯದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಬುಡಕಟ್ಟುಗಳ ಕಲೆ ಸಾಹಿತ್ಯ ಮತ್ತು ಕರುಳಬಳ್ಳಿಯ ಸಂಬಂಧವನ್ನು ಹೊಂದಿವೆ. ಈ ಸಮುದಾಯಗಳನ್ನು ಮಾತನಾಡಿಸಿದರೆ ಸಾಕು ಅವರ ಧ್ವನಿಯಲ್ಲಿ ಮಹಾಕಾವ್ಯಗಳೇ ಸೃಷ್ಟಿಯಾಗುತ್ತವೆ.

ಬುಡಕಟ್ಟು ಸಮುದಾಯವೊಂದರ ಅಧ್ಯಯನದಲ್ಲಿ ಅದರಲ್ಲಿ ಸಿಗಬಹುದಾದ ಸಾಹಿತ್ಯದ ಬಗೆ ಗಮನ ಕೊಡುವುದು ಅತ್ಯಗತ್ಯ. ಈ ಮೊದಲೇ ಪ್ರಸ್ತಾಪಿಸಿದಂತೆ ಅವರ ಸಾಮಾಜಿಕ ಅಭಿವ್ಯಕ್ತಿಯಲ್ಲಿ ಅವರ ಸಾಹಿತ್ಯ ಸೃಷ್ಟಿಯಾಗುತ್ತದೆ. ಬುಡಕಟ್ಟು ಸಮುದಾಯಗಳು, ನಿಸರ್ಗ ಕ್ರಿಯೆಯಲ್ಲಿ, ತಮ್ಮನ್ನು ತೊಡಗಿಸಿಕೊಂಡಿದ್ದರಿಂದ, ನಿಸರ್ಗ ಶಕ್ತಿಯ ಮೇಲೆ ಅಪಾರ ನಂಬಿಕೆಯನ್ನು ಬೆಳೆಸಿಕೊಂಡಿದ್ದರು. ಅವುಗಳನ್ನು ಆರಾಧಿಸುವ ಮನೋಭಾವನೆ ಅವರಲ್ಲಿ ಬೇರೂರಿತು. ದುಷ್ಟಶಕ್ತಿಗಳು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಮಾರಿ, ಮಸಣಿ, ದೈವ, ದೇವರನ್ನು ಕಲ್ಪಿಸಿಕೊಂಡು ಪೂಜಿಸುವ ಪ್ರಕ್ರಿಯೆ ಬೆಳೆಸಿಕೊಂಡಿದ್ದರಿಂದ ಬದುಕಿನ ಅವಿಭಾಜ್ಯ ಅಂಗವಾಗಿ ಮುಂದುವರೆಸುವ ಪ್ರಯತ್ನವನ್ನು ಮಾಡಿದ್ದಾರೆ.

ಸಾಹಿತ್ಯ ಸೃಷ್ಟಿಯಲ್ಲಿ ಇರುಳಿಗರ ಪಾತ್ರವು ಮುಖ್ಯವಾಗುತ್ತದೆ. ಆದುದರಿಂದ ಎಲ್ಲಾ ಪ್ರಕಾರ ಸಾಹಿತ್ಯವು ಲಭ್ಯವಾದರೂ ಅದರಲ್ಲಿ ಕೆಲವೊಂದು ವಿಚಾರಗಳು ಸೂಕ್ಷ್ಮವಾಗಿ

ವಿಶ್ಲೇಷಿಸುವ ಪ್ರಯತ್ನ ನಮ್ಮದಾಗಿದೆ.

**ಇರುಳಿಗರ ಜನಪದ ಕತೆಗಳು :**

ಜನಪದ ಕತೆ ಒಂದು ಕಲೆ ಅದ್ಭುತ ರಂಜಕತೆಯೇ ಅದರ ವಿಶಿಷ್ಟತೆ. ಗ್ರಾಮ್ಯತೆ ಅದರ ಸೊಗಸು, ನಾಟಕೀಯತೆ ಅದರ ಉಸಿರು. ಪ್ರಮುಖ ಘಟನೆಗಳು ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ರೂಪಿತವಾಗಿವೆ. ಮಾನವೀಯ ಭಾವನೆಗಳಿಂದ ಸಿದ್ಧಿಸಿರುತ್ತವೆ, ಎಂಬ ಮಾತುಗಳು ಜನಪದ ಕತೆಗಳನ್ನು ಕುರಿತ ವಾಸ್ತವ ಚಿತ್ರಣವನ್ನು ಪ್ರತಿಂಬಿಸುತ್ತವೆ.೨೮

ಪ್ರಮುಖವಾಗಿ ಸಾಮಾಜಿಕ ಕಳಕಳಿ ನೀತಿ-ನಿಯಮ, ಮನರಂಜನೆಯ ಸೊಬಗು ಅದ್ಭುತ ಘಟನೆಗಳನ್ನು ಹರಡಿಕೊಂಡಿರುತ್ತದೆ. ಅಂತಹ ಕೆಲವೊಂದು ಕತೆಗಳು ಈ ಕೆಳಕಂಡಂತೆ ಇರುತ್ತವೆ.

ಇರುಳಿಗರ ಬದುಕಿನ ವಿವರಗಳನ್ನು ಅವರ ಸಾಮಾಜಿಕ ಸ್ಥಾನಮಾನಗಳನ್ನು ಈ ಕತೆಯಲ್ಲಿ ಕಾಣಬಹುದು.

"ಊರ್‍ನ ಮುಖ್ಯಸ್ಥ, ಪಂಚಾಯ್ತ್ ಮುಗಸ್‌ಕೊಂಡ್ ಬರುವಾಗ "ಏಯ್ ಅವ್ನು ಯಾರೋ? "ಊರ್‍ಗೆಲ್ಲಾ ನ್ಯಾಯ ಹೇಳಕೊಯ್ತೊನೆ 'ಗೊಡ್ ಯಜಮಾನ' ಅನ್ತ ಅಂದಗಾಯ್ತು ಅದನ್ ಕೇಳಸ್ಕಂಡ ವ್ಯಾಕುಲಚಿತಾನಾಗಿ ಮನ್ಗ ಬಂದ್ ಮಂಚ್ಕ ಮುಖಮಾಡಿ ಮಲ್ಕ್ತಾನೆ, ಯೆದ್ತಿ ಊಟಕ್ಕೆ ಯೆಬ್ಬ್‌ಸ್‌ಕೆ ಅನ್ತ ವೋದಾಗ ಹಿಂಗ ನನ್ ಮಕ್ಕಳಲ್ಲದ್. ವೋದವ ಅನ್ತ ಲೇವಡಿ ಮಾಡತ್ರಾ ನಮ್ಮಂತ ಜಲ್ಮ ಇರ್‌ಬಾರ್‍ದು ಅಂತ ತಿಳಾಸ್ತನೆ. ಆಗೆ ಹೆಂಡತಿ ನೀರ್‍ಗ್ ವೊದಾಗ, ಜೋತ್‌ಗಾತಿಯರ್ ಆಡ್ಕೊಳದ ತಿಳಿಸಿದಳು ಕೊನ್ಗೆ, ವೂರ್ ಬುಡ್‌ಬೇಕ್ ಅನ್ತ ತೀರ್ಮಾನ ಮಾಡ್ಕೊತ್ತಾರೆ. ಹಿಂಗೇ ವೂರೀಂದ್ ಆಚ್ಗೆ, ವೊಗಿ, ಸೊಪ್ಪನ್‌ಗೂಡ್ಲ ಹಾಕೋತ್ತಾರೆ. ಆಗ ಬಿಮ್‍ನ್ಸೆ ಆಗ್ತಾಳೆ. ದಿನ ತುಂಬಿ ಹೆರ್‍ಗೆ ಆಯ್ತದೆ. ಗಂಡ ಹೊರ್‍ಗ ಮಲಗಿರುತ್ತಾನೆ, ಮಗು ಒಳ್‌ಗಿರುತ್ತೆ ರಾತ್ರಿ ವೊತ್,ಯಾರೋ ಇವ್ನ ದಾಟ್‌ಕೊಂಡ್ ವೊದಂಗಾಯ್ತು, ಬಳಗಳ ಸದ್ದ್ ಆದಂಗಾಯ್ತು ಅವಳ್ ಹಾದ್‌ಗುಂಟ ವೋಗ್ತಾನೆ ಹಿರಿಯವಳ್ ಆ ಮಗ್ಗನೂ ಹಣೆ ಬರಹ ಬರಿತ್ತಾಳೆ, ಮಗಾ ವುಟ್ಟಿ ಬೆಳದ್, ಮೆಜರಿಟಿಗೆ ಬಂದ್ ಇಸ್ಕೊಲ್‌ಗೋಗಿ, ಪಾಸಾಗಿ ಕತ್ ಬಳಸಿ ಮುಸ್ಕ್‌ಆಕುದ್ರೆ ತಾಯಿ ತೀರೋಯ್ತಾಳೆ. ಬುಟ್ ಮಂಡೆ ಒದರಿ, ಕಟ್ಟುದ್ರೆ ತಂದೆ ತೀರೋಗ್ಲಿ, ಅನ್ತ, ಅವಳ್ಯಾಲೆ ಸುತ್ ಏಳ್‌ಅಳ್ಳಿ ಕಾಡ್ನೆಲ್ಲಾ ಸೇರ್‍ಕಂಡು ಕೊತ್ತಿಗೆಡ್ಡ, ತಿಂದಿ, ಆರ್‌ಕೆರೆ ನೀರ್‌ಕುಡ್ಡ, ಆರ್‌ವರ್ಷ,ವನವಾಸ, ಮಾಡ್‌ಬೇಕ್. ಕೊನೆ ಪಕ್ಷದಲ್ಲಿ ಈ ತಂದೆ ಕೈಲಿ ಸಿಕ್ಕಿ ಆತ ಏಳಂತಸ್ತಿನ್ ಮಾಡಿ ಕಟ್ಸಿ ನಿನ್ನಿರಿಸುದ್ರೆ ಅಲ್ಲಿಗೆ ಸುಂಟರ್ ಗಾಳಿ ಬಂದ್, ಮಾಡಿ ಮನೆ ಮುರ್‍ದು ತಗೇಂಡ್ ವೊಗಬೇಕ್. ಏಳ್ ವರ್ಷದಿಂದ, ಸತ್ ಗೋರಿಗೋದೊರೋ, ಆ ಯಣಾನಾ ಪೂಜೆ ಮಾಡಿ, ಕಾದ್ನೀರ್ ಕಾದಿ, ಅಡ್ಗೆ ಮಾಡಿ, ವೂಟ ಮಾಡ್ಕ್'ಂಡು, ತಲ್‌ದೆಸೆಲಿರೋ ಪುಸ್ತಕಾನ ನೀನ್ ವೊದಿ ಆ ಯಣಾನಾ ಜೊತ್ಗೆ ಲಗ್ನ ಆಗ್‌ಬೇಕ್. ಮತ್ತೇಲ್ಲೂ ನಿನ್ ಲಗ್ನ ಆಗೋದಿಲ್ಲಂದ್ ಬುಟ್ಟ್, ಬರ್‍ದ್ ಹಿಂದಿರುಗುವಾಗ ಹಿರಿಯಮ್ಮ ಹಿಂದಕ್ಕೆ ವೊಗಬೇಕಿದ್ರೆ, ಸೆರ್‍ಗ ಹಿಡ್ಕಂಡ್ ಯಾರ್ ನೀನ್ ಅನ್ತ ಕೇಳ್ತಾನೆ ನಾನ್ ಹಿರಿಯಮ್ಮ ಮಗುವಿನ ಹಣೆ ಬರಹ ಬರಯವಳು, ಅನ್ದಾಗ ಏನ್ ಬರ್‍ದೆ ಅನ್ತ ಪೀಡ್‌ಸ್ದಾಗ ಅದ್ನೆಲ್ಲಾಹೆಳ್‌ಬುಟ್ ವೊಂಟೇಯ್ತಾಳೆ"...

ಹಿಂಗೆ...ಹುಡ್ಗಿ ಚಿಕ್ಕದೂ, ದೊಡ್ಡದಾಗಿ ಈಸ್ಕೂಲ್‌ವೋಗಿ ಚೆನ್ನಾಗಿ ವೋದಿರ್ತಾಳೆ, ಅವ್ರ ಸಂಗಡಾರು ಇವಳ್ನ ಬಯ್ತಾರೆ. ನೀನ್ ಚೆನ್ನಾಗಿ ವೊದಾದಿರಿಂದ, ಮೇಷ್ಟ್ರ ನಮ್ಗೆಲ್ಲಾ ಬಯಯ್ತಾರೆ, ಇಷ್ಟ್ ಉದ್ದ ಬೆಳೆದಿದಿಯಾ ಲಂಗ ಜಾಕೆಟ್ ಹಾಕಂಡ್ ಬತ್ತಿಯಲ್ಲಾ, ಸೀರೆ ಉಟ್ಕಂಡ್ ಬರ್ಕ ಏನ್ ಆಗಿದ್ದ್ ನಿಂಗ್? ರೋಗ ಅನ್ತ ಆಡಕೊಳ್ತಾರೆ. ಇದ್ರುಂದ ಈಸ್ಕೂಲ್‌ಗೆ ವೋಗಲ್ಲಾ ಅನ್ತ ಅಟ ಮಾಡ್ತಾಳೆ. ಮುಂದ್ನ ಗೌರಿ ಹಬ್ಬಕ್ಕೆ, ನಿಮ್ಮ ಅಪ್ಪನಗ್ ಹೇಳಿ ಅದ್ನ ತರಸ್‌ಕೊಡ್ತಿನಿ. ಈಗ ಈಸ್ಕೂಲ್ ವೋಗು ಅದರಂತೆ,ಆಮೇಲೆ ತಕ್ಕೊಡ್ತಾರೆ ಸೀರ ವುಟ್ಗಂಡ್ ಸೆರ್ಗನ್ ಕತ್ ಬಳಸತ್ತ ಇದ್ಗಂಗೆ ತಾಯಿ ಸತ್ ವೋಯ್ತಾಳೆ. ಎಲ್ಲಾ ಆದ ಮೇಲೆ ಮಗ್ಗಳ್ನ ಪುನಃ ಈಸ್ಕೂಲ್‌ಗೆ ಕಳ್‌ಸ್ತಾಳೆ ಮಹಡೀ ಮೇಲೆ ಮಹಡಿ ಕಟ್ತಾನೆ, ಅವಳ್ನ ಸುಂಟರ್‌ಗಾಳಿ ಎತ್ಗಂಡ್ ವೊಯ್ತದೆ, ಆರ್ ವರ್ಷದ ಮೆಲೆ ಮಗಳ್ ಸಿಗತ್ತಾಳೆ. ಅತ್ತಾ ಮಗಳ್ ಜೊತೆಗೆ ಬರ್ತಾ ಇರ್ ಬೇಕಾದ್ರೆ, ದೊರೆ ಗೋರಿ ಇರುತ್ತೆ. ಅದ್ರ ಮೇಲೆ ಒಂದ್ ಅಕ್ಷರ ಬರಿದಿರತ್ತೆ ಯಾರಾದ್ರೂ ಒಬ್ ತಾಯ್ಗ ವೊಬಳೆ ಮಗಳ್ ಇರೋವಳೋ ಅವಳ್ ಬಂದ್ ಬಾಗ್ಲ್‌ಗೆ ಕೈಹಾಕದ್ರ ತೆಗಿತ್ತದೆ. ಅನ್ತ ಬರ್‌ದಿರುತ್ತೆ ಬಾಗಲ್ ತೆರ್ಕಂಡ್ ಅವಳ್ನ ಒಳಕ್ಕೆ ಸೇರಸ್ಕಳಂತ್ತದೆ ಆಗ ಅತ್ತಾ ಅಪ್ಪಾ ಕೂಗಕಂಡ್ಲಾ ಮಗಳ್ಗೆ ಗೋರಿಮ್ಯಾಲೆ ವೊಂದ್ಪುಸ್ತಕ ಅದ. ಅದ ವೊದ್ಕಂಡು, ಅರಸಿನಾ ಕುಂಕುಮಗಳಿಂದ, ಪ್ರತಿದಿನ ಗೋರಿ ಪೂಜೆ ಮಾಡ್ ಇಲ್ಲೆ ಇರ್ತೀನಿ ಅನ್ತಾ ಹೇಳ್ತಾನೆ. ಅಪ್ಪ ಹೇಳದಂಗೆ ಪುಸ್ತಕ ವೊದಂಕಂಡ್ ಕೈ ಮಡ್ಗತ್ತಾಳೆ, ಬಾಗಲ್ ತೆರಿತ್ತದೆ, ಹೊರ್ಕ ಬಂದ್ರೆ ಅಪ್ಪ ಇಲ್ಲ ಪೈಲ್‌ವಾನ್ ಒಬ್ಬ ಹಸು ಇಡ್ಕಾಂಡ ಇರ್ತಾನೆ, ಅದನ್ನು ಕೊಂಡ್‌ಕೊತ್ತಾನ. ಬುಟ್ ಮಂಡೆ ಕಟ್ಟಲ್ಲು ಕೂಡಲೇ ಅವ್ರಪ್ಪ ಸತ್ತೋಯ್ತಾನೆ, ಅವ್ರಪ್ಪನ ಮಣ್ಣಾ ಆಮ್ಯಾಲೆ ಮಾಡನ ಅನ್ತ ವೋಗಿ, ಪೂಜಾ ಸಾಮಾನ್ ತರಕ್ಕೆ ವೊಳಕ್ಕೆ ವೊಗ್ತಾಳೆ ಬರೋಷ್ಟರಲ್ಲಿ ಪೈಲ್ವಾನ್, ಅವಳ ಮಗಳು, ರಾಜ್‌ಕುಮಾರ್‌ನ ಜೊತೆ ಇರ್ತಾಳೆ, ಇಲ್ಲಿ ಈ ಹುಡುಗಿ ನತದೃಷ್ಟೆಯಾಗಿ ಕೊನ್ಗೆ ಈ ಹುಡ್ಗಿ ಹಸು ಮೇಸ್ಕಂಡು, ಇರುತ್ತದೆ ಒಂದ್ ಸಾರಿ ದೊರೆ ಸಂತ್‌ಗೆ ವೊಯ್ತಾ ಇರ್ತಾನೆ ಪೈಲ್ವಾನ್‌ಗೆ, ಮಗಳಿಗೆ ಏನ್ ತರ್ಲಿ ಅಂದರೆ,ಸೀರೆ ಕುಬ್ಸ, ಬಳೆ ತಗೊಂಡುಬಾ ಅನ್ತ ಹೇಳ್ತಾಳೆ. ಯಜಮಾನನ ಹಸು ಮೇಸ್ಕಂಡು ಇರುವ ಈ ವುಡ್ಗಿ ಕೇಳಿದಾಗ ಮಾತಾಡಾ ಗಿಳಿ ತಕ್ಕಂಡ್ ಬಾ ಅನ್ತಾಳೆ, ಹೀಗೆ ದೊರೆ ತಂದ್ ಕೊಡ್ತಾನೆ ಅದ್ನ ತಕ್ಕಂಡ್ ಹಸು ಮೆಯಸ್ಕೆ, ವೊದಾಗೆಲ್ಲಾ ಮಾತಾಡದ ಗಿಳಿ ಜತೆ ಮಾತ್ ಆಡ್ತಾ ಇರ್ತಾಳೆ. ಆಗ ಹಿಂದ್ ನೆಡ್ದ್‌ನೆಲ್ಲಾ ಹೇಳ್ತಾಳೆ, "ಇನ್ ಯಾಕ್ ಬದಕೀರ್ ಬೇಕು?" ಅನ್ತೇಳಿ. ನೇಣ ಹಾಕ್‌ಳೋಕೆ ವೋಯ್ತಾಳೆ ಅಷ್ಟರಲ್ಲಿ ದೊರೆ ಹಿಂದ್‌ಗಡೆ ಕೇಳಸ್ಕಂಡ್ ಅವಳ್ನ ಬದ್ಕ್‌ಸ್ತಾನೆ. ದೊರೆನ್ನೂ, ಈ ಹುಡ್ಗಿನೂ ಸುಖವಾಗಿರ್ತಾಳೆ ಪೆಲ್ವಾನ್ ಮತ್ತು ಅವನ ಮಗಳನ್ನ ಗಡಿಪಾರ್ ಮಾಡ್ತಾರೆ. ೨೯

ಇರುಳಿಗರ ಜನಪದ ಕತೆಗಳಲ್ಲಿ ಬರುವ ಸನ್ನಿವೇಶ, ವರ್ಣನೆಗಳು, ಅನುಭವಗಳು, ಕತೆಗಾರನ ಸಾಂಸ್ಕೃತಿಕ ಸಂದರ್ಭದ ಕೊಡುಗೆಗಳೆನ್ನಬಹುದು. ಕತೆಗಳಲ್ಲಿ ಬರುವ ಹಲವಾರು ಸಂಗತಿಗಳು ಅಸಂಗತವಾಗಿ ಕಂಡುಬರುತ್ತವೆ. ವ್ಯಕ್ತಿಯಲ್ಲಿ ಹುದುಗಿರುವ ಆಸೆ-ಆಕಾಂಕ್ಷೆಗಳು ಹಾಗೂ ಅದುಮಿಟ್ಟ ಭಾವನೆಗಳು ಅಭಿವ್ಯಕ್ತಗೊಳ್ಳುತ್ತವೆ. ಅವರ ಸಾಮಾಜಿಕ ಚೌಕಟ್ಟಿನ ನಂಬಿಕೆಗಳು ಸಂಪ್ರದಾಯಗಳು, ಆಚರಣೆಗಳು ಸಾಂಸ್ಕೃತಿಕ ದಾಖಲೆಗಳಾಗಿವೆ.

ಜನ ಸಮುದಾಯವೊಂದರ ಜೀವನ ವಿಧಾನವೇ ಸಂಸ್ಕೃತಿ. ನಿರ್ದಿಷ್ಟ ಜನ

ಸಮೂಹದ ಕೃಷಿ, ಬೇಟೆ, ಕರಕುಶಲ ಕಲೆಗಳು, ಆಸ್ತಿ ರವಾನೆ, ಬಂಧುತ್ವ, ವಿವಾಹ ಮತ್ತು ಕುಟುಂಬಗಳಂತಹ ಸಾಮಾಜಿಕ ಸಂಸ್ಥೆಗಳು, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆ, ಧರ್ಮ, ಭಾಷೆ, ಸಾಹಿತ್ಯ, ಆಚಾರ-ವಿಚಾರಗಳು, ನಂಬಿಕೆ ಸಂಪ್ರದಾಯಗಳು ಇತ್ಯಾದಿಗಳೆಲ್ಲವೂ ಸಂಸ್ಕೃತಿಯ ಅನಂತ ಮುಖಗಳು, ಸಂಸ್ಕೃತಿಯಲ್ಲಿ, ದೈವಾರಾಧನೆ, ಹಬ್ಬ ಹರಿದಿನಗಳು, ಜಾತ್ರೆ ಉತ್ಸವಾದಿಗಳು, ಮದುವೆ, ಕಸುಬು, ಪುರಾಣ ಐತಿಹ್ಯಗಳಿಗೆ ಸೇರಿದ ವಿಶಿಷ್ಟ ಆಚರಣೆಗಳು ಮುಖ್ಯವಾಗಿವೆ. ಇವು ಸಮಾಜದ ಒಟ್ಟು ಸಂಸ್ಕೃತಿಯನ್ನು ನಿರ್ಧರಿಸುತ್ತವೆ.

ಭಾರತೀಯ ಸಂಸ್ಕೃತಿಯು ವ್ಯಾಪಕವಾಗಿ ಕಣ್ಮರೆಯಾಗುತ್ತಿವೆ. ಸಂಸ್ಕೃತಿ ಎಂದರೆ ಕೇವಲ ಮತಧರ್ಮಗಳ ಆಚರಣೆ ಮಾತ್ರ ಎಂಬ ಸೀಮಿತಾರ್ಥದಲ್ಲಿ ಬಳಕೆಯಾಗುತ್ತಾ ಬಂದಿದೆ. "ಒಂದು ಮತಧರ್ಮದ ಚೌಕಟ್ಟಿನಲ್ಲಿ ನರಳುವ ಆಚರಣೆ, ನೀತಿ-ನಿಯಮಗಳು, ಸಂಸ್ಕೃತಿ ಎಂಬ ಹೆಸರಿನಲ್ಲಿ ಬಳಕೆಯಾಗಿರುತ್ತದೆ. ಈ ದೇಶದ ಸಂಸ್ಕೃತಿ, ಧರ್ಮದಪರವಾಗಿ, ರಾಜರಪರವಾಗಿ ಕೆಲಸ ನಿರ್ವಹಿಸಿದೆ. ಒಬ್ಬ ರಾಜನಿಂದ, ಒಂದು ಮತದಿಂದ, ಅಂದಿನ ಜನ ಸಮುದಾಯದಗಳ ಜೀವನ ವಿಧಾನ ನಿರ್ಧರಿತವಾಗಿದೆ. ಜನ ಸಮುದಾಯ ತಮ್ಮ ಜೀವನ ವಿಧಾನಗಳನ್ನು ತಾವೇ ರೂಪಿಸಿಕೊಳ್ಳಲು ಅವಕಾಶವಿಲ್ಲದಾಗ, ರಾಜಪ್ರಭುತ್ವ, ಧರ್ಮಪ್ರಭುತ್ವಗಳ ತುಳಿತಕ್ಕೆ ಸಿಕ್ಕಿ ಈ ದೇಶದ ಜನತೆಯ ಬದುಕೆಲ್ಲ ರಾಜ-ಧರ್ಮಗಳ ಚೌಕಟ್ಟಿನಲ್ಲಿ ನರಳುತ್ತಿವೆ". ೩೦

ಸಂಸ್ಕೃತಿ ಎಂದರೆ ಕೇವಲ ಸನಾತನ ಆಚರಣೆಗಳಲ್ಲ, ಬಹುಮುಖ ಧಾರೆಯ ಚಲನಶೀಲ ಅಭಿವ್ಯಕ್ತಿಯಾಗಿ. ಈ ದಿಸೆಯಲ್ಲಿ ನೆಲದ ಸಂಸ್ಕೃತಿಯ ನೈಜ ಸಮರ್ಥನೆಯ, ಸೂತ್ರ ಸೃಷ್ಟಿಯಾದದ್ದೇ, ಜನಪದ ಸಾಹಿತ್ಯದಲ್ಲಿ ಎನ್ನಬಹುದು.

ಜನಪದ ಸಂಸ್ಕೃತಿಯ ಪರಿಪೂರ್ಣ ಸ್ವರೂಪವನ್ನು ಅರಿಯ ಬೇಕಾದರೆ ಸಮಷ್ಠಿ ಮನಸ್ಸಿನ ನೇರ ಅಭಿವ್ಯಕ್ತಿಯ ಜನಪದ ಸಾಹಿತ್ಯಕ್ಕೆ ಬರಬೇಕು. ಜನಪದ ಧರ್ಮದ ಎಳೆ-ಎಳೆಗಳನ್ನು, ಸಂಸ್ಕೃತಿಯ ರೂಪುರೇಷೆಗಳನ್ನು ಅಲ್ಲಲ್ಲಿ ಕಾಣುತ್ತೇವೆ. ವಿಫಲವೂ, ವೈವಿಧ್ಯಮಯವು ಆದ ಈ ಸಾಹಿತ್ಯ ಹಾಡು, ಲಾವಣಿ, ಗೀತೆ, ಗಾದೆ, ಒಗಟು, ಬಯಲಾಟ, ಯಕ್ಷಗಾನ ಮೊದಲಾಗಿ ಹಲವು ಸಾಹಿತ್ಯಿಕ ಹಾದಿಗಳಿಂದ ಜನತೆಯ ಅಚ್ಚ ಸಂಸ್ಕೃತಿಯ ಸ್ವರೂಪವನ್ನು ಅಭಿವ್ಯಕ್ತಗೊಳಿಸುತ್ತದೆ.

ಇರುಳಿಗರಲ್ಲಿ ಪ್ರಮುಖವಾಗಿ ಅನೇಕ ಜನಪದ ಸಾಹಿತ್ಯ ಪ್ರಕಾರಗಳು ಕಂಡು ಬರುತ್ತವೆ. ಅಧ್ಯಯನದ ದೃಷ್ಟಿಯಿಂದ ಕೆಲವೊಂದು ಸಾಹಿತ್ಯ ಪ್ರಕಾರಗಳನ್ನು ವಿಶ್ಲೇಷಿಸಲಾಗಿದೆ.

ಇರುಳಿಗರ ಜನಪದಗೀತೆಗಳಲ್ಲಿ ಹೆಚ್ಚು ವ್ಯಾಪಕತೆಯನ್ನು ಪಡೆಯುವ ಗೀತಾ ಪ್ರಕಾರವೆಂದರೆ ದೇವರ ಪದಗಳು, ಅದರಲ್ಲೂ ಮಲೈಯ ಮಹದೇಶ್ವರ ಕುರಿತಂತೆ ಸ್ತುತಿ ಗೀತೆಗಳು, ವರ್ಣನೆಗಳು, ಮಹದೇಶ್ವರನ ಪವಾಡವನ್ನು ಬಿಂಬಿಸುವ ಗೀತೆಗಳು ಹೆಚ್ಚು ದೊರೆಯುತ್ತವೆ. ನಂತರದ ಸ್ಥಾನ ಮಾರಮ್ಮನನ್ನು ಕುರಿತಂತೆ ದೊರೆಯುವ ಹಾಡುಗಳದು ಬಾಣಾಂತಿ ಮಾರಮ್ಮನ ಕುರಿತಂತೆ ಅಪಾರವಾದ ಗೀತಾ ಸಾಹಿತ್ಯ ಲಭ್ಯವಾಗುತ್ತದೆ. ಅದಲ್ಲದಂತೆ ತೈಲೂರಮ್ಮ, ಕಬ್ಬಾಳಮ್ಮ, ಆಂಜನೇಯ, ವೆಂಕಟೇಶ್ವರ ಇತ್ಯಾದಿ ಪದಗಳು ಲಭ್ಯವಾಗಿವೆ.

ಇರುಳಿಗರು ತಮ್ಮ ಮನೆದೇವರು ಎಂದು ಒಪ್ಪಿಕೊಂಡಿರುವ ಮಲೈ ಮಾದೇಶ್ವರನನ್ನು ಕುರಿತಂತೆ ಹಾಡುವ ಗೀತೆಗಳುಹೀಗಿವೆ

ಸ್ವಾಮಿ ಮಾದೇವ ವೊಳ ಮೆಟ್ಟಿ ಬರುವಾಗ
ಮುದರಿದೊಂಬಾಳೆ ಕೆದರಾವೊ!ಮಾದಪ್ಪ
ವೊಂಬಾಳೆ ವೊಳಗೆ ನಲಿತ್ತಾನೆ. ೩೧

ಮಲೆಯ ಮಹಾದೇಶ್ವರನನ್ನು ಪ್ರಮುಖವಾಗಿ ನಾರಿಯರು ಹೊತ್ತುಕೊಂಡು ಹೋಗುವ ಹೊಂಬಾಳೆಯ ಮೇಲೆ ಹೇಗೆ ತಾನು ಮೈ ಮೇಲೆ ಬರುತ್ತಾನೆ ಎಂಬ ನಂಬಿಕೆಯನ್ನು ಪ್ರಸ್ತಾಪಿಸುತ್ತಾರೆ.

ಆಲರವಿ ಬಂದೋ ನೂರೊಂದ್ ಆಲರವಿ ಬಂದೋ
ಆಲರವಿ ಮ್ಯಾಲೇ ಹೂವಿನ ದಂಡೇವಾಲಾಡೀ ಬಂದೋ

ಎಂದು ಪ್ರಮುಖವಾಗಿ 'ಆಲರವಿ' ಸೇವೆಯನ್ನು ಪರಿಗಣಿಸುವ ಅವರಲ್ಲಿ ಎಳೆ ಮಕ್ಕಳು ಹಾಲಹಳ್ಳದಿಂದ ತರುವ ನೀರನ್ನು ಕುರಿತು ಹೇಳುವುದರ ಮೂಲಕ ಮಹದೇಶ್ವರರ ಭಕ್ತಿಯ ಅಭಿವ್ಯಕ್ತಿ ಈ ಸಮುದಾಯದಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಈ ಹಾಡುಗಳು ಸಂಕೇತಿಸುತ್ತದೆ.

ಮಾರಮ್ಮನ ಕುರಿತಾದ ಹಾಡು
ಮಾರಿವೊಯ್ತಳೆ ಮಳವಳ್ಳಿಸೀಮ್ಗೆ
ಮಳ್ ಬಂದ್ರೆ ಎಲ್ಲಿ ತಲಿಗೀಳೋ/ಮಾರಮ್ಮ
ನಿನ್ ಮಾಯವೊಬ್ರಗೆ ತಿಳಿವಲ್ದು ೩೨

ಎರಡೇ ಬಂಡೀಕಾಯಿ ಮಾರ್ ಬಂಡೀ
ಮುಂದ್ಲ ಬಂಡೀಲಿ ಮೂಡವಳ್ಳೆ/ಮಾರಮ್ಮ
ಯ್ಯಾಲಕ್ಕಿ ಕಾಯಿ ಎಳ್ನೀರು ೩೩

ಕೊಂಡಂದ್ರ ಕುಣಿತಾಳೆ ಕೊಂಡಂದ್ರನಲಿತಾಳೆ
ಮುಂಗೊಂಡ ಅಂದ್ರೆ ಮೂರಕಾಕ್‌ವೊಡ್ತಳೆ/ಮಾರಮ್ಮ
ಕೊಂಡಕ್ಕೆ ಮೂರಡಿ ನೆಡೆದಾಳು ೩೪

ಹೀಗೆ ಇರುಳಿಗರು ಮಾರಮ್ಮನನ್ನು ಕುರಿತು ಹಾಡನ್ನು ಹಾಡುತ್ತಾರೆ. ತಾವು ಕಲ್ಪಿಸಿದ ಘಟನೆಗಳ ಆಗರವನ್ನೆ ತೆರೆದಿಡುತ್ತಾರೆ. ಹಾಡುಗಳಲ್ಲಿಯೇ ಚಿತ್ರಗಳು ಕಣ್ಣ

ಮುಂದೆ ಬರುವಂತೆ ಹಾಡುವಂತಹ ಹಾಡುಗಾರರು ಈ ಸಮುದಾಯದಲ್ಲಿ ಕಂಡು ಬರುತ್ತಾರೆ.

ಮಾರಮ್ಮನ ಹಬ್ಬದ ಸಂದರ್ಭದಲ್ಲಿ ಈ ತರಹದ ಹಾಡುಗಳು ಅಭಿವ್ಯಕ್ತವಾಗುತ್ತವೆ. ಹಾಗೆಯೇ ಇರುಳಿಗರು ಕಬ್ಬಾಳಮ್ಮನನ್ನು ತಮ್ಮ ಮನೆಯ ದೇವರು ಎಂದು ಭಾವಿಸಿಕೊಳ್ಳುತ್ತಾರೆ.

**ಕಬ್ಬಾಳಮ್ಮನನ್ನು ಕುರಿತಾದ ಹಾಡುಗಳು ಈ ಕೆಳಕಂಡಂತಿವೆ.**

ಕಬ್ಬಾಳ್ ಬೆಟ್ಟದಿಂದ ಎದ್ದ್ ಬಂದವ್ಳೆ ಕಾಳವ್ವ
ದೊಡ್ಡೆಗೌಡ್ರ ದುಡದಿಂದಾ/ನಾಬಂದೆ
ಕಬಾಳ್ ದುಗ್ಗೇಲಿ ನೆಲೆಗೊಂಡೆ

ಅಕ್ಕ ಕಬ್ಬಾಳಮ್ಮ ತಂಗೀ ಬಿಸಲಮ್ಮ
ಇಬ್ರೂಗೆ ನಡುವೆ ಚದುರೆ/ಕಾಳವ್ವ
ಕೆರಸುತ್ತಾ ಕೆಮಲ್ಲಿಗೆ ಕಾಳವ್ವ ಗುಡಿಸುತ್ತಾ ಚೂರು ಮಲ್ಲಿಗೆ.

ಕಬ್ಬಳ್ ಚಂದ ಕಬಾಳ್ ದುರ್ಗಾಚಂದ
ಏಳೆಳೆ ಗುಂಡು ಎದೆ ಬಾರ/ಕಬಾಳಮ್ಮ
ಸಣ್ಣಂಚಿನ ಸೀರೆ ನೆರೆ ಬಾರ ಶಿಃ

ಹೀಗೆ ಕಬ್ಬಾಳಮ್ಮನನ್ನು ಪೂಜಿಸುವ ಇವರು ಅವಳನ್ನು ಕೊಂಡಾಡುವುದರ ಮೂಲಕ ಕಬ್ಬಾಳಮ್ಮನ ವಿಚಾರಗಳನ್ನು ತಮ್ಮ ಹಾಡುಗಳಲ್ಲಿ ಅಭಿವ್ಯಕ್ತಿಸುತ್ತಾರೆ.

ಹೀಗೆ ಬಾಣಾಂತಿ ಮಾರಮ್ಮ, ಜಟ್ಟಿದೊಡ್ಡಿಮಾರಮ್ಮ, ದೊಡ್ಡಮ್ಮತಾಯಿ, ಚಿಕ್ಕಮ್ಮತಾಯಿ, ಮದ್ದೂರಮ್ಮ, ಏಳೂರಮ್ಮ, ಕೊಂಡದಮಾರಮ್ಮ, ಕೆಂಡದಮಾರಮ್ಮ, ಮಾಸ್ತಮ್ಮ, ಮಾದಮ್ಮ, ಇತ್ಯಾದಿ ಮಾರಮ್ಮಾದಿಗಳನ್ನು ಕುರಿತಂತೆ ಬೃಹತ್ ಗೀತೆಗಳ ಭಂಡಾರವೇ ಇರುಳಿಗರಲ್ಲಿ ಲಭ್ಯವಿದೆ. ಈ ಹಾಡುಗಳಲ್ಲೆಲ್ಲಾ ಭಕ್ತಿಯನ್ನು ಮೆರೆಯುತ್ತಾರೆ. ಅವಳನ್ನು ಒಲಿಸಿಕೊಳ್ಳಲು ಹಾಡುಗಳನ್ನು ದಣಿವಿಲ್ಲದೆ ಹಾಡುತ್ತ ಮೈಮರೆಯುತ್ತಾರೆ.

ಹೀಗೆ ಇರುಳಿಗರು ಹಾಡುವಂತ ದೇವರ ಪದಗಳು ವೈವಿಧ್ಯಮಯವಾಗಿದ್ದು ಎಲ್ಲದರಲ್ಲೂ ಭಕ್ತಿ, ನಿಷ್ಠೆ ದೇವರನ್ನು ನಿಂದಿಸುವುದು, ತಾವು ಹಿಡಿದ ಕಾರ್ಯವಾಗದಿದ್ದಾಗ ದೇವರನ್ನೇ ಬೈಯುವುದು, ವರ್ಣನೆ, ಪವಾಡ ಎಲ್ಲವೂ ಮಿಳಿತವಾಗಿರುವುದು ಕಂಡುಬರುತ್ತದೆ.

ಜನಪದ ಕಥನ ಗೀತೆಯೊಂದರ ಅಧ್ಯಯನದಿಂದ ಜನಪದ ಸಂಸ್ಕೃತಿಯೊಂದನ್ನು ಗುರುತಿಸುವುದು ಸಾಧ್ಯವಿದೆ. ಇರುಳಿಗರಲ್ಲಿಯೂ ಕೂಡ ಬೇರೆ ಸಾಹಿತ್ಯ ಪ್ರಕಾರಗಳಂತೆಯೇ ಕಥನ ಗೀತಾಪ್ರಕಾರಗಳು ವಿಫಲವಾಗಿಯೇ ದೊರೆಯುತ್ತವೆ. ಮಾಲಕಟ್ಟುವುದು, ಎಲೆರಾಮ-ಚಿಕ್ಕರಾಮ, ಮಡಿವಾಳದ ಶಿವನಾಂಕಾರ, ಸ್ವಾಲಗತ್ತಿಯಮ್ಮನಕತೆ, ದೇವ್ರಳ್ಳಿ, ಬೆಳ್ಳಿದೇವರು, ದೊಡ್ಡದೇವರು, ಈರೋಬಿ, ಅಣ್ಣತಂಗಿ,

ಹೊನ್ನಾಲದೇವಿ, ಕಂದನನ್ನೇ ಕೊಂದ ಪಾತಕಿ ಧರ್ಮದ ಹಾಡು, ಜೋಗರಾಡು, ಅಕ್ಕ-ತಂಗಿಯರ ಹಾಡು, ಸಂಕ್ರಸ್ವಾಮಿ, ಸಂಗಾತಿ, ಉತ್ತರಾದೇವಿ, ಬಂಜೆಹೊನ್ನಮ್ಮ, ವೆಂಕಟರಮಣಸ್ವಾಮಿ-ಕುಪಮಾಲೆ ತಬ್ಬುಲುಡಗ ಹೀಗೆ ಅನೇಕ ಕಥನ ಗೀತೆಗಳನ್ನು ಹಾಡುತ್ತಾರೆ.

ಬಿಳಿಗಿರಿರಂಗಯ್ಯ ಸ್ವಾಲಿಗರ ಹೆಣ್ಣು ಮಗಳನ್ನು ವಲಿಸಿಕೊಳ್ಳುವ ಪ್ರಸಂಗವನ್ನು ಇರುಳಿಗರು ಹೇಳುವ ಪ್ರಸಂಗಗಳನ್ನು ಈ ಕೆಳಕಂಡಂತೆ ದಾಖಲಿಸಲಾಗಿದೆ.

ಎಡಗಡೆ ಲಕ್ಸುಮದೇವಿ ಬಲ್ಗಡೆ ತೊಳಚಮ್ಮ
ನಟ್ಟನಡುವೆ ನಾರಾಯಣ/ ತಂದನ್ನ ತಾನಾ
ರಂಗಯ್ಯ ರಾಮ ನಾರಾಯಣಾ ತಂದನ್ನ ತಾನಾ

ಅಯ್ಯ ನಾಟ್‌ಸಾಲೇಲಿ ನಾರಾಯಣಾ ಕೂದಿಕೊಂಡೂ
ಅವರು ನಾರಿರಿಗೆ ವೈನಾ ಏಳುತ್ತಾರೇ/ತಂದನ್ನ ತಾನಾ
ರಂಗಯ್ಯ ರಾಮ ನಾರಾಯಣಾ ತಂದನ್ನ ತಾನಾ

ನಾನ್ ಹೂವೋಗೊಯ್ತುನಿ ಕಾಣೇ ಜಾಣಾಲಕ್ಸುಮದೇವಿ
ನಗುನಗುತ್ತಾವೀಳ್ಯ ಕೊಡಿರಮ್ಮ/ತಂದನ್ನ ತಾನಾ
ರಂಗಯ್ಯ ರಾಮ ನಾರಾಯಣಾ ತಂದನ್ನ ತಾನಾ

ವಾರದ್ ದಾಸಯ್ಯ ಊರ್ಗ್ ಬಂದಿದ್ದೀ
ವಾರಾಯಾವಾಗ ಹೇಳ್‌ದಾಸಯ್ಯ/ತಂದಾನಾ
ತಂದನ್ನ ತಾನಾ ನಾರಾಯಣಾ ತಂದನಾ ೩೬

ಹೀಗೆ ಅನೇಕ ಬಗೆಯ ಕಥನ ಗೀತೆಗಳು ಕಂಡುಬರುತ್ತವೆ. ಅಲ್ಲದೆ ಜನಪದ ಕಾವ್ಯ ಮತ್ತು ಮಹಾಕಾವ್ಯಗಳು ಲಭ್ಯವಾಗುತ್ತವೆ. ಇಲ್ಲಿನ ಕಾವ್ಯಗಳ ಅಧ್ಯಯನದಿಂದ ಇರುಳಿಗರ ಸಾಮಾಜಿಕ ಸಾಂಸ್ಕೃತಿಕ ಸ್ಥಿತಿಗತಿಗಳು ಅನಾವರಣಗೊಳ್ಳುತ್ತವೆ.

ಮಲೈಯ ಮಹದೇಶ್ವರರ ವರದಿಂದ ಹುಟ್ಟಿದ ಕಾರಯ್ಯ ಮತ್ತು ಬಿಲ್ಲಯ್ಯರ ವಂಶಸ್ಥರೆಂದು ಹೇಳಿಕೊಳ್ಳುವ ಇರುಳಿಗರಿಗೆ, ಮಹಾದೇಶ್ವರ ಮಹಾಕಾವ್ಯ ಪುಷ್ಟಿ ನೀಡುತ್ತವೆ.

**ಗಾದೆಗಳು :**

ಒಂದು ಸಂಸ್ಕೃತಿಯ ಮೌಲ್ಯಗಳನ್ನು ಸಮಾಜದ ರೀತಿನೀತಿಗಳನ್ನು ಗಾದೆಗಳಲ್ಲಿಯಂತೆ, ಇನ್ನಾವುದಾದರೂ ಸಂಸ್ಕೃತಿ ವಾಹಕಗಳಲ್ಲಿ ಹರಳುಗಟ್ಟಿದೆಯೆ? ಎಂಬ ಪ್ರಶ್ನೆಗೆ ಇತ್ಯಾತ್ಮಕವಾಗಿ ಉತ್ತರಿಸುವುದು ಕಷ್ಟ ಅತ್ಯಂತ ಸಾಂದ್ರವಾಗಿ, ಸುಲಭವಾಗಿ, ಸಹಜವಾಗಿ,ಸಾಂಸ್ಕೃತಿಕ ಮೌಲ್ಯಗಳು ಭಾಷಿಕ ನೆಲೆಯನ್ನಾಧರಿಸಿ ಹರಿದು ಬರುವುದನ್ನು

ಇಲ್ಲಿ ಕಾಣುತ್ತೇವೆ. ಇದು ಜನಸಾಮಾನ್ಯರ ಬಾಳನ್ನು ನಿರೂಪಿಸುತ್ತವೆ. ಹಾಗೂ ಸಮಾಜವನ್ನು ನಿಯಂತ್ರಿಸುತ್ತದೆ. ಸಾಮಾಜಿಕ ಸಾಂಸ್ಕೃತಿಕ ಜೀವನವನ್ನು ರಕ್ಷಿಸುವ, ಶಿಕ್ಷಿಸುವ, ಧೈರ್ಯ ತುಂಬುವ, ದಾರಿ ತೋರಿಸುವ, ಕೈ ಹಿಡಿದು ನಡೆಸುವ, ಗುರುವಾಗಿದೆ.

"ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮನಂತಿರುವ ಗಾದೆ ಜನಪದ ಜೀವನದ ಸರ್ವಸ್ವವನೆಲ್ಲಾ ಭಟ್ಟಿ ರೂಪದಲ್ಲಿ ಒಳಗೊಂಡಿರುವ ರಸಘಟ್ಟ" ಎಂಬ ಸುಧಾಕರರ ಮಾತು ಅರ್ಥ ಪೂರ್ಣವಾಗಿದೆ.

ಇರುಳಿಗರ ಗಾದೆಗಳು ಅವರ ವೃತ್ತಿ, ಸ್ವಭಾವ ,ಅಧಿಕಾರ, ಪರೋಪಕಾರ ಬುದ್ಧಿ, ಸಾಮಾಜಿಕ ಸ್ಥಾನಮಾನ, ಆರ್ಥಿಕ ಸ್ಥಿತಿಗತಿ, ಆಡಳಿತ ದಕ್ಷತೆ, ಮೊದಲಾದ ಮೌಲ್ಯಗಳನ್ನು ಎತ್ತಿಹಿಡಿಯುವಂತವುಗಳಾಗಿವೆ.

* ಅಲ್ತಾ ವೊದವಳ್ ಆಡ್ ಕಾಯ್ತಾಳೆ
* ಉಳ್ಳೊನೆಂಡ್ರುಗೆ ಒಳ್ಳೆಲ್ಲಾ ಬಂಗಾರ್ವವಂತೆ
* ಇರುಳಿಗ್ರ ದುಡಿಯೂ ಮೈಲಿಗೈಯಾ ವೋಲದ ಗೊಬ್ರವಾ
* ಒಪ್ಪ್‌ತ್ತೊಗೆ ಸಿಕ್ಬ್‌ಟ್ರಿ ಒಲೇನೆ ಕಿತ್‌ಕೊಳವ್ನ
* ಕಣ್ಣಿರೊಂಗದ ನೋಟ ಕಾಲಿರಂಗಂಟ ಮಾಟ
* ಗಡಿ ಮೀರದ್ದ ಗಡಾರಿ ನುಂಗದಾ
* ಕಂತ್‌ಗ್ ತಕ್ಕ ಬೊಂತ
* ಇರುಳಿಗ್ರ ಭಾವ ಮೈದುನ್ನ ನಂಬರೂ
* ದೊರೆ ಚಿತ್ತವೋ, ಪರಚಿತ್ತವೋ ಅಂತ

**ಒಗಟು :**

ಇರುಳಿಗರು ಎಲ್ಲಾ ಬಗೆಯ ಒಗಟುಗಳನ್ನು ಒಂದಲ್ಲ ಒಂದು ಸಂದರ್ಭಗಳಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಇದೊಂದು ಕಲಾತ್ಮಕ ರಸಿಕ ಸಂವಾದವಾಗಿ, ಜನಸಾಮಾನ್ಯರ ಬುದ್ಧಿವಂತಿಕೆ, ವಾಕ್ಚಾತುರ್ಯ, ಶಬ್ದ ಚಮತ್ಕಾರ, ವಿನೋದ, ವಿಡಂಬನೆಗಳನ್ನು ಎತ್ತಿಹಿಡಿಯುತ್ತದೆ. ಒಗಟಿನ ಉತ್ತರ ನೇರವಾಗಿರದೆ ಪರೋಕ್ಷವಾಗಿ ಗೌಪ್ಯವಾಗಿರುವುದು ಇದರ ವಿಶಿಷ್ಠ ಗುಣ.

ಇರುಳಿಗರಲ್ಲಿ ಕಂಡುಬರುವ ಒಗಟುಗಳು ಈ ಕೆಳಕಂಡಂತಿವೆ.

* ಅವ್ವ ಕುಂತವ್ಳೆ ಮಗ್ಳು ಓಡಾಡುತ್ತಾಳೆ,(ಹಂಡೆ, ಚೆಂಬು)
* ಗುಂಬದ ಮೇಲೆ ಬಾಗೂರು (ಬಾಯಿ)
* ಎತ್ತಲಾರದ ಹಲಗೆ ಎಣಿಸಲಾರದ ಗೆಜ್ಜೆ (ಭೂಮಿ, ನಕ್ಷತ್ರ)
* ಕಡಿದರೂ ತುಂಡಾಗುವುದಿಲ್ಲ (ಭೂಮಿ)
* "ಎರಡು ಕಾಲುಂಟು ಮರವಲ್ಲ, ಕೆಂಪು ಕಿರೀಟವುಂಟು ರಾಜನಲ್ಲ,
  ವೇಳೆ ಹೇಳುವನು ಗಡಿಯಾರವಲ್ಲ ಇದನರಿತು ಹೇಳುವವರು
  ಜಾಣರೆಲ್ಲ" (ಹುಂಜ)
* ಎರಡೇ ಕಾಲಿರುವುದು ರಂಗುಳಿಸಿ ನಡೆಯುವುದು, ತಂಗಿಮಕ್ಕಳನೆಲ್ಲ

ಅಂಗಳಕ್ಕೆ ಕರೆಯುವುದು (ಕೋಳಿ)

* ಥರಿ ಹಿಂದೆ ಕೆಂದೆತ್ತ ಬಾಲ ಬೀಸುತ್ತದೆ (ಭತ್ತ)
* ಹಸಿರ್‌ಗಿಡ್‌ದ ಮೇಲೆ ಕುಸರಕ್ಕಿ ಮೊಟ್ಟೆ ಇಕ್ಕುತ್ತೆ (ನಿಂಬೆಹಣ್ಣು)
* ಅಟ್ಟ್‌ದ ಮೇಲೆ ಪುಟ್ಕವಳೆ ಮುಟಿದ್ರೆಗಾಯ (ಕಡಜ)

ಈ ಮೇಲಿನ ಒಗಟುಗಳನ್ನು ಗಮನಿಸಿದಾಗ, ಇರುಳಿಗರಲ್ಲಿ ಒಗಟುಗಳು ಬಹುಮುಖಿ ಅಭಿವ್ಯಕ್ತಿಯಾಗಿವೆ. ಇಲ್ಲಿ ಕಾಣುವುದು, ಜೀವನಾನುಭವ, ವೃತ್ತಿ, ಪ್ರಕೃತಿ, ಸಸ್ಯ, ಪ್ರಾಣಿಗಳಿಗೆ ಸಂಬಂಧಪಟ್ಟಂತಹ ಒಗಟುಗಳು. ಇವು ಇರುಳಿಗರ ಸಾಂಸ್ಕೃತಿಕ ಜೀವನದ ಅಭಿವ್ಯಕ್ತಿಯಾಗಿವೆ. ಒಗಟುಗಳನ್ನು ಎಸೆಯುವುದರ ಮೂಲಕ ಜೀವನಾನುಭವಗಳನ್ನು ಅಭಿವ್ಯಕ್ತಿಸುವುದು ಕಂಡುಬರುತ್ತದೆ. ಹೀಗೆ ಇರುಳಿಗರಲ್ಲಿ ಸಾಹಿತ್ಯದ ಹಲವು ಪ್ರಕಾರಗಳು ಕಂಡುಬರುತ್ತವೆ. ಅಧ್ಯಯನದ ಅನುಕೂಲಕ್ಕಾಗಿ ಕೆಲವು ಪ್ರಕಾರಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುವುದರ ಮೂಲಕ ಅವರ ಸಾಹಿತ್ಯದ ವೈಶಿಷ್ಟತೆಯನ್ನು ಗುರುತಿಸಲಾಗಿದೆ.

**ಕಣಿಶಾಸ್ತ್ರ :**

'ಕಣಿ' ಎಂಬುದಕ್ಕೆ ಭವಿಷ್ಯ ಎಂಬ ಅರ್ಥವಿರುತ್ತದೆ. ಇರುಳಿಗರಲ್ಲಿ ಈ ಪದಕ್ಕೆ ಮೀರಿದ ಅರ್ಥವಿದೆ. ಇಡೀ ಇರುಳಿಗರ ಆಚರಣೆಗಳಲ್ಲಿ ಅತ್ಯಂತ ಮುಖ್ಯವಾದ ಆಚರಣೆ ಇದು. ಇರುಳಿಗರು ಪ್ರಕೃತಿ ಆರಾಧಕರಾಗಿದ್ದರೆಂಬ ವಿಷಯವನ್ನು ಈಗಾಗಲೇ ಚರ್ಚಿಸಲಾಗಿದೆ, ತಮ್ಮ ಜೀವನೋಪಯೋಗಕ್ಕೆ ಸಂಪೂರ್ಣವಾಗಿ ನೈಸರ್ಗಿಕ ಸಂಪತ್ತನ್ನು ಹೆಚ್ಚು ರೂಢಿಸಿಕೊಂಡಿದ್ದರು. ತಾವು ಅನಾರೋಗ್ಯ ಪೀಡಿತರಾದಾಗ ಪ್ರಕೃತಿ ಚಿಕಿತ್ಸೆಯಿಂದಲೇ ವಾಸಿಮಾಡಿಕೊಳ್ಳುವ ಮನೋಭಾವವುಳ್ಳವರಾಗಿದ್ದರು. ಪ್ರತಿಯೊಬ್ಬ ಇರುಳಿಗರ ಕಾಲೋನಿಯಲ್ಲಿ ಒಬ್ಬೊಬ್ಬ ಕಣಿಗಾರನಿರುತ್ತಿದ್ದರು.

'ಕಣಿ' ಎಂಬುದು ವ್ಯಕ್ತಿಯ ಕಾಯಿಲೆ, ಕಸಾಲೆಗಳ, ಕಾರಣ ತಿಳಿಯುವುದು. ಮತ್ತು ಪರಿಹಾರ ಕೇಳಿ ಪರಿಹರಿಸುವುದು. ಮೈಯಲ್ಲಿ ಸೇರಿದ ದೆವ್ವ ಗಾಳಿಗಳನ್ನು ಪತ್ತೆ ಮಾಡಿ ಅವುಗಳನ್ನು ಬಿಡಿಸುವುದು ಹಾಗೂ ಸತ್ತವನ ಜೀವನಾತ್ಮವನ್ನು ಅವನ ಹಿರಿಯರು ಇಲ್ಲವೇ ಕುಲದೇವರ ವಶಕ್ಕೆ ಕೊಡುವುದು ಈ ಎಲ್ಲಾ ಅರ್ಥವನ್ನು ಒಳಗೊಂಡಿದ್ದು 'ಕಣಿ' ಅಂದರೆ ಬಂದ ಕಷ್ಟದ ಕಾರಣ ತಿಳಿಯುವುದು ಪರಿಹರಿಸುವುದು ಇದರ ಮೂಲ ಉದ್ದೇಶ. ಹಾಗಾಗಿ ಇರುಳಿಗರಲ್ಲಿ ಕಣಿ ಹೇಳುವವರಿಗೆ ವಿಶೇಷ ಗೌರವವಿದೆ. ಇದನ್ನು 'ಇಳಿಗಣಿ' ಎಂತಲೂ ಕರೆಯುತ್ತಾರೆ. ಈ ಕಣಿಶಾಸ್ತ್ರ ರಾತ್ರಿ ಏಳು ಎಂಟು ಗಂಟೆಗೆ ಪ್ರಾರಂಭಗೊಂಡು ಬೆಳಗಿನ ಜಾವಕ್ಕೆ ಮುಕ್ತಾಯವಾಗುತ್ತದ್.

ಕಣಿ ಹೇಳುವ ವ್ಯಕ್ತಿ ಬರಿ . ಹಣೆಗೆ ಮೈ-ಕೈಗಳಿಗೆ ತಾನು ನುಡಿಸುವ ತಮಟೆಗೆ ವಿಭೂತಿ ಬಳಿದು ಕೀಲು ಪಿಳ್ಳಾರ್ತಿ ಪೂಜೆ ಎರಡೂ ಕಾಲನ್ನು ತುಸು ತೆರೆದಂತೆ ಚಕ್ಕಲು ಬಕ್ಕಲು ಹಾಕಿಕೊಂಡು ಕುಳಿತುಕೊಳ್ಳುತ್ತಾನೆ. ಸ್ವಲ್ಪ ಕಾಯಿಸಿದ ದಮಡಿ ಕೈಯಲ್ಲಿ ಹಿಡಿದು ಹೊಂದಿಸಿಕೊಂಡಿರುವಂತೆ ಕೂರುತ್ತಾನೆ. ಗಮನಕ್ಕೆ ಬಂದಂತೆ ದೇವತೆಗಳ ಹೆಸರನ್ನು ಹೇಳುತ್ತಾ ಅದೊಂದು ಬಗೆಯ ಲಯಕ್ಕೆ ಅಳವಡಿಸುತ್ತಾ ನುಡಿಯುತ್ತಾ ಸಾಗುತ್ತಾನೆ.

ಬಡಿತದ ಗತಿ, ನುಡಿಯುವ ಗತಿ ಹೆಚ್ಚಾಗುತ್ತಿದಂತೆ ಎದುರಿಗೆ ಕೂತವರಿಗೆ ಭಯವುವುಂಟಾಗುತ್ತದೆ. ದೇವರು ಹೆಸರುಗಳ ಮಧ್ಯೆ ಮಧ್ಯೆ ನಿಲ್ಲಿಸಿ ಹುಂ,ಹುಂ,ಹುಂ ಎಂದು ಮಾಡುವ ಸದ್ದು ತುಂಬಿ ವೋಗುತ್ತದೆ. ಮಧ್ಯೆ ಮಧ್ಯೆ ಮನೆಯವರು ಕಣಿಯನ್ನು ಕತೆಯನ್ನು ಪೂಜಿಸುತ್ತಾರೆ.

ಬಿದಿರು ಮೊರದಲ್ಲಿ (ಕೊಂಗಲದಲ್ಲಿ) ಬೂದಿಯನ್ನು ಹಾಕಿಕೊಂಡು ಅಂಗೈಯಿಂದ ಉಜ್ಜುತ್ತಾ ಇಲ್ಲವೇ ದಮಡಿಯನ್ನು ಬಡಿಯುತ್ತಾನೆ. ನಾಗರೀಕತೆ ವೇಗವಾಗಿ ಪಸರಿಸಿದರೂ, ಇರುಳಿಗರು ಪುರಾತನ ಆಚರಣೆಗಳನ್ನು ನೆಡೆಸಿಕೊಂಡು ಹೋಗುತ್ತಿದ್ದಾರೆ. ಹತ್ತು ಕಣಿ ಹೇಳಲು ಕೂರುವುದನ್ನು 'ಪಟ್ಟಕ್ಕೆ ಕೂರುವುದು' ಎಂದು ಹೇಳುವುದಾಗಿದೆ. ಈ ರೀತಿ ಕಣಿ ಹೇಳುವುದನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿತವಾಗಿದ್ದು ಅದು ಈ ಕೆಳಕಂಡಂತಿದೆ.

ಬುಡಕಟ್ಟು ಜನರಿಗೆ ಹಬ್ಬ ಹರಿದಿನಗಳು ಮೋಜಿಗಾಗಿ ಅಲ್ಲ ಅದರ ಧರ್ಮ ಭಾವನೆಯ ಮತ್ತು ನಂಬಿಕೆಗಳ ಪಡಿಯಚ್ಚು ಕಾಡುಪೂಜಾರಿಗಳಲ್ಲಿ ಹಬ್ಬ ಹರಿದಿನಗಳು ಅಷ್ಟು ಮುಖವಾಗಿ ಕಾಣಸಲಿಲ್ಲ. ಕಾಡಿನ ವಾಸವನ್ನು ಬಿಟ್ಟು ನಾಡಿಗೆ ಬಂದ ಮೇಲೆ ಅವರು ಹಬ್ಬಗಳನ್ನು ಆಚರಿಸುವುದನ್ನು ನಾವು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಗಮನಿಸಬಹುದು.

**ಸಂಪ್ರದಾಯ ನಂಬಿಕೆ ಹಾಗೂ ಆಚರಣೆಗಳು :**

ಸಂಪ್ರದಾಯವನ್ನು ಕುರಿತಂತೆ standard dictionary of Folklore ಕೃತಿಯಲ್ಲಿ ಈ ರೀತಿಯ ವಿವರಗಳು ದೊರೆಯುತ್ತವೆ.

"Traditional pattern of human action accepted by a group individual habit is not Included custom is what folk do; belief is why they think they do it. ೩೭

ಸಂಪ್ರದಾಯವೆಂಬುದು ವೈಯಕ್ತಿಕವಾದುದಲ್ಲ ಸಾಮೂಹಿಕವಾದುದು. ಜನರು ಏನು ಮಾಡುತ್ತಾರೆಂಬುದನ್ನು ತಿಳಿಸುವುದೇ ಸಂಪ್ರದಾಯ. "ಆಚರಣೆಗಳಲ್ಲಿ ಅಡಕಗೊಂಡ, ಜನಪದ ಸಮಾಜದ ಸಮುದಾಯ ನಡುವಳಿಕೆ ನೈತಿಕತೆಯ ಆಂತರಿಕ ಧ್ವನಿ ಅವರನ್ನು ಬಂಧಿಸಿದ ಅಮೂರ್ತ ಮಾದರಿಗಳು". ಆದುದರಿಂದ ಬುಡಕಟ್ಟು ಸಮುದಾಯ ಸಮಷ್ಠಿ ವಿಚಾರ ಧಾರೆಗಳನ್ನು ಅಧ್ಯಯನ ಮಾಡುವುದಕ್ಕೆ ಅತ್ಯಂತ ಸಹಾಕಾರಿಯಾಗುವುದರಿಂದ ಅವರ ಸಂಪ್ರದಾಯ ನಂಬಿಕೆ, ಆಚರಣೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.೩೮

ಇರುಳಿಗರ ಸಂಸ್ಕೃತಿ ವಿಶಿಷ್ಟವಾದುದ್ದಾಗಿದೆ. ಸಂಸ್ಕೃತಿಯ ವಿಕಾಸ ಹಂತದಲ್ಲಿ, ಆಹಾರ ಸಂಗ್ರಹಣೆಯ ಹಂತವನ್ನು ದಾಟಿ, ಬೇಟೆ ಸಂಸ್ಕೃತಿಯ ಹಂತವನ್ನು ಇರುಳಿಗರು ಸೇರಿದ್ದಾರೆ. ಇರುಳಿಗರ ಆಚರಣೆಗಳು ಆದಿಮ ಸಂಸ್ಕೃತಿಯ ಹತ್ತು-ಹಲವು, ವಿವರಗಳನ್ನು ವಿಷಧಿಕರಿಸುತ್ತವೆ. ಕಾಡಿನ ಸಂಸ್ಕೃತಿಯು ನಾಡಿನ ಸಂಸ್ಕೃತಿಯೊಂದಿಗೆ ಕೈಗೂಡಿಸುವ ಹಂತದಲ್ಲಿನ ಹಲವು ಮಜಲುಗಳಲ್ಲಿ ಈ ಆಚರಣೆಗಳು ಇರುಳಿಗರಲ್ಲಿ ಗೋಚರವಾಗುತ್ತವೆ.

ಆಂತರಿಕ ಹಾಗೂ ಬಾಹ್ಯ ಪ್ರೇರಣೆಗಳಿಗೆ ಒಳಗಾದ ಜನ ಸಮೂದಾಯದವೊಂದರ, ಆಹಾರಪದ್ಧತಿ, ವೇಷಭೂಷಣಗಳಲ್ಲಿನ ಬದಲಾವಣೆ ಪ್ರಾಯಶಃ ಬದಲಾವಣೆ ಮಾಡುವ ವೇಗದಲ್ಲಿ ನಾವು ದಾಪುಗಾಲು ಹಾಕಬಹುದು. ಆದರೆ ಆ ಸಮುದಾಯದ ಹುಟ್ಟು, ಸಾವು, ವಿವಾಹ ಸಂಬಂಧಿ, ಸಂಪ್ರದಾಯ, ವಿಧಿ-ವಿಧಾನಗಳನ್ನು ಬದಲಾಯಿಸಲಾಗುವುದಿಲ್ಲ. ಇವು ಬದುಕಿನ ಮುಖ್ಯ ಘಟಕಗಳಾಗಿರುವುದರಿಂದ ಸಣ್ಣಪುಟ್ಟ ಬದಲಾವಣೆಗಳು ಕಂಡುಬರುತ್ತವೆ. ವಿನಃಅತೀಯಾದ ಬದಲಾವಣೆಗೆ ಒಳಪಟ್ಟಿರುವುದಿಲ್ಲ. ಆದುದರಿಂದ ಸಮುದಾಯವೊಂದು ಸಂಸ್ಕೃತಿಯನ್ನು ತಿಳಿಯಬೇಕಾದರೆ ಪ್ರಮುಖವಾಗಿ ಆ ಸಮುದಾಯದ ಹುಟ್ಟು, ಸಾವು, ಮದುವೆಗೆ ಸಂಬಂಧಿಸಿದ ಸಂಪ್ರದಾಯ ಆಚರಣೆಗಳು ಹೆಚ್ಚು ಪ್ರಯೋಜನಕಾರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ಇರುಳಿಗರ ಜೀವನಾವರ್ತ ಆಚರಣೆಗಳ ವಿವರಗಳನ್ನು ಇಲ್ಲಿ ದಾಖಲಿಸಲಾಗಿದೆ.

**ಯುಗಾದಿ :**

ಇರುಳಿಗರಿಗೆ ಯುಗಾದಿಯಿಂದ ಆರಂಭವಾದ ವರ್ಷ ಮುಂದಿನ ಯುಗಾದಿಗೆ ಮುಗಿಯುತ್ತದೆ. ನಾಗರಿಕರು ಆಚರಿಸುವ ಈ ಯುಗಾದಿ ಹಬ್ಬದ ಅನುಕರಣೆಯನ್ನು ಇರುಳಿಗರಲ್ಲಿಯೂ ಕಾಣಬಹುದು. ಸ್ನಾನ ಮಾಡಿಕೊಂಡು, ಹೊಸಬಟ್ಟೆ ತೊಟ್ಟು ಹಿರೀಕರ ಸಮಾಧಿಗೆ (ತಲೆಕಲ್ಲುಗುಡ್ಡೆಗಳಿಗೆ) ಮನೆಯಲ್ಲಿ ತಯಾರಿಸಿರುವ ಅಡಿಗೆಯನ್ನು ತಂದು ಮೂರು ದೊನ್ನೆ ಕಟ್ಟಿ ಅದರೊಳಗಿಟ್ಟು ಹಣ್ಣುಕಾಯಿ, ವಿಭೂತಿ, ಅರಿಶಿನ ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ಹೊಸಬಟ್ಟೆ, ಸೀರೆಗಳನ್ನು ತಂದಿದ್ದರೆ ಅವುಗಳನ್ನು ಎಡೆಗಿಟ್ಟು ನಂತರ ಧರಿಸಿಕೊಳ್ಳುತ್ತಾರೆ. "ಹೊಸತಡಕ"ನ್ನು (ವರುಷ ತೊಡಕು) ಊರೆಲ್ಲಾ ಸೇರಿಕೊಂಡು ಖರೀದಿಸಿರುವ ಮೇಕೆ, ಓತ, ಕುರಿ ಅಥವಾ ಟಗರು ಕಡಿದು ಪಾಲು ಮಾಡಿಕೊಂಡು ಮಾಂಸದಡಿಗೆ ಮಾಡಿ ಮತ್ತೆ ಹಿರಿಯರಿಗೆ ಎಡೆಯಿಟ್ಟು ನಂತರ ತಾವು ಊಟ ಮಾಡಿತ್ತಾರೆ. ಚೈತ್ರ ಮಾಸದಲ್ಲಿ ಬರುವ ಸೌರಮಾನ ಯುಗಾದಿಯನ್ನೇ ಇರುಳಿಗರೂ ಆಚರಿಸುತ್ತಾರೆ. ಗೌರಿ ಗಣೇಶ ಹಬ್ಬದಲ್ಲಿ ನಾಗರಕಲ್ಲಿಗೆ (ಮುನೇಶ್ವರನಿಗೆ) ತನಿ ಎರೆಯುವ ಆಚರಣೆಯನ್ನು ನಡೆಸುತ್ತಾರೆ.

**ಸಂಕ್ರಾತಿ ಹಬ್ಬ :**

ಇದು ಸಾಮಾನ್ಯವಾಗಿ ಪಶು, ಪ್ರಾಣಿ, ಜಾನುವಾರುಗಳಿಗೆ ಸಂಬಂಧಿಸಿದ ಹಬ್ಬ. ಕರ್ನಾಟಕದ ಎಲ್ಲ ಪ್ರದೇಶಗಳಲ್ಲಿಯೂ ಬೇರೆ ಬೇರೆ ಹೆಸರುಗಳಲ್ಲಿ ಆಚರಿಸುವುದು ರೂಢಿ. ಉತ್ತರ ಕರ್ನಾಟಕದ ಕಡೆ ಮುಂಗಾರಿ ಹಬ್ಬವೆನ್ನುತ್ತಾರೆ. ದಕ್ಷಿಣ ಕರ್ನಾಟಕದ ಮಂಡ್ಯ, ಮೈಸೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಕೋಲಾರ ರಾಮನಗರ ಮುಂತಾದ ಜಿಲ್ಲೆಗಳಲ್ಲಿ ಈ ಹಬ್ಬವನ್ನು ಎಲ್ಲಾ ಜನಜಾತಿಗಳವರೂ ಆಚರಿಸುತ್ತಾರೆ. ಭೀಷ್ಮರು ಕಾಲವಶರಾದ ಉತ್ತರಾಯಣ ಪುಣ್ಯಕಾಲವೆಂದಾಗಲಿ, ಸಮಯ-ಕ್ರಾಂತಿಯ ಶುಭದಿನ ಎಂಬ ಅರಿವಿನಿಂದಾಗಲಿ ಇರುಳಿಗರು ಈ ಸಂಕ್ರಾತಿ ಹಬ್ಬದ ಆಚರಣೆ ಮಾಡುವುದಿಲ್ಲ. ದನಕರು, ಎಮ್ಮೆ, ಕುರಿ, ಮೇಕೆ ಇತ್ಯಾದಿ ಜಾನುವಾರುಗಳನ್ನು ಸಾಕಿರುವವರು ಸಾಮಾನ್ಯವಾಗಿ ಈ ಹಬ್ಬವನ್ನು ಆಚರಿಸುತ್ತಾರೆ.

ವರ್ಷಪೂರ್ತಿ ಕಷ್ಟಪಟ್ಟು ದುಡಿದ ದನಕರುಗಳನ್ನು ಒಂದು ದಿನ ಚೆನ್ನಾಗಿ

ಮೈತೊಳೆದು, ಕೋಡುಗಳಿಗೆ ಬಣ್ಣ ಹಚ್ಚಿ, ಸುನೇರಿಗಳಿಂದ ಸಿಂಗರಿಸಿ ಊರ ಹೊರಗೆ ನಿರ್ಮಿಸಿರುವ ಸಂಕ್ರಾಂತಮ್ಮನ ಗುಡಿಯ ಬಳಿಗೆ ತಮ್ಮ ರಾಸುಗಳನ್ನು ಹೊಡೆದುಕೊಂಡು ಹೋಗಿ ಪೂಜೆ ಮಾಡಿಸಿ "ಪೊಂಗುಲ"ನ್ನು (ಬೇಯಿಸಿದ ಅನ್ನಕ್ಕೆ ಹರಕಗೆಂದು ತಂದ ಕೋಳಿಯ ರಕ್ತ ಮತ್ತು ದನಗಳ ಕೆಚ್ಚಲಿನಲ್ಲಿ ಅಂಟಿಕೊಂಡಿರುವ ಉನ್ನಿಗಳನ್ನು ಕಿತ್ತು ಜಜ್ಜಿ ಹಾಕಿ ಕಲಸಿ ತಯಾರಿಸಿದ ಪದಾರ್ಥ) ಪೂಜಾರಿಯಿಂದ ಪಡೆದು ತಮ್ಮ ರಾಸುಗಳ ಮೈಮೇಲೆ "ಹಿಂಡೆಚ್ಚಲಿ. ಹಿಂಡೆಚ್ಚಲಿ" ಎನ್ನುತ್ತಾ ಎಸೆದು, ಹುಚ್ಚೆಳ್ಳು ಕಗ್ಗು ಇತ್ಯಾದಿ ತರುಬುಗಳನ್ನು ಸೇರಿಸಿ ಹಾಕಿದ ಬೆಂಕಿಯ ಕಿಚ್ಚನ್ನು ಹಾಯಿಸಿ ಮನೆಗೆ ಕರೆತರುತ್ತಾರೆ.

**ಸಂಕ್ರಾಂತಿ ಗುಡಿ :**

ಸುಮಾರು ಆರೇಳು ಅಡಿಯ ವ್ಯಾಸವಿರುಂತೆ ವೃತ್ತಾಕಾರವಾಗಿ ಮಣ್ಣಿನ ಕಟ್ಟೆ ಕಟ್ಟಿ ಒಂದು ವಲಯವನ್ನು ನಿರ್ಮಿಸಿಕೊಳ್ಳುತ್ತಾರೆ. ಅದರ ಮಧ್ಯದಲ್ಲಿ ಎರೆ ಮಣ್ಣಿನಿಂದ ತಯಾರಿಸಿದ ಗುಡಿಯನ್ನು ಗೋಪುರಾಕೃತಿಯಲ್ಲಿ ರಚಿಸುತ್ತಾರೆ. ತಳ ಆಯತವಾಗಿದ್ದು ಮೇಲೆ ಬಂದಂತೆ ನಾಲ್ಕು ಭಾಗಗಳು ಸಣ್ಣವಾಗಿ ದೂರದಿಂದ ನೋಡಿದರೆ ತ್ರಿಕೋನಾಕಾರವಾಗಿ ಕಾಣುತ್ತದೆ. ಎರಡು ಮೂರು ಅಡಿ ಎತ್ತರದಿಂದ ಗೋಪುರದಲ್ಲಿ ಪೂರ್ವ ದಿಕ್ಕಿಗೆ ದೀಪವನ್ನು ಇಡಲು ಅನುಕೂಲವಾಗುವಂತೆ ತ್ರಿಕೋನಾಕಾರವಾಗಿ ಗೂಡೊಂದನ್ನು ಮಾಡಿರುತ್ತಾರೆ. ಉಗುನಿ ಹೂ, ಅವರಕೆ ಹೂ, ಅಣ್ಣೆ ಹೂ, ಕಣಗಲೆ ಹೂ ಇತ್ಯಾದಿಗಳನ್ನು ಮುಡಿಸಿ ಸಿಂಗರಿಸಿರುತ್ತಾರೆ. ಹೀಗೆ ರಚಿಸಿದ ಮಣ್ಣಿನ ಗೋಪುರವನ್ನು ಸಂಕ್ರಾತಿ ಗುಡಿ ಎಂದು ಕರೆಯುತ್ತಾರೆ. ಈ ಸಂಕ್ರಾತಿಯ ಗುಡಿಯನ್ನು ಕಟ್ಟುವ ಉದ್ದೇಶವೇನೆಂದು ಕೇಳಿದರೆ ತಮ್ಮದೇ ವ್ಯಾಖ್ಯಾನ ನೀಡುತ್ತಾರೆ. "ಪ್ರಪಂಚದಲ್ಲಿ ಹಸಿರು ಬಣ್ಣದ ದನಗಳಿಲ್ಲ. ಒಮ್ಮೆ ಹಾಗೆ ಹುಟ್ಟಿದ ಹಸಿರು ಬಣ್ಣದ ಗೋವೊಂದನ್ನು ನೋಡಿದ ನಂದೀಶ್ವರರು ಅದು ಬದುಕಿರುವುದು ಬೇಡ, ಅದರಿಂದ ಲೋಕಕ್ಕೆ ಕೆಡಕಾಗುತ್ತದೆ, ಆದ್ದರಿಂದ ಹಸಿರು ದನಗಳು ಈ ಭೂಮಿಯ ಮೇಲೆ ಇರಲೇಬಾರದೆಂದು ಹಾಗೆ ಹುಟ್ಟಿದ ಹಸಿರು ಬಣ್ಣದ ಹಸುವನ್ನು ಕತ್ತರಿಸಿ ಮೂಗುತ್ತದೊಳಗೆ ತುಂಬಿದರಂತೆ, ಆದ್ದರಿಂದಲೇ ಪ್ರತಿವರ್ಷ ಮೂಗುತ್ತದೋಪಾದಿಯ ಸಂಕ್ರಾಂತಮ್ಮನ ಗುಡಿಯನ್ನು ನಿರ್ಮಿಸಿ ಪೂಜಿಸುವುದು."-ಎನ್ನುತ್ತಾರೆ. ಸಂಕ್ರಾಂತಮ್ಮನ ಗುಡಿಯನ್ನು ನಿರ್ಮಿಸಲು ಇರುಳಿಗರೇ ಆಗಬೇಕೆಂದಿಲ್ಲ. ಯಾವ ಸಮುದಾಯದವರು ಬೇಕಾದರೂ ನಿರ್ಮಿಸಬಹುದು. ಸಂಕ್ರಾಂತಮ್ಮನ ಗುಡಿ ಕಲಾತ್ಮಕವಾಗಿರುತ್ತದೆ.

**ಕಿಚ್ಚು ಹಾಯಿಸುವುದು :**

ಸಂಕ್ರಾಂತಿ ಗುಡಿಯ ಮುಂದೆ ಪೂಜೆ ಮುಗಿಸಿ, ಪೊಂಗಲು ಪಡೆದು ಹಸುಗಳ ಮೇಲೆ ಹಿಂಡೆಚ್ಚಲಿ ಎಂದು ಎಸೆದು ಹಿಂದಿರುಗುವಾಗ ಒಂದಷ್ಟು ತೆಂಗಿನ ಗರಿ, ಹುಚ್ಚೆಳ್ಳು ಕಗ್ಗನ್ನು (ಹುಚ್ಚೆಳ್ಳು ಉದುರಿಸಿಕೊಂಡ ಮೇಲೆ ಉಳಿವ ಅದರ ಕಡ್ಡಿಗೆ ಹುಚ್ಚೆಳ್ಳು ಎನ್ನುತ್ತಾರೆ.) ಹಿಂದಿರುಗುವ ದಾರಿಗೆ ಅಡ್ಡಲಾಗಿ ಹಾಕಿ ಧಗಧಗಿಸುವ ಬೆಂಕಿಯನ್ನು ಹಾಕುತ್ತಾರೆ ಪೂಜೆಗೆ, ಪೊಂಗುಲಿಗೆ ಎಂದು ಜಾನುವಾರುಗಳನ್ನು ತಂದಿರುವ ಎಲ್ಲರೂ ತಮ್ಮ ದನಕರುಗಳನ್ನು ಆ ಬೆಂಕಿಯ ಮೇಲೆ ನೆಗೆಸಿಕೊಂಡು ಹೋಗುತ್ತಾರೆ. ಹಾಗೆ ಬೆಂಕಿಯ ಮೇಲೆ ಜಿಗಿಸುವುದನ್ನು ಕಿಚ್ಚು ಹಾಯಿಸುವುದು ಎನ್ನುತ್ತಾರೆ. ಕಿಚ್ಚು

ಹಾಯಿಸುವ ಕ್ರಿಯೆ ಸ್ಪರ್ಧಾತ್ಮಕವಾಗಿದ್ದು ಒಂದು ರೀತಿಯ ಮೋಜೆನಿಸುತ್ತದೆ. ತಮ್ಮ ಜಾನುವಾರುಗಳ್ನು ಎತ್ತರಕ್ಕೆ ಜಿಗಿಯಬೇಕು, ತಮ್ಮಜಾನುವಾರು ಮೊದಲು ಹೋಗಬೇಕೆಂಬ ಪೈಪೋಟಿ ಕಂಡುಬರುತ್ತದೆ. ಇದರಿಂದ ತಮ್ಮ ರಾಸುಗಳಿಗೆ ಆಗಿರುವ ದೃಷ್ಟಿದೋಷ ನಿವಾರಣೆಯಾಗುತ್ತದೆಂದು ನಂಬುತ್ತಾರೆ. ಹಿಂಡೆಚ್ಚಲು ಪಂಗಲನ್ನು ಒಕ್ಕಣೆಯಾಗದ ಮೆದೆಗಳಿಗೆ (ಒಕ್ಕಣೆಯಾಗದ ರಾಗಿಹುಲ್ಲಿನ ಬಣವೆಗಳಿಗೂ) ತಂದು ಎರಚುತ್ತಾರೆ. ಇದರಿಂದ ರಾಶಿ ಹೆಚ್ಚುತ್ತದೆಂದು ನಂಬಿದ್ದಾರೆ. ಮನೆಗೆ ರಾಸುಗಳನ್ನು ಕಿಚ್ಚು ಹಾಯಿಸಿ ಹೊಡೆತಂದ ಕೂಡಲೇ ಬಾಗಿಲಿನಲ್ಲಿ ನಿಲ್ಲಿಸಿ, ಕೋಳಿಯೊಂದನ್ನು ಹಸಿಗಳ ಕಾಲಿಗೆ ಬಲಿಕೊಟ್ಟು ಪೂಜೆ ಮಾಡಿ ಒನಕೆಯೊಂದನ್ನು ಹಾಕಿ ಒಳಗೆ ಬಿಡುತ್ತಾರೆ. ಬಲಿಕೊಟ್ಟ ಕೋಳಿಯನ್ನು ಕೊಯ್ದು, ಮಾಂಸದಡಿಗೆ ಮಾಡಿ ಊಟ ಮಾಡುತ್ತಾರೆ. ಅಲ್ಲಿಗೆ ಸಂಕ್ರಾತಿ ಹಬ್ಬ ಮುಗಿಯುತ್ತದೆ.

ಇರುಳಿಗರು ಮಹಾನವಮಿ, ಆಯುಧಪೂಜೆಯನ್ನು ಇತ್ತೀಚೆಗೆ ಆಚರಿಸುತ್ತಿದ್ದಾರೆ. ವ್ಯವಸಾಯ ಮಾಡುವವರು ತಮ್ಮ ಬೇಟೆಯ ಉಪಕರಣಗಳೊಂದಿಗೆ ವ್ಯವಸಾಯ ಸಂಬಂಧಿ ಆಯುಧಗಳನ್ನು ಇಟ್ಟು, ಅಂದೂ ಸಹ ಕೋಳಿ ಇತ್ಯಾದಿಗಳ ಬಲಿಯನ್ನು ಕೊಡುವ ಪದ್ಧತಿಯನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಎಲ್ಲ ಉಪಕರಣಗಳನ್ನು ತಮ್ಮ ಬೂಡಿನ ನಡುಮನೆಯಲ್ಲಿರಿಸಿ ಅರಿಶಿನ-ಕುಂಕುಮ ಹಚ್ಚಿ, ನಂತರ ಕೋಳಿಯ ಬಲಿಯನ್ನು ಕೊಟ್ಟು ಅದರ ರಕ್ತವನ್ನು ಆಯುಧಗಳಿಗೆ ಹಚ್ಚಿ ಆಯ್ದು ಪೂಜೆಯಂದು ಹಬ್ಬವನ್ನು ಆಚರಿಸುವುದನ್ನು ರೂಢಿಸಿಕೊಂಡಿದ್ದಾರೆ.

**ಜನನ ಸಂಬಂಧಿ ಆಚರಣೆಗಳು :**

ಇರುಳಿಗರು ಸಾಮಾನ್ಯವಾಗಿ ಬೇರೆ ಜನ, ಜಾತಿ ಸಮುದಾಯಗಳಿಂದ ಬೇರ್ಪಟ್ಟು ಊರಿನಿಂದ, ಹೊರಗೆ, ಕಾಡು, ಬೆಟ್ಟಗಳ ತಪ್ಪಲಿನಲ್ಲಿ ಹೆಚ್ಚಾಗಿ ವಾಸಮಾಡುತ್ತಿದ್ದರು. ಇರುಳಿಗರು ಇರುವಂತಹ ಹಾಡಿಗಳಲ್ಲಿ ಅವರ ಸಮುದಾಯ ಮಾತ್ರವೇ ಕಂಡುಬರುತ್ತಾರೆ. ಹಿಂದೆ ಹೆಣ್ಣು ಗರ್ಭವತಿಯಾಗಿ ದಿನ ತುಂಬಿ ಮಗುವಿಗೆ ಜನ್ಮ ನೀಡುವ ಸಂದರ್ಭದಲ್ಲಿ ಹೆರಿಗೆ ಮಾಡಿಸುವ ಕೆಲಸವನ್ನು ಆ ಸಮುದಾಯದ ಅನುಭವಸ್ಥ ಹೆಣ್ಣುಮಗಳು ನಿರ್ವಹಿಸುತ್ತಿದ್ದಳು. ಆದರೆ ಇಂದು ಸರ್ಕಾರಿ ಆಸ್ಪತ್ರೆಗಳು, ಖಾಸಗಿ ಆಸ್ಪತ್ರೆಗಳ ಸೌಲಭ್ಯದಿಂದಾಗಿ ಪ್ರಸೂತಿ ಕೆಲಸವನ್ನು ಆಸ್ಪತ್ರೆಯ ನೌಕರರು ನಿಭಾಯಿಸುವುದರಿಂದ ಅವರಲ್ಲಿದ್ದಂತಹ ಕೆಲವು ಆಚರಣೆಗಳು ಆಧುನುಕರಣಗೊಳ್ಳುತ್ತಿವೆ ಎಂಬ ಅಂಶವನ್ನು ಸ್ಪಷ್ಟ ಪಡಿಸುತ್ತಾರೆ.

ಒಟ್ಟಾರೆಯಾಗಿ ಇರುಳಿಗರಲ್ಲಿ ಹಿಂದೆ ಹೆರಿಗೆ ಮಾಡಿಸುವ ಕಾರ್ಯಕ್ಕೆ ಸೂಲಗಿತ್ತಿಯಾಗಿ ಆ ಸಮುದಾಯದ ಹಿರಿಯ ಹೆಣ್ಣುಮಗಳು ನಿರ್ವಹಿಸುತ್ತಿದ್ದಳು. ಹೆರಿಗೆ ಸಂದರ್ಭದಲ್ಲಿ ಗಂಡಸನ್ನು ಹೊರಗಡೆ ಕಳುಹಿಸುತ್ತಿದ್ದರು. ಹೊಕ್ಕಳು ಬಳ್ಳಿಯನ್ನು ಕತ್ತರಿಸುವಾಗ ಕುಡುಗೋಲನ್ನು ಬಳಸುತ್ತಿದ್ದರು. ಆದರೆ, ಈಗ ಬ್ಲೇಡ್ ಬಳಸುತ್ತಾರೆ. ಆದರೆ ಇದನ್ನು ಇಂದು ಆಸ್ಪತ್ರೆಗಳು ನಿರ್ವಹಿಸುವುದರಿಂದ ಅಪರೂಪಕ್ಕೆ ಮನೆಯಲ್ಲಿ ಹೆರಿಗೆಗಳು ಆಗುತ್ತವೆ. ಮಗುವಿನ ಜನನದ ನಂತರ 'x' ಕತ್ತರಿ ಆಕಾರದ ಬರೆಯನ್ನು ಎಳೆಯುತ್ತಿದ್ದರು ಎಂದು ವಕ್ತೃಗಳು ಹೇಳುತ್ತಾರೆ.

ಸೀಮಾಂತ ಮಾಡುವ ಪರಿಪಾಠ ಈ ಸಮುದಾಯದಲ್ಲಿ ಇರಲಿಲ್ಲ. ಆದರೆ ಇವರು ಇತ್ತಿಚೆಗೆ ಅದರ ಕಾರ್ಯಗಳನ್ನು ಸಹ ಮಾಡುತ್ತಾರೆ. ಈ ಕಾರ್ಯಗಳು ನಡೆಯ ಬೇಕಾದರೆ ಸಿಹಿ ಊಟ ಮಾಡುವುದನ್ನು ನಾವು ಕಾಣಬಹುದು.

ಗರ್ಭ ಧರಿಸಿದ ನಂತರ ಹೆಣ್ಣು ಮಗಳ ಬಯಕೆಯನ್ನು ಕುರಿತಾದ ಹಾಡುಗಳು ಇರುಳಿಗರಲ್ಲಿ ಕಂಡು ಬರುತ್ತವೆ. ಆ ಹಾಡುಗಳು ಈ ಕೆಳಕಂಡಂತಿವೆ.

ಒಂದೆಲೆ ಉಯ್ದು ಎಲೆ ತೋಟದೊಳಗಿರುವ
ಎಳೆಯ ಮಾವಿಕಾಯಿ ಬಾವಸಾವಳೆ !ಗಂಗಾ
ಕನಸ ಕಂಡವ್ಳೆ ಗೌರಿ
ಒಂದೆಲೆ ಉಯ್ದು ಎಲೆ ತೋಟದೊಳಗಿರುವ
ಎಳೆಯ ಮಾವಿನ ಕಾಲು ಒಂದಾಳ ಕಳಸಿ ತರಸಿ/ಕೈಯೊಳಗಿವೆ
ಅರಿತೇನ ನಾರಿ ಬ್ಯಾನವ.
ಒಂದ್ ತಿಂಗಳ್ ತುಂಬೀತು ಎಮದೇವಿ
ಒಂದೆಲೆ ಉಯ್ಯ ಎಲೆ ತೋದಾ ಗಂಗಾ
ಕನಸ ಕಂಡಳೆ ಗೌರಿ,೩

ಒಂಬತ್ತು ತಿಂಗಳೂ, ತಿಂಗಳಿಗೊಂದರಂತೆ ಬಯಕೆಗಳಾದಾಗ ಅವುಗಳನ್ನು ತೀರಿಸಲು ಗಂಡ, ಅತ್ತೆ ಮಾವ, ತಂದೆ ತಾಯಿಗಳು ತವಕಿಸುವ ವಿವರಗಳನ್ನು ಈ ಬಯಕೆಯ ಹಾಡುಗಳಲ್ಲಿ ಗೋಚರಿತ್ತದೆ. ಈ ತರಹದ ಆಚರಣೆಗಳು ಮಾವು ಹುಣಿಸೆ, ನೆಲ್ಲಿಕಾಯಿ, ಇಂತಹವುಗಳನ್ನು ಬಯಸುವ ಮತ್ತು ಬಯಕೆ ಹಾಡುಗಳಲ್ಲಿ ಹೆಸರಿಸುವ ಮೂಲಕ ನೈಜತೆಯನ್ನು ಮರೆಯುತ್ತಾರೆ.

ಜನನದ ನಂತರ ಮಗುವಿಗೆ ಮೂರು ದಿನಗಳವರೆಗೂ ತಾಯಿಯ ಎದೆ ಹಾಲನ್ನು ನೀಡುವುದಿಲ್ಲ. ಏಕೆಂದರೆ ಮೊದಲ ಪ್ರಾರಂಭವಾದ ಎದೆಯ ಹಾಲು ಜ್ವರ ಬರುತ್ತದೆ ಎಂಬ ಕಾರಣಕ್ಕಾಗಿ ಈ ಸಮುದಾಯ ಎದೆ ಹಾಲನ್ನು ನೀಡುವುದಿಲ್ಲ. ಆದರೆ ಹರಳೆಣ್ಣೆಯನ್ನು ಮಗುವಿಗೆ ಉಣಿಸುತ್ತಾರೆ. ಆದಾದ ನಂತರ ಬೇವಿನ ಸೊಪ್ಪು ಅರಿಶಿನವನ್ನು ಹಚ್ಚಿ ಮಗುವಿಗೆ ಸ್ನಾನ ಮಾಡಿಸುತ್ತಾರೆ. ಇತ್ತೀಚೆಗೆ ಬಗೆಬಗೆಯ ಸಾಬೂನುಗಳನ್ನು ಬಳಸುತ್ತಾರೆ.

"ಪ್ರಥಮ ಮಜ್ಜನ" ನಂತರ ಮೈಗೆಲ್ಲಾ ಹರಳೆಣ್ಣೆಯನ್ನು ಉಜ್ಜಿ ಸ್ನಾನ ಮಾಡಿಸುತ್ತಾರೆ. ಬಿಸಿ ಬಿಸಿಯಾದ ನೀರಿನ ಸ್ನಾನ ಮಾಡಿಸುತ್ತಾರೆ. ಇದರಿಂದ ಮುಂದೆ ಆ ಮಗು ಬೆಳೆದಾಗ ಅದರ ದೇಹ, ಸ್ನಾಯು, ಕೀಲುಗಳು ಬಲಯುತವಾಗಿರುತ್ತವೆ. ಮತ್ತು ಸದೃಡವಾಗಿರುತ್ತವೆಂದು ಹೇಳುತ್ತಾರೆ.

ಬಾಣಂತಿಗೆ ಶಿಶು ಜನನದ ಐದನೆಯ ದಿನವೇ ಸ್ನಾನ. ಹಳಗೆಯಲ್ಲಿ ಕಾಯಿಸಿದ ನೀರಿಗೆ ಎರಳಿ, ನಿಂಬಿ, ಸೀಬೆ, ಕಹಿಬೇವು ಮುಂತಾದ ,ಸೊಪ್ಪುಗಳಿಂದ 'ಸಕೆನೀರನ್ನು' ತಯಾರಿಸಿಕೊಂಡು ಬಾಣಂತಿಗೆ ಐದನೆ ದಿನದ ಸ್ನಾನದ ನೀರೆರೆಯುತ್ತಾರೆ. ಬಾಣಂತಿಗೆ ಕೊಡುವ ಆಹಾರದಲ್ಲಿ ಪಥ್ಯಗಳನ್ನು ಪಾಲಿಸುತ್ತಾರೆ. ಮೆಣಸಿನ ಸಾರಿನ ಅಡುಗೆಯನ್ನು ಮಾಡಿ ಉಣಬಡಿಸುತ್ತಾರೆ.

ಮಗು ಜನಿಸಿದ ಹನ್ನೆರಡೆಯ ದಿನ ಮನೆಯ ಪಾತ್ರೆ ಪಗಡಗಳನ್ನು ತೊಳೆದು ಸ್ವಚ್ಛಗೊಳಿಸುತ್ತಾರೆ. ಅದು ಸೂತಕ ತೆಗೆಯುವ ಕಾರ್ಯಕ್ರಮವಾಗಿರುತ್ತದೆ. ಆ ಮೂಲಕ ಅವು ಅವರ ನಂಬಿಕೆಗಳಾಗಿವೆ.

ದಾಸಯ್ಯ, ಜಂಗಮಯ್ಯ ಮತ್ತು ಒಡೆಯರಿಂದ, ವಿಭೂತಿಯನ್ನು ಹಾಕಿಸಿ ನಂತರ ಚರ್ಮದ ಚೀಲದಿಂದ ತಮ್ಮ ಕುಲ ದೇವತೆಗಳಾದ ಮದ್ದೂರಮ್ಮ, ದಂಡಿನ ಮಾರಮ್ಮ, ಕಬ್ಬಾಳಮ್ಮ, ಬಿಸಲಮ್ಮ ಇತ್ಯಾದಿ. ದೇವತೆಗಳ ಮಣ್ಣಿನ ವಿಗ್ರಹವನ್ನು ಮಾಡುವುದರ ಮೂಲಕ ಜನನ ಸೂತಕ ಕಳೆಯುವುದನ್ನು ನಾವು ಕಾಣಬಹುದು.

ಹೆಸರಿಡುವ ದಿನ ಬೆಡಗಿಗೆ ಅನುಗುಣವಾಗಿ ದಾಸಯ್ಯ, ಇಲ್ಲ ಜಂಗಮಯ್ಯ ಅಥವಾ ಒಡೆಯರಯ್ಯಗಳನ್ನು ಕರೆಸಿ, ಅವರಿಗೆ ಕಾಣಿಕೆಗಳನ್ನು ನೀಡಿ ಮಾದಯ್ಯ, ಕಾರಯ್ಯ, ಬಿಲ್ಲಯ್ಯ, ಬರಿಯ, ಅಟ್ಟಬರಿಯ, ಯಳಯ, ಚಿಕ್ಕೊಳಮ್ಮ, ಮದ್ದೂರಮ್ಮ, ಶಿವಮಾಧು, ಇತ್ಯಾದಿ ಹೆಸರುಗಳನ್ನಿಡಿಸುತ್ತಾರೆ. ಅವರವರ, ಮನೆ, ದೇವತೆಗಳ ಹೆಸರುಗಳಿಡಿಸುವುದು ರೂಢಿ, ಹಾಗೆಯೇ ಅವರ ಸತ್ತ ಹಿರಿಕರ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. ಇಂದು ನಾಗರೀಕತೆಯ ಪ್ರಭಾವದಿಂದ ಅವರ ಹೆಸರುಗಳು ಸಹ ಬೇಬಿ, ಕುಸುಮ, ರಾಮ, ರಾಜಮ್ಮ ಇತ್ಯಾದಿ ಹೆಸರುಗಳನ್ನು ನವೀನವಾಗಿ ಇಟ್ಟುಕೊಳ್ಳುತ್ತಿದ್ದಾರೆ. ದಾಸಿಮಯ್ಯ ಅಥವಾ ಜಂಗಮಯ್ಯ, ಕೊಟ್ಟ ಹೆಸರನ್ನ ಮಗುವಿನ ಕಿವಿಯಲ್ಲಿ ಹೇಳಿ ನಂತರ ನೆರದವರಿಗೆ ಜೋರಾಗಿ ಹೇಳುತ್ತಾರೆ. ಅಲ್ಲಿಗೆ ಇರುಳಿಗರ ನಾಮಕರಣ ಶಾಸ್ತ್ರ ಮುಗಿಯುತ್ತದೆ.

**ತೊಟ್ಟಿಲ ಶಾಸ್ತ್ರ :**

ನಾಮಕರಣ ದಿನವೇ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡುತ್ತಾರೆ. ಮನೆಯ ಮುಂದೆ ಹಸಿರು ಚಪ್ಪರ ಹಾಕಿ ಅಲ್ಲಿಯೇ ಉತ್ತರ ದಕ್ಷಿಣವಾಗಿ ತೊಟ್ಟಿಲುಕಟ್ಟುತ್ತಾರೆ. ಅದಕ್ಕೆ ಹೂ, ಹಸಿರು ಎಲೆಗಳಿಂದ ಸಿಂಗರಿಸಿ, ಬಗೆ ಬಗೆಯ ಕಾಯಿ ಹೂಗಳನ್ನು ಹರಡಿ ಪೂರ್ವದಿಕ್ಕಿಗೆ ಮುಖ ಮಾಡಿಕೊಂಡು ಮಗುವನ್ನು ತೊಡೆಯ ಮೇಲೆ ಹಾಕಿಕೊಂಡು ಬಾಣಂತಿ ಕುಳಿತುಕೊಳ್ಳುತ್ತಾಳೆ. ಎದುರುಗಡೆ ಇರುಳಿಗರ ಪೂಜಾರಿಯು ತಮ್ಮ ಕುಲದೇವರನ್ನು ಮಣೆಯ ಮೇಲಿಟ್ಟು ಪೂಜೆ ಮಾಡುತ್ತಾರೆ. ನಂತರ ಮೂರು ಅಥವಾ ಐದು ಜನ ಮುತ್ತೈದೆಯರು ತೊಟ್ಟಲು ಪೂಜೆ ಮಾಡಿ ಬಾಣಂತಿಗೆ ಅಕ್ಕಿ ಇಟ್ಟು ಮಗುವನ್ನು ತೊಟ್ಟಿಲಿಗಿಟ್ಟು ತೂಗುತ್ತಾರೆ. ಹಾಗೆ ತೂಗುವಾಗ ಜೋಗುಳದ ಹಾಡುಗಳನ್ನು ಹಾಡುತ್ತಾರೆ. ಅಂತಹ ಜೋಗುಳದ ಹಾಡಿನ ಕೆಲವು ದೃಶ್ಯಗಳು ಈ ಕೆಳಕಂಡಂತಿವೆ.

ತೊಟ್ಟಿಲು ತೂಗುವ ಜೋಗುಳವ ಹಾಡೂವ
ಬನ್ನಿ ನಾರಿಯರ ಕೈ ಹಾಕಿ

ಸಂತೆಗೆಗೋಗುವ ಜಾಣ ನಿಂತ್ ಮಾತಾಡಿ ವೋಗೋ
ಮಂತ್ಯದ ಕಾಳಿಲ್ಲ ಮನಿಯೊಳಗೆ/ತೊಟ್ಟಲು ತೂಗುವ
ಜೋಗುಳ ಹಾಡುವ ಬನ್ನಿ ಬಾರೆಯರೇ ಕೈಯಾಹಾಕಿ

ವೂರ ಕುಂಬಾರ ಗೆಜ್ಜೆ ಬಿಂದಿಗೆ ಮಾಡೋ
ಗುಜ್ಜಾನೆ ಕಂದಮ್ಮನಿಗೆ ಹೊಳೆನೀರ/ತರುವಾಗ
ಗುಜ್ಜರದ ಬಾವಿ ತುಂಬಿ ತುಳಕ್ಯಾವ.

ದೂರಿ ದೂರಿ ದೂರಿಕೇಳಪ್ಪ
ಕೈ ಕಾಮಣ್ಣ ಕಾಲ ಬಾಳೆದಿಂಡು/ಮಗ್ನಗೆ
ದೇವ್ರ ಹೆಸ್ರರಲ್ಲಿ ವೊರಗಾನ

ಹೀಗೆ ತೊಟ್ಟಲು ಶಾಸ್ತ್ರವನ್ನು ಮಾಡುವುದರ ಮೂಲಕ ಮಗುವು ಬೆಳೆದು ದೊಡ್ಡವನಾಗುವ ಸಂದರ್ಭವನ್ನು ಕುರಿತು ಹೇಳುವಂತಹ ಕಾರ್ಯಕ್ರಮವು ಇದಾಗಿರುತ್ತದೆ.

**ಮಂಡೆ ತೆಗೆಸುವುದು :**

ಮಗುವಿಗೆ ಐದು ಅಥವಾ ಏಳನೆ ತಿಂಗಳಿಗೆ ಸರಿಯಾಗಿ ಮನೆ ದೇವರ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಪೂಜೆಸಲ್ಲಿಸಿ ತೀರ್ಥ ಹಾಕಿಸಿಕೊಂಡು ಬರುತ್ತಾರೆ. ಹಾಗೆ ಬಂದ ಮಗುವಿನ ಹುಟ್ಟು ಮಂಡೆಯನ್ನು ಸೋದರ ಮಾವನೇ ತೆಗೆಸಬೇಕೆಂಬ ಪದ್ಧತಿ ಇರುಳಿಗರಲ್ಲಿದೆ. ಸ್ವತಃ ಕತ್ತರಿಯನ್ನು ಹಿಡಿದು ತಲೆಕೂದಲನ್ನು ಬೋಳಿಸುತ್ತಾನೆ. ಸೋದರ ಮಾವನಿಗೆ ಹೊಸ ಬಟ್ಟೆಯನ್ನು ತಂದು ಕೊಡುವುದರ ಮೂಲಕ ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ಮಾಡಲಾಗುತ್ತದೆ.

ಇರುಳಿಗರಲ್ಲಿ ಸಾಮಾನ್ಯವಾಗಿ ಕೂದಲು ತೆಗಿಸುವ ಕಾರ್ಯಕ್ಕೆ ಬಂದ ಹೆಂಗಸರು ಮುಗಿದ ಮೇಲೆ ಏಳು, ಒಂಬತ್ತು ಅಥವಾ ಹನ್ನೊಂದನೆ ತಿಂಗಳು ತುಂಬಿದ ಕೂಡಲೇ ಗಂಡನ ಮನೆಗೆ ಕರೆದುಕೊಂಡು ಹೋಗುವುದು ವಾಡಿಕೆಯಾಗಿದೆ. ಕಾಡು ಪೂಜಾರಿಗಳೆಂದು ಕರೆಯಿಸಿಕೊಳ್ಳುತ್ತಿದ್ದ ಇವರು ತೊಟ್ಟಿಲು ಸಹಿತ ಮಗು ಬಾಣಂತಿಯನ್ನು ಕರೆದುಕೊಂಡು ಹೋಗಿ ಕಾಡಿನ ಒಂದು ಮರದ ಕೆಳಗೆ ಕೂಡಿಸುತ್ತಿದ್ದರು ಆದರೆ ಆಧುನೀಕರಣದ ಭರಾಟೆಯಿಂದಾಗಿ ಅವೆಲ್ಲವೂ ಸಂಪೂರ್ಣವಾಗಿ ಮರೆಯಾಗುತ್ತಿರುವುದು ಕಂಡು ಬರುತ್ತದೆ.

**ಋತು ಸಂಬಂಧಿ ಸಂಪ್ರದಾಯಗಳು :**

ಪ್ರಕೃತಿ ದತ್ತವಾಗಿ ವಯಸ್ಸಿಗೆ ಬಂದ ಹೆಣ್ಣು ಮಗಳೊಬ್ಬಳು ಋತಿಮತಿಯಾಗುವುದನ್ನು ಇರುಳಿಗರು ನಮ್ಮ ಹುಡುಗಿ ದೊಡ್ಡವಳಾದಳು, ಮೈನೆರೆದಳು, ವೃಷಾಂತಿಯಾದಳು ಇತ್ಯಾದಿ ಹಲವಾರು ರೀತಿಯಾಗಿ ಕರೆಯುತ್ತಾರೆ. ಸುಮಾರು ೩೦-೪೦ ವರ್ಷಗಳ ಹಿಂದೆ ಮೈನೆರೆದ ಹೆಣ್ಣುಮಗಳನ್ನು ತಮ್ಮ ಗೂಡಿನಿಂದ ಹೊರಗಿಡುತ್ತಿದ್ದರು. ಆದರೆ ಇಂದು ಮನೆಯ ಪಕ್ಕದಲ್ಲಿ, ಗೂಡ್ಲನ್ನು ನಿರ್ಮಿಸಿ, ಬಾಳೆಹಣ್ಣು, ಹಾಲನ್ನು, ಸಣ್ಣ ಮಕ್ಕಳ ಬಳಿ ಕೊಟ್ಟು ಕಳುಹಿಸಿ ಅದನ್ನು ತಿನ್ನುವಂತೆ ಸೂಚಿಸುತ್ತಾರೆ. ಆಗ ಮೈನೆರೆದ

ಹೆಣ್ಣಿಗೆ ಗುಡ್ಲಲ್ಲಿ ಕೂಡುತ್ತಾರೆ. ಹಿಂದೆ ಋತುಮತಿಯಾದ ಹೆಣ್ಣೊಬ್ಬಳನ್ನು ಬಿಟ್ಟು ಬರುತ್ತಿದ್ದರು, ಆದರೆ ಇತ್ತೀಚೆಗೆ ಮನೆಯ ಯಜಮಾನಿ ಅವಳ ಜೊತೆಗೆ ಇರುವುದು ಕಂಡುಬರುತ್ತದೆ. ಮಗುವಿನ ಜನನದ ಸಂದರ್ಭದಲ್ಲಿ ಕಳೆಯುವ ಸೂತಕದಂತೆ ಇಲ್ಲಿಯೂ ಸಹ ಸೂತಕವನ್ನು ಕಳೆಯುತ್ತಾರೆ.

ಮಡಿಲು ತುಂಬುವ ಅತ್ತಿ, ಅಲೆ, ಬೇವು, ಅಂಕೋಲೆ ಸೊಪ್ಪುಗಳ ಗುಡಿಲು ಹಾಕುವ, ಮುತ್ತೈದೆಯರು ಅರಿಶಿನ-ಕುಂಕುಮ ಹಚ್ಚಿ ನೀರೆರವ ಎಲ್ಲಾ ಸಂಪ್ರದಾಯಗಳು ಅವರ ಹಾಡುಗಳಲ್ಲಿ ದಾಖಲಾಗಿರುತ್ತದೆ. ಹಾಗೆ ಹಾಡುವ ಕೆಲವು ಒಸಗೆ ಪದಗಳು ಹೀಗಿದೆ.

ಅಂಬೆ ಗಿಡದಾಗ ರಂಬೆ ಮೈನಾರೆದಾಳ್
ಅಂಬೆ ಮರದ ಚಿಗಲಿಯೂ ! ತಂಬಿಟ್ಟ್‌ನುಂಡೆ
ಬಾಲೇಗೆ ಡಲು ಗಿಡುದಾದೆ

ಅತ್ತಿ ಆಲದ ಸೊಪ್ಪು ಮತ್ತೆಬೇವಿನ ಸೊಪ್ಪು
ಅತ್ತೇಯ ಮಗನೇ ತರಬ್ಯಾಕು !ಅಂಕೋಲೆಸೊಪ್ಪು
ಒಪ್ಪ್‌ರಕೆ ಮುಂದೆ ನಿಲ್ಲ್‌ಬೇಕು
ಉತ್ತೂರ ನಾಡೋರಂತೆ ತಾಯಿ ಸ್ವಾದ್ರವಂತೆ
ಆನೇಯ ಮ್ಯಾಲೆ ಒಸುಗೇಯಾ !ಏರಿಕೊಂಡು
ಅದರ್ ತಾಯಮ್ ಮಾಡವಳೆ ಏಸಗೆಯಾ

ಯ್ಯಾಲಕ್ಕಿ ಎಳ್‌ಕಡಲೇ ಗೊನೆಯಬಾಳೇಹಣ್ಣ್
ಅರುವಾಣ್‌ದೇಲವೇ ಬಗೆ ಬಗೇ !ಹೆಣ್ಣಮ್ಮ
ಅರಿಯಾದ ಬಾಲೆ ಮಡುಲೊಡೆ
ಹೀಗೆ ಒಸಗೆಯ ಸಂಬಂಧಿ ಆಚರಣೆಗಳು ಇರುಳಿಗರಲ್ಲಿ ಕಂಡುಬರುತ್ತದೆ.೪೦

**ವಿವಾಹ ಸಂಬಂಧಿ ಆಚರಣೆಗಳು :**

ಮಾನವನ ಜೀವನದಲ್ಲಿ ಅತ್ಯಂತ ಮಹತ್ವದ ಘಟ್ಟವೆಂದರೆ ಮದುವೆ ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನ ವಂಶಾಭಿವೃದ್ಧಿಗಾಗಿ "ಮದುವೆ" ಎಂಬ ಸಂಪ್ರದಾಯವೊಂದನ್ನು ರೂಢಿಸಿಕೊಂಡು ಬರುತ್ತಿದ್ದಾನೆ. ಈ ವಿವಾಹ ಆರೋಗ್ಯಕರ ಸಮಾಜದ ನಿರ್ಮಾಣಕ್ಕಾಗಿ ದಾರಿ ಮಾಡಿಕೊಟ್ಟಿತು. ಹೆಣ್ಣು ಗಂಡುಗಳನ್ನು ಕೊಟ್ಟು ತರುವಲ್ಲಿ ಕುಲ, ಜಾತಿ, ಗುಂಪುಗಳು ಸಾಗಿದಾಗ ಮದುವೆಯ ನಿಯಮ ನಿಬಂಧನೆಗಳು ಗಟ್ಟಿಯಾದವು. ತಳವೂರಲು ಅನುಕೂಲಕರವಾಯಿತು.

ಬುಡಕಟ್ಟು ಸಮುದಾಯಗಳಲ್ಲಿ ಕೂಡ ಮದುವೆ ಸಾವು ಹಾಗೂ ದೈವದ ಆಚರಣೆಗಳು ಭಹುಮುಖ್ಯವಾದವು. ಇರುಳಿಗರಲ್ಲಿ ಬಹು ಹಿಂದೆ ಮದುವೆ ಎಂಬುದು ಹಿರಿಯರು ಹೆಣ್ಣು, ಗಂಡನ್ನು ನೋಡುವುದು. ಶಾಸ್ತ್ರಗಳು ಯಾವುದೂ ಇರಲಿಲ್ಲ, ಆದಿಮ

ಸಂಸ್ಕೃತಿಯ ಒಬ್ಬ ಹುಡುಗ, ಒಬ್ಬ ಹುಡುಗಿಯನ್ನು, ಮೆಚ್ಚಿ ಹಿರಿಯರಿಗೆ ತಿಳಿಸುತ್ತಿದ್ದ, ಹಿರಿಯರ ಸಮ್ಮುಖದಲ್ಲಿ ಆ ಹುಡುಗಿಯ ಕೈ ಹಿಡಿದು ಒಂದು ಮರವನ್ನು ಪ್ರದಕ್ಷಿಣೆ ಹಾಕಿ ಕೈ ಮುಗಿದರೆ ಅವರ ವಿವಾಹಗಳು ಮುಗಿಯುತಿತ್ತು. ಅಲ್ಲದೆ ಮೆಚ್ಚಿದ ಹೆಣ್ಣುಗಂಡುಗಳು ಕಾಡಿನ ಗುಹೆಗಳಿಗೆ ಹೋಗಿ ಅನಂತರ ಮಕ್ಕಳೊಂದಿಗೆ ಹಿಂದುರಿಗಿ ಬರುತ್ತಿದ್ದರು. ಇತ್ತೀಚೆಗೆ ಇವೆಲ್ಲವೂ ಅವರಲ್ಲಿ ಇಲ್ಲವಾದರೂ, ಕೆಲವು ಆಂತರಿಕ ಬದಲಾವಣೆಗಳಿಗೆ ಒಳಪಟ್ಟಿವೆ. ಐವತ್ತು ವರ್ಷಗಳಿಂದೆ ಮೂರು ದಿನಗಳು ನೆಡೆಯುತ್ತಿದ್ದ ಮದುವೆ ಕೆಲವೇ ವರ್ಷಗಳಲ್ಲಿ ಬದಲಾವಣೆಗಳಾಗಿರುವುದು ಕಂಡುಬರುತ್ತವೆ.

**ಹೆಣ್ಣು ನೋಡುವುದು :**

ಸಾಮಾನ್ಯವಾಗಿ ರಾತ್ರಿಯ ಹೊತ್ತು ಇರುಳಿಗರು ಹೆಣ್ಣು ನೋಡಲು ಹೋಗುವುದು ವಾಡಿಕೆಯಾಗಿದೆ. ಬೇರೆಯ ವ್ಯಕ್ತಿಗಳಿಂದ ಇಂಥಹ ಊರಿನಲ್ಲಿ ಒಂದು ಹೆಣ್ಣಿದೆ, ನಿಮ್ಮ ಹುಡುಗನಿಗೆ ತೋರಿಸಿ, ಋಣಾನುಬಂಧ ಕೂಡಿ ಬಂದರೆ ಮದುವೆ ಮಾಡಿಕೊಳ್ಳಬಹುದು ಎಂಬ ಪ್ರಸ್ತಾಪ ಬಂದ ಮೇಲೆ ಆ ಹೆಣ್ಣಿನ ಬಗೆಗೆ ಅಕ್ಕಪಕ್ಕದವರಿಂದ ವಿವರಗಳನ್ನು ಪಡೆದು, ಗಂಡಿನ ತಂದೆ, ತಾಯಿ, ಅಜ್ಜಿ, ತಾತ ಅಂದರೆ ಗಂಡಿನ ಹಿರಿಯರು ಹೋಗುತ್ತಾರೆ. ಹಾಗೆ ಹೆಣ್ಣು ನೋಡಲು ಹೋಗುವ ಹಿಂದಿನ ರಾತ್ರಿ ಕಾಡಿಗೆ ಹೊಗಿ ಉಗುನಿ ಹಂಬೋದರ ಕುಡಿ ಚಿವುಟಿ, ಅರಿಶಿನ-ಕುಂಕುಮ ಹಚ್ಚಿ, ಅದರ ತುದಿಗೆ ಒಂದು ಬಿಳಿ ಬಟ್ಟೆಯನ್ನು ಭದ್ರವಾಗಿ ಕಟ್ಟಿ ಬರುತ್ತಾರೆ. ಮಾರನೆ ದಿನ ಹೋಗುವಾಗ, ಆ ಉಗುನಿಹಂಬಿನ ಕುಡಿಯನ್ನು ನೋಡುತ್ತಾರೆ. ಕುಡಿ ಚಿಗುರಿದ್ದರೆ ಸಂಬಂಧ ಬೆಳಸಬಹುದು ಎಂತಲೂ, ಕುಡಿ ಒಣಗಿ ಹೋಗಿದ್ದರೆ, ಆ ಸಂಬಂಧ ಕೂಡಿ ಬರುವುದಿಲ್ಲವೆಂದು ತೀರ್ಮಾನಿಸುತ್ತಿದ್ದರು. ಸುಟ್ಟರಾಗಿರೊಟ್ಟಿಯನ್ನು ಕಟ್ಟಿಕೊಂಡು, ಸಂಜೆಯ ತಂಪಿನಲ್ಲಿ ಹೊರಟು, ಮಧ್ಯ ದಾರಿಯಲ್ಲಿ ರೊಟ್ಟಿ ತಿಂದು ನೀರು ಕುಡಿದು ಹೆಣ್ಣಿನ ಊರು ತಲುಪುತ್ತಿದ್ದರು. ಅಲ್ಲಿ ಹೆಣ್ಣಿನವ್ರ ಇಂತಹ ಸೀಮೆಯವರು ನಿಮ್ಮ ಮನೆಯಲ್ಲಿ ಮದುವೆಗೆ ಬಂದ ಹುಡುಗಿ ಒಂದಿದೆಯಂತೆ, ಆದುದರಿಂದ ಹೆಣ್ಣು ನೋಡುವುದಕ್ಕೆ ನಿಮ್ಮ ಮನೆಗೆ ಬಂದಿದ್ದೇವೆ ಎನ್ನುತ್ತಿದ್ದಾರೆ. ಅಂದು ರಾತ್ರಿ ಏನನ್ನೂ ತಿನ್ನದೇ ಬರಿ ನೀರನ್ನು ಮಾತ್ರ ಕುಡಿದು ಅಲ್ಲೆ ಉಳಿದುಕೊಳ್ಳುತ್ತಿದ್ದರು. ಮರುದಿನ ಹುಡುಗನನ್ನು ಕಳುಹಿಸಿಕೊಡುತ್ತೇವೆ ಎಂದು ಹೇಳಿ ಹೋಗುತ್ತಿದ್ದರು. ಹೆಣ್ಣು ನೋಡಲು ಬಂದಂತಹ ಹುಡುಗನನ್ನು ಚೇಡಿಸುವುದಕ್ಕೆ ಇರುಳಿಗರಲ್ಲಿ ಹಾಡುತ್ತಿದ್ದಂತಹ ಹಾಡುಗಳು ಈ ಕೆಳಕಂಡಂತಿವೆ.

ನಮ್‌ಚೆಲಿವಯ್ಯಂಗೆ ಕಟ್ಟಿದ್ ಬುತ್ತಿ ಎತ್‌ಕೊಂಡ್
ಹೊತ್ತೆಣ್ಣು ಪುರಕೆ ಹೆಣ್‌ಗೋದ್ರು ಸೊಬಾನವೇ
ಹೊತೆಗೆ ಪುರಕ್ಕೆ ಹೆಣ್‌ಗೋದ್ರು ನಮ್‌ಬೀಗರು

ಹೆಣ್ಣನ್ ಮ್ಯಾಲೆಣ್ಣ ಕೊಡೋರಂತೇ ಮದುವಣ್ಣ
ಲಗ್ಗೆ ಚೆಂಡಾಡಿ ಗೆಲುಬಾರೋ ಸೊಬಾನವೇ
ಲಗ್ಗೆ ಚೆಂಡಾಡಿ ಗೆಲು ಬಾರೋ ಸೊಬಾನನೇ

ಅಳ್ಳಾಗ್ಲು ಕಾಯಿ ಬಿಲ್ವ ಪತ್ರೆ ಮೂಗುಳ್ಗೇರು
ಅಲ್ಲಿ ಚೆಲುವಯ್ಯ ಕಟ್ಟಿದ ಬುತ್ತಿ ಸೊಬಾನನೇ
ಅಲ್ಲಿ ಚೆಲುವಯ್ಯ ಕಟ್ಟಿದ ಬುತ್ತಿ ೪೧

ಹೆಣ್ಣನ್ನು ಹುಡುಕಿಕೊಂಡು ಹೋಗುವ ಮದುವೆಯ ಹುಡಗನ್ನು ಹೆಣ್ಣಿನ ಕಡೆಯವರು ಈ ರೀತಿಯಾಗಿ ಜರಿಯುತ್ತಾರೆ. ಹೀಗೆ ಮದುವೆಯ ಸಮಾರಂಭದಲ್ಲಿ ಜರುಗುವ ಹಸಮಣೆ, ಶಾಸ್ತ್ರಧಾರೆ.ಮೂಹೂರ್ತ, ತಣಿಗೆಶಾಸ್ತ್ರ ,ಈಳ್ಯತಿದ್ದವಂತಹ ಶಾಸ್ತ್ರ, ದೇವರ ಬಿಡುವುದು, ಸೋಬನ, ಬಾಗಿಲು ತಡೆಯುವ ಶಾಸ್ತ್ರ ಹೆಣ್ಣು ಕಳುಹಿಸುವುದು ಇತ್ಯಾದಿ ಆಚರಣೆಗಳು ಇವರಲ್ಲಿ ಕಂಡು ಬರುವುದು.

ಇರುಳಿಗರಲ್ಲಿ ಕೂಡಿಕೆ ವಿವಾಹ ಪದ್ಧತಿ ರೂಢಿಯಲ್ಲಿರುವುದನ್ನು ಅವರು ಪ್ರಸ್ತಾಪಿಸುತ್ತಾರೆ. ಪ್ರಾಯ ಮುಗಿಯುವ ಮುನ್ನ ಗಂಡ ಸತ್ತ ಹೆಣ್ಣು, ಅಥವಾ ಹೆಂಡತಿ, ಸತ್ತ ಗಂಡ ಮರುಮದುವೆಯಾಗಬಹುದಾದ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು.

ಈ ಮರು ಮದುವೆಯನ್ನು 'ಕೂಟ್ಲೆ' ಅಥವಾ 'ಕೂಡಿಕೆ' ಎನ್ನುತ್ತಾರೆ. ಕೂಡಿಕೆ ವಿವಾಹವನ್ನು ಕುರಿತು ಎಲ್.ಕೆ ಅನಂತಕೃಷ್ಣ ಐಯ್ಯರವರು ಹೀಗೆ ದಾಖಲಿಸುವ ಪ್ರಯತ್ನವನ್ನು ಮಾಡುತ್ತಾರೆ. "Widows are allowed to remarry under KUDIKE form any number of times and the ceremonies connected there with are confined to a single day A bachelor is allowed to marry a widow. But her deceased husband's brothers are prohibited form Marrying her. Except the prohibition that the remarried widow should not handle a KALASA in the regular Marriage ceremonies, no disabilitas are attached to her or her issue by her remarriage"೪೨

ಕೂಡಿಕೆ ವಿವಾಹವು ಯಾವುದೇ ಕೆಟ್ಟ ಭಾವನೆಗಳಿಲ್ಲದೆ ಇರುವುದರಿಂದ ಇದೊಂದು ಪ್ರಗತಿಪರ ಮನೋಭಾವನೆಯಾಗಿದೆ.

**ಮರಣ ಸಂಬಂಧಿ ಆಚರಣೆಗಳು :**

ಮಾನವನ ಹುಟ್ಟು ಹಲವಾರು ಹಂತಗಳಲ್ಲಿ ಪಸರಿಸಿವೆ. ಏನೆಲ್ಲಾ ಕರ್ಮಾದಿಗಳು ಮುಗಿದ ನಂತರ ಮನುಷ್ಯನಿಗೆ ಸಾವು ಬರುವುದು ನಿಶ್ಚಯ ಹುಟ್ಟಿದ ಮನುಷ್ಯ ಒಂದು ದಿನ ಸಾಯಲೇಬೇಕು. ಸಾವಿನ ಸಂದರ್ಭದಲ್ಲಿ ಪ್ರಯೊಂದು ಧರ್ಮ, ಜಾತಿಯ ಜನರೂ ತಮ್ಮ ಜನಾಂಗದ ಮನುಷ್ಯನ ಸಂಸ್ಕಾರ ಪದ್ಧತಿಗಳಲ್ಲಿ ತಮ್ಮದೇ ಆದ ಆಚರಣೆ ಸಂಪ್ರದಾಯಗಳನ್ನು ತಪ್ಪದೇ ಅಳವಡಿಸಿಕೊಂಡು ಬರುತ್ತಿದ್ದಾರೆ.

ನಾಗರೀಕ ಸಮಾಜದ ಕೆಲವು ಆಚರಣೆಗಳನ್ನು ಅನುಕರಿಸಿ ಇಂದು

ಸಂಪೂರ್ಣವಾಗಿ ನೂರು ಆಚರಣೆಗಳನ್ನು ಮರೆತ್ತಿಲ್ಲವಾದರೂ ಮೂಲ ಆಚರಣೆಗಳೊಂದಿಗೆ ಕೆಲವೊಂದು ಬದಲಾವಣೆಮಾಡಿಕೊಂಡಿದ್ದಾರೆ.

ಭಾರತೀಯ ಸಂಸ್ಕೃತಿಯಲ್ಲಿ ಈ ಆಚರಣೆಗಳು ಪ್ರಾಮುಖ್ಯತೆ ಇರುವುದು ಕಂಡುಬರುತ್ತದೆ. This rite is an Important as all other rites the passage, because They believe that thought the "sams karas"after the birth one conqvers this earth and through the samskaras after the death the heaven.೪೩

ಸಾವು ಒಂದು ಪ್ರಕೃತಿದತ್ತವಾದ ಕ್ರಿಯೆ, ಮಾನವ ಬದುಕಿರುವಾಗ ಸಮಾಜದ ಒಂದು ಅಂಗವಾಗಿರುತ್ತಾನೆ. ಸಂಸ್ಕೃತಿಗಳನ್ನು ಸಾಮಾಜಿಕ ಸಂಬಂಧಗಳನ್ನು, ಸಮಾಜದ ಏರಿಳಿತಗಳನ್ನು ಅನುಭವಿಸುತ್ತಾನೆ. ಆ ಅನುಭವಗಳನ್ನು ಅವನಿಗೆ ನೀಡಿದ ಸಮಾಜವೊಂದಿರುತ್ತದೆ. ಎಂಬುದನ್ನು ಮರೆಯುವಂತಿಲ್ಲ ವ್ಯಕ್ತಿ ಸತ್ತರೂ, ಸತ್ತಿದ್ದಕ್ಕೂ ಪ್ರತಿಕ್ರಿಯಿಸುತ್ತಾ ಅವು ಹಾಗೆಯೇ ಉಳಿದಿಕೊಂಡಿರುತ್ತದೆ. ಮುಂದಿನ ಪೀಳಿಗೆಗೆ ಆ ಸಂಸ್ಕೃತಿಯನ್ನು ಸಂಪ್ರದಾಯಗಳಾಗಿ ಅಳವಡಿಸಿಕೊಂಡು ಸಣ್ಣ ಪುಟ್ಟ ಮಾರ್ಪಾಡುಗಳೊಂದಿಗೆ ಮುಂದುವರೆಸಿಕೊಂಡು ಹೋಗುತ್ತಿದ್ದಾನೆ.

ಕಲ್ಲುಸೇವೆ ಇರುಳಿಗರಲ್ಲಿ ಕಂಡು ಬರುತ್ತಿರುವ ಪದ್ಧತಿಗಳಲ್ಲಿ ವೊಂದಾಗಿದೆ. ಸತ್ತ ವ್ಯಕ್ತಿಯ ದೇಹವನ್ನು ಮಣ್ಣಿಗೆ ಹೂಳುವ ಪದ್ಧತಿ ಇರುಳಿಗರಲ್ಲಿ ಇಪ್ಪತ್ತು-ಮೂವತ್ತು ವರ್ಷಗಳ ಹಿಂದೆ ಇರಲಿಲ್ಲ ಕಲ್ಲು ಮನೆಗಳನ್ನು ನಿರ್ಮಿಸಿ ಸತ್ತ ವ್ಯಕ್ತಿಯ ಶವವನ್ನ ಅದರೊಳಗೆ ಇಟ್ಟು ಕಲ್ಲಿನಿಂದ ಮುಚ್ಚುತ್ತಿದ್ದರು, ಎಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾರೆ.೪೪

ಥರ್‌ಸ್ಟನ್ ತಾನು ಕಂಡ ಇರುಳರಲ್ಲಿ "out side the house of deceased, in which the corpse kept till the time of the funeral, men & women dance to the music of the irula band" ಎನುತ್ತಾ ಸತ್ತವರ ಮನೆಯ ಮುಂದೆ ವಾದ್ಯದ ಬಡಿತ ಇರುಳ ಹೆಣ್ಣು ಮತ್ತು ಗಂಡು ಕುಣಿಯುವ ಬಗೆ ಹೇಳುತ್ತಾರೆ. ಆದರೆ ಈ ಪ್ರಾಂತ್ಯದ ಇರುಳಿಗರು ಆರೀತಿ ಕುಣಿಯುವುದಿಲ್ಲ. ಎಂಬುದು ಸಹಬಾಗಿ ಅವಲೋಕನದ ಸಂದರ್ಭದಲ್ಲಿ ತಿಳಿದು ಬರುತ್ತದೆ.

## ಹಕ್ಕಿಪಿಕ್ಕಿಯವರ ಸಮಾಜ ಮತ್ತು ಸಂಸ್ಕೃತಿ :

ಹಕ್ಕಿಪಿಕ್ಕಿಯವರಲ್ಲಿ ಲಭ್ಯವಾಗುವ ದಂತಕಥೆಗಳು ಹಾಗೂ ಅವರ ಸಾಂಸ್ಕೃತಿಕ ಬದುಕನ್ನು ನೋಡಿದಾಗ ಅವರು ಉತ್ತರ ಭಾರತದ ಮೂಲದವರೆಂಬುವುದು ಸ್ಪಷ್ಟವಾಗುತ್ತದೆ. ರಾಜಾಸ್ಥಾನದ ವಾಗ್ರಾ ಇವರ ಮೂಲ ಸ್ಥಾನವಾದುದ್ದರಿಂದ ಇವರನ್ನು ವಾಗ್ರಿಗಳೆಂದು ಕರೆಯುತ್ತಾರೆ.

ಈ ಜನರಲ್ಲಿ ಬಂಧುತ್ವ ವ್ಯವಸ್ಥೆ ವಿಶಿಷ್ಟವಾಗಿರುತ್ತದೆ. ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಇವರಲ್ಲಿದ್ದು ಎಲ್ಲದಕ್ಕೂ ಹೆಣ್ಣು ಕೇಂದ್ರ ಬಿಂದುವಾಗಿರುತ್ತಾಳೆ. ಈ ಪದ್ಧತಿ ಇನ್ನೂ ಜೀವಂತಿಕೆಯಾಗಿರುವುದು ಕಂಡುಬರುತ್ತದೆ. ರಕ್ತ ಸಂಬಂಧದ ಮೂಲಕ

ಬಂಧುತ್ವಗಳು ನಿರ್ಣಯವಾಗುತ್ತದೆ.

ಕಾಳಿಯಮ್ಮ, ಎಲ್ಲಮ್ಮ, ಕಬ್ಬಾಳಮ್ಮ, ಚಾಮುಂಡಿ ಎಂಬ ಪಂಗಡಗಳನ್ನು ಪ್ರಸ್ತಾಪಿಸುತ್ತಾರೆ.

ಕಾಳಿಯಮ್ಮ ಪಂಗಡದಲ್ಲಿನ ಮೂಲ ವ್ಯಕ್ತಿ ಅಥವಾ ತಲೆಮಾರು ಈ ಕೆಳಕಂಡಂತಿದೆ. ತಲೆಮಾರುಗಳು,

**ಕಾಳಿಯಮ್ಮ ಪಂಗಡ**

'ಜೋ ತಾಬಾ
ಗವರಿಯೋ
ಜಂಗಮ್
ಪಾಚ
ಯವಾರಿಯೋ
ಚಲರಿಯೋಪೂರ್
ಉಬಾರಿಯೋ
ಕರ್ಮಸಿಂಗ್
ಸತ್ರು
ಕುರಿಯೋ
ಚಿಂತಾಮಣಿ
ರೂಪಾಮನ್
ವಾಮೋ
ವಿಟಿಯೋ
ಬಾಜರಾವ್
ಜಾನಬ್
ಕರನ್‌ಸನ್
ಖೊಲೊಂಬೆ
ಕಾಸಮ್‌ಸನ್
ನಜ್ಜೀ
ತಿರವೊಂದೇರೆ
ವೆಂಕಟೇಶ
ಮಗ
ಮೊಮ್ಮಗ

**ಎಲ್ಲಮ್ಮನ ಪಂಗಡ**

ಬೈರವನಾಥ್
ರಾಮ್‌ಭಗತ್

ಫತಾಜಂಬಲ್
ಲಲಿಯಾಲೋದಿ
ಲಾಖಾಬೋಜಾ
ಧನಾವತ್
ಬಯಿಯೋ
ನಾಥೋ
ಟೂರೋ
ಕಾಲ್‌ದೂಳ್
ಆಂಬೋ
ಬದನ್
ಸಚೋವ್ರೋ
ನಾಜಿ
ಮೇರಿಚನ್
ತಿಲ್ಲಣ
ನೇಟೂರ್
ವಾಗೀಲ್
ವೀರೇಂದ್ರ
ಮಂಜ
ಮಗ
ಮೊಮ್ಮಗ

**ಚಾಮುಂಡಿಕುಲ (ಗುಜರಾತ್)**
ಪರಶುರಾಮಪೂತ್
ಶಾಲುಪರ್ವತ
ಬಾರಾಬಯ್‌ಗುಜರಾತ್
ಮೇಡ್ ಬೂಟಾ
ಗಾಂಗಾ
ಪಾಥಿಯೋ
ಹಾಜ
ಉಕ್ಕಡಿಯೋ
ಪೀತಿಯೋ
ಗೋವಿಂದ್‌ಗ
ದೇಯಿದಾಖ್
ರಾಘೋ
ಚಿಗರಾ

ಸೀಲುಸನ್
ಧನ್
ಜಮೇದಾರ್
ಸಪೋಟರೆಡ್ಡಿ
ಮಗ
ಮೊಮ್ಮಗ

**ಕಬ್ಬಾಳಮ್ಮ**
ಕಾಳ್‌ನಾಥ್
ಡಿಂಬಲ್ ಡಿಮ್ಕಿ
ದಾನಿಯ ಕಮರೀಯ
ದಾಡರ್
ಪಂತೀ
ತುಂಡೋ
ಕೀಚಕ್
ಮಾಯೂರಾಮ್
ಪರಶೋ
ಗಾಂಜಲಚನ್
ಕಾದರ್‌ಬಚ್ಚಾ
ಹೊಗ್ನೆ ಗಡ
ಕಲ್‌ಕಟ್ಟ್
ಕೊನ್ನರೆಡ್ಡಿ
ಮಗ
ಮೊಮ್ಮಗ

ರಜಪೂತರನ್ನು ಹಕ್ಕಿಪಿಕ್ಕಿಯೆಂದು ಕರೆದಿದ್ದಾರೆ, ಎಂದು ಹೇಳುವುದರ ಆ ಸಮುದಾಯ ಮೂಲ ತಲೆ ಮಾರುಗಳನ್ನು ಅಭಿವ್ಯಕ್ತಿಸುವುದರ ಮೂಲಕ ಆ ಸಮುದಾಯದಇತಿಹಾಸವನ್ನು ಪ್ರತಿಬಿಂಬಿಸುತ್ತದೆ.

ನ್ಯಾಯಾಂಗ ವ್ಯವಸ್ಥೆಯಲ್ಲಿ ಆ ಸಮುದಾಯದ ವ್ಯಕ್ತಿಯ ಪ್ರಮುಖನಾಗುತ್ತಾನೆ. ದಂಡ ವಿಧಿಸುವುದು ಇತ್ಯಾದಿ. ನಿಷೇಧ ಪ್ರಕ್ರಿಯೆಗಳು ಸಮುದಾಯಗಳುಕಂಡುಬರುತ್ತದೆ.

ಹಕ್ಕಿಪಿಕ್ಕಿಯರು ಮಾದಿಗರು, ಸಾಬರ ಮನೆಗಳಲ್ಲಿ ನೀರು ಕುಡಿಯುವಂತಿಲ್ಲ ಎಂಬ ನೀಷೆಧಗಳಿದ್ದವು. ಆದರೆ ಇಂದು ಅವೆಲ್ಲಾ ಮಾಯಾವಾಗಿದೆ.

ಈ ನ್ಯಾಯ ನಿಯಮಗಳಲ್ಲಿ ಬಹುತೇಕವಾಗಿ ಇಂದಿಗೂ ಜೀವಂತವಾಗಿವೆ. ಕೆಲವು ಸ್ವಲ್ಪ ಸಡಿಲವಾಗಿವೆ. ಇನ್ನೂ ಕೆಲವು ಪೂರ್ತಿಯಾಗಿ ಕೈಬಿಟ್ಟು ಹೋಗಿವೆ.

ಸಾಮಾಜಿಕ ಬದಲಾವಣೆಗಳ ನಡುವೆ ಈ ಬದಲಾವಣೆ ಸರ್ವಸಾಮಾನ್ಯ ಇತ್ತೀಚೆಗೆ ಅವರ ನ್ಯಾಯ ನಿಯಮಗಳು ಅವರ ಬದುಕಿನಂತೆಯೆ ಸರಳವಾಗಿದೆ.

**ಭಾಷೆ ಮತ್ತು ಸಾಹಿತ್ಯ :**

ಹಕ್ಕಿಪಿಕ್ಕಿಯವರ ಭಾಷೆ ಇದನ್ನು ಅವರು "ವಾಗರಿಯೋ' ಎನ್ನುತ್ತಾರೆ. ಅವರು ತಮ್ಮ ಭಾಷೆಯ ಮೂಲದ ಬಗ್ಗೆಯಾಗಿ ಅವರು ಮಾಹಿತಿ ನೀಡುವುದನ್ನು ಈ ತರಹದ ಭಾಷೆಯನ್ನು ತಮ್ಮ ಗುಂಪಿನವರೊಂದಿಗೆ ಬಳಸುತ್ತಾರೆ.

'ಕನ್ನಡ' ಭಾಷೆಯನ್ನು ಪ್ರಮುಖವಾಗಿ ಈ ಜನಾಂಗಗಳು ಬಳಸುತ್ತಾರೆ. ಆದರೆ ಪರಿಪೂರ್ಣವಾದ ಶುದ್ಧ ಕನ್ನಡವನ್ನು ಬಹುಪಾಲು ನಿರಾಕರಿಸುತ್ತಾರೆ.

ಹಕ್ಕಿಪಿಕ್ಕಿಯವರ ಸಾಹಿತ್ಯ ಬಹುವಾಗಿ ವಾಗರಿ ಭಾಷೆಯಲ್ಲಿರುವುದರಿಂದ ಅದನ್ನು ಸಂಗ್ರಹಿಸುವುದು ಸ್ವಲ್ಪ ಕಷ್ಟದ ವಿಚಾರವೇ ಆಗಿದೆ. ಆದರೂ ಕೆಲವು ವಿಚಾರಗಳನ್ನು ಸಂಗ್ರಹಿಸುವ ಕಾರ್ಯವನ್ನು ಮಾಡಲಾಗಿದೆ. ಅವರ ಸಾಹಿತ್ಯ ಸಂಪದ್ಭರಿತವಾಗಿದ್ದರೂ ಸಹ ಹಲವಾರು ಸಾಹಿತ್ಯ ಪ್ರಕಾರಗಳನ್ನು ಹೇಳುವ ಸಾಮರ್ಥ್ಯವುಳ್ಳವರಾದರೂ ಸಹ ಕನಿಷ್ಠ ಒಂದು ಗಂಟೆಯವರೆಗೆ ಕುಳಿತು ಹಾಡು, ಕತೆಗಳನ್ನು ಹೇಳಿಕೊಡುವವರು ಅಪರೂಪ ಅಲೆಮಾರಿತನವೇ ಇವರ ಬದುಕಾಗಿದುದ್ದರಿಂದ, ಇವರ ಸಾಹಿತ್ಯದಲ್ಲಿ ಸ್ವಲ್ಪ ಕೊರೆತೆಯಿದೆ ಎಂದು ಅನಿಸುತ್ತದೆ. ಇತ್ತೀಚೆಗೆ ಒಂದೆಡೆ ನಿಂತು ಅಲೆಮಾರಿ ಜನ ತಮ್ಮ ಜಿವನೋಪಯೋಗಕ್ಕೆ ಹಲವಾರು ಕುಲಕಸುಬುಗಳನ್ನು ಅಳವಡಿಸಿಕೊಂಡಿದ್ದಾರೆ. ಸಾಹಿತ್ಯ ಮತ್ತು ಭಾಷೆಯ ಅಧ್ಯಯನದಿಂದ ಸಂಸ್ಕೃತಿ ಅನುಭವಗಳ ಮಿಶ್ರಣ ನಮಗೆ ಅಭಿವ್ಯಕ್ತವಾಗುತ್ತದೆ.

ಹಕ್ಕಿಪಿಕ್ಕಿ ಜನರಾಡುವ ಭಾಷೆಗೆ ಲಿಪಿಯಿಲ್ಲ ಇದು ಇಂಡೋ ಆರ್ಯನ್ ಮೂಲದ ಭಾಷೆಯಾಗಿದೆ.

ಹಕ್ಕಿಪಿಕ್ಕಿ ಸಮುದಾಯದವರು ಹಾಡುವ ಭಾಷೆಗೆ ಲಿಪಿಯಿಲ್ಲದಿದ್ದರೂ ಮೌಖಿಕವಾಗಿ ಅವರಲ್ಲಿ ಸಾಕಷ್ಟು ಸಾಹಿತ್ಯ ಲಭ್ಯವಾಗುತ್ತದೆ. ಅವರು ಭಾಷೆಯನ್ನು ಬಲ್ಲವರಾಗಿರುವುದರಿಂದ ಸಾಹಿತ್ಯ ಸಂಗ್ರಹದ ಕೆಲಸ ಸುಲಭವಾಗುತ್ತದೆ. ಹಕ್ಕಿಪಿಕ್ಕಿಯರು ಬದುಕಿನ ಬೇಸರವನ್ನು, ಅನುಭವ ಆಲೋಚನೆಗಳನ್ನು, ಕಲ್ಪನೆ ಕತೆಗಳನ್ನು, ತಮ್ಮ ಭಾಷೆಯಲ್ಲಿ ಸೆರೆ ಹಿಡಿದಿದ್ದಾರೆ. ಅವರಲ್ಲಿ ಅಪಾರವಾಗಿ ಮೌಖಿಕ ರೂಪದ ಸಾಹಿತ್ಯವಿದೆ. ತಮ್ಮ ಅಲೆಮಾರಿತನದ ನಡವೆಯೂ ಅವರು ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಬೇಟೆಗೆ ಹೋದಾಗ ವ್ಯಾಪರಕ್ಕೆ ಹೋದಾಗ ಸಮಯ ಕಳೆಯಲು ಕತೆಗಳನ್ನು ಹೇಳುತ್ತಾರೆ. ಹಬ್ಬ ಹರಿದಿನಗಳಲ್ಲಿ ಕಥನ ಗೀತೆಗಳನ್ನು ಹಾಡುತ್ತಾರೆ. ತಪ್ಪಡಿ, ತಾಳ, ಕೊಳಲುಗಳ ರಾಗಗಳನ್ನು ಬಳಸಿಕೊಂಡು ಗಂಟೆಗಟ್ಟಲೇ ಕಥನ ಗೀತೆಗಳನ್ನು ಹಾಡುತ್ತಾರೆ.

ಅವರ ಸಾಹಿತ್ಯವನ್ನು ಗಮನಿಸಿದಾಗ ಅವರ ಮೂಲ ಅಲೆಮಾರಿ ಬದುಕಿನ ಸ್ಪಷ್ಟ ವಿಚಾರಗಳನ್ನು ಸ್ಪಷ್ಟಪಡಿಸುತ್ತದೆ.

ಹಕ್ಕಿಪಿಕ್ಕಿಯರ ಕಂಡುಬರುವ ಕಥಾ ಸಾಹಿತ್ಯ ಈ ಕೆಳಕಂಡಂತಿದೆ.

ಏಕ್ ದೇಖ್‌ನೊ ಏಕ್ ರಾಜಾತೊ ಯೊ ಏಕ್‌ದಿನ್ ಎನೊ ಮಂತ್ರಿ ಸೇನಾಧಿಪತಿ ಯೊ ಗಾಂನ್ನೂ ಅದ್ಮಿ ಖಾರು ಮಳೀನ್ ಏಕ್ ಸಭೆ ಉಯ್ಯಿತೂ. ಯೊ ಸಭೆಮಾ ದೇಖ್‌ನಿ ಸಮಾಚಾರ್ ಚಾಲಿ ಬಿಜು ಉಯ್ಯಿತೂ ಏಕ್ ಮಾಡ್ಯಿ ಖೇಲಾಡಿಯೊ ತೊ ಘಣು ಅಚ್ಛೂ ಖೇಲಿ. ಮಂತ್ರಿ ಸೇನಾಧಿಪತಿ ಯೊಗಾಂನೂ ಲೋಕ್ ಯೊ ಮಾಡ್ಯೀನಾ ಹೊನ್ನು ರೂಪು ಧಾನ್ಯ ಖಾರೂದ್ದಿದು. ರಾಜಾನೆ ಯೊ ಮಾಡ್ಯಿನ ತೂ ಘಣು ಅತ್ಸೂಖೇಲಿ ಮಾರಾ ಮಂತ್ರನೆ ಮಾರಾ ಸೇನಾಧಿಪತಿನೇ ಮಾರಾ ದೇಖ್ನೂ ಅದ್ಮಿಮೆ ಖಾರೂ ವೈಢೂರ್ಯ ಧಾನ್ಯ ದಿದು ಮೇ ತೂ ಶಾತ್‌ಭೋಲಸ್ ಯೊ ದೇವಾನಾ ಮೆ ತಯಾರ್. ಯೊ ರಾಣಿನೇ ಬೋಲಿ ಮೆ ಬೋಲಿಶ್ ತೂ ಖಮ್‌ಜಿಸ್ ಕಿ ಶೂ. ರಾಜಾ ಒಪ್ಪಿಗೊ, ತೂ ಶಾತ್ ಭೋಲಸ್ ಮೆ ಖಂಜಾನಾ ತಯಾರ್ ಯೊ ಖೇಲಿತೆ ಮಾಡ್ಯಿನೆ ಬೋಲಿ ತಾರಿ ಸಿಂಹಾಸನಾ ಘರ್ ಮೆ ಅಂಗ್‌ನೂ. ಸಭೆ ಸೇರಿ ರಹಿದೇಖ್ ತ್ಯೂ ಟೇಂಪರ್ ತದೆ ರಾಜಾನಾ ಘಣು ಮಾನಾಜಾಸ್ ತದೆ ಯೋಚನೆಕರಸ್ ಮೇ ರಾಜ್ಯಾತ್ತೊ ಮೆಹಲಜಾನು ನಕೊತೂ ಮಾರಿ ಸಿಂಹಾಸನಾಘರ್ ಯೊ ಖೇಲಾವಳಿ ಮಾಡ್ಯಿ ಅಂಗ್ನು. ಬೇ ತೀರ್ಮಾನ್ ಉಯ್ಯಿಗಿ ಬೇರೂಸ್ ಟೈಂ ಆದೊ ಸೋಚೊ ಕಿಂ ಕರು ತ್ಯೋ ದಿನ್ ಅಸ್ ದೇಖ್ ದೇಖ್ ನಾ ರಾಜಾನಾ ಆವಾತ್ ಭೋಲಿ ಮೋಕುಲಿಯೊ. ಕೋಣ್‌ಬಿ ಉತ್ತರಕೋದ್ದೋನಿ ಏಕ್ ದೇಖ್‌ನೊ ಮಂತ್ರಿಯೊ ಪ್ರಸ್ನೇನಾ ಕಂಜೀನ್ ಇನೆ ಉತ್ತರ ಶೋಚೊ ಇನೆ ಬಲರಾಕಿತ್ತೆ ಶಾತ್ ಸಿಂಹಾಸನಾಘರ್ ಅಂಗುಸಾಕ್ರಿ ಖಾಲಿ. ಶಾತ್ ತೋಟಿ ಏಕ್ ತಿಟ್ ತೂ ಬಿ ಮುತ್ತರ್ ಘಡಿಗೂತೊ ಇನೆ ಯಾಸ್‌ಧರಿ ಖತರ್‌ನಕ್‌ದೇನೂ. ಯೊ ರಾಜಾನಾ ಆವುತ್ರ ಭೋಲಿಮೋಕ್‌ಲಿಯೊ ಸಭೆ ಸೇರಿಗೊ ರಾಜಾ ಮಂತ್ರಿ ಸೇನಾಧಿಪತಿ ದೇಖ್‌ನೂ ಆದ್ಮಿ ಅಕ್ಕು ಸೇರಿಗೂ ಮಾಡ್ಯಿಅಯ್. ಸಭೆಮಾ ರಾಜಾ ಮಂತ್ರನಾ ಭೋಲಿಯೊ ಮಂತ್ರಿ ಅಪ್ಲಿ ಕಂಡೀಷನ್ ಭೋಲ್ ಮಂತ್ರೀನೆ ದೇಖ್‌ಲಿ ಖೇಲಾವಳಿ ಮಾಡ್ಯಿ ತಾತ್‌ತೋಟಿ ತೂ ಬೋಲ್ ರಾಕೀತೆ ಹಂಗಾನ ಶಾತ್‌ತೊಟಿ ಏಕ್ ತೊಟ್ ಮುತ್ತರ್ ಪಡಿಉತೊ ತುನಾಆಸ್ ಕತರ್‌ನಕ್ ದೀಶ್. ಬಾಳ್ ದ್ಯಾವಾಮ ಯೊ ಮಾಡ್ಯಿ ಡರೀಗಿ. ಬಿಜೂ ಉತ್ತರಾಕಿನೆ ಭೋಲಿಯೂ ಮಂತ್ರಿನೇ ಭೋಲಿಯೂ ತದೆ ಯೊ ಮಾಡ್ಯಿ ಯೊ ಮಂತ್ರೀಸ್‌ನಾ ಒಪ್ಪೀನ್ ಯಾ ಕರ್ಲೇಸ್. ರಾಜಾನಾ ಕೊ ಒಪ್ಪಾನಿ. ರಾಜಾ ಕೆತ್ರೂ ಭೋಲಾತೊಭಿ ಯೊ ರಾಜಾನಾ ಯಾ ಕೊಕರಾನಿ. ಯೊ ಕರಸ್ತೆ ಯಹಾ ಮಂತ್ರೀನೆ ಜೈನ್.

**ಕತೆಯ ಕನ್ನಡ ಅನುವಾದ :**

ಒಂದು ದೇಶದಲ್ಲಿ ಒಬ್ಬ ರಾಜ ಇದ್ದ. ರಾಜ, ಮಂತ್ರಿ ಸೇನಾಧಿಪತಿ, ಹಾಗೂ ಆ ದೇಶದ ಜನರು ಒಟ್ಟಾಗಿ ಒಂದು ಸಭೆ ನಡೆಸಿದ್ದರು. ಆ ಸಭೆಯಲ್ಲಿ ದೇಶದ ಕಷ್ಟ ಸುಖದ ಬಗ್ಗೆ ಮಾತನಾಡಿದರು. ಒಂದು ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತಂದರು. ಒಂದು ಹೆಂಗಸು ಸಂಗೀತ ನಾಟ್ಯವನ್ನು ಸಭೆಯಲ್ಲಿ ಅಡಿ ತೋರಿಸಿದಳು. ಆ ಸಭೆಯಲ್ಲಿ ಮಂತ್ರಿ ಸೇನಾಧಿಪತಿ ಆ ದೇಶದ ಜನರು ಅವಳ ನೃತ್ಯವನ್ನು ನೋಡಿ ಮೆಚ್ಚಿ ಅವಳಿಗೆ ಚಿನ್ನ ಬೆಳ್ಳಿ ಬಂಗಾರ ದವಸ ಧಾನ್ಯಗಳನ್ನು ಕೊಟ್ಟರು. ಆದರೆ ಆ ದೇಶದ ರಾಜ ಅವಳಿಗೆ ಕೇಳಿದನು 'ನಮ್ಮ ದೇಶದ ಜನರು, ಸೇನಾಧಿಪತಿ, ಮಂತ್ರಿಯರು ಎಲ್ಲವನ್ನೂ ಕೊಟ್ಟಿದ್ದಾರೆ. ಆದರೆ

ನೀನು ನನಗೆ ಏನು ಕೇಳುತ್ತೀಯೆ ಕೇಳು ಅದನ್ನು ನಾನು ಕೊಡಲು ಸಿದ್ದನಾಗಿದ್ದೇನೆ. ಆಗ ಆ ನೃತ್ಯದ ಹೆಂಗಸು 'ನಾನು ಕೇಳಿದ್ದನ್ನು ಕೊಡಲು ಸಿದ್ದನಿದ್ದೀಯ' ಎಂದು ಮತ್ತೊಮ್ಮೆ ಪ್ರಶ್ನಿಸಿದಳು. ಅದಕ್ಕೆ 'ಆಯಿತು ನೀನು ಏನು ಕೇಳುತ್ತೀಯ ಅದನ್ನು ಕೊಡಲು ಸಿದ್ದನಾಗಿದ್ದೇನೆ' ಎಂದು ಹೇಳಿದನು. ಆಗ ನೃತ್ಯದ ಹೆಂಗಸು 'ನಾನು ಈ ಸಭಾಂಗಣದಲ್ಲಿಯೇ ನಿನ್ನ ಸಿಂಹಾಸನದ ಮೇಲೆ ಹೇಳಬೇಕು' ಎಂದು ಕೇಳುತ್ತಾಳೆ. ಆದರೆ ರಾಜನಿಗೆ ಇದು ಅವಮಾನದ ಮಾತಾಗಿರುತ್ತದೆ. ಅದನ್ನು ಸಹಿಸಿಕೊಂಡು ಎರಡು ದಿನ ಸಮಯವನ್ನು ಕೇಳುತ್ತಾನೆ. ಆ ಎರಡೂ ದಿನಗಳಲ್ಲಿ ದೇಶದೇಶದ ರಾಜರುಗಳಿಗೆ ಮತ್ತು ಮಂತ್ರಿಗಳಿಗೆ ಈ ವಿಷಯವನ್ನು ತಿಳಿಸುತ್ತಾನೆ. ಆದರೆ ಇದಕ್ಕೆ ಉತ್ತರ ಯಾರಿಂದಲೂ ಬರುವುದಿಲ್ಲ. ಅವನ ಮಂತ್ರಿಯೆ ಇದನ್ನು ಯೋಚನೆ ಮಾಡಿ ಅವಳು ಹೇಳಿರುವುದು ಹೇಳಲು ಮಾತ್ರ. ಆದರೆ ಒಂದು ತೊಟ್ಟು ಸಹ ಉಚ್ಛೆಯನ್ನು ಹೊಯ್ಯುವಂತಿಲ್ಲ ಎಂದು ರಾಜನಿಗೆ ಸಲಹೆ ಕೊಟ್ಟನು. ಮಾರನೆಯ ದಿನ ಸಭೆ ಸೇರಿತು. ಆ ನೃತ್ಯದ ಹೆಂಗಸು ಸಹ ಬಂದಳು. ಅವಳ ಮುಂದೆ ಮಂತ್ರಿ ಈ ಉತ್ತರವನ್ನು ತಿಳಿಸಿದನು. ಅವಳು ಹೆದರಿ ರಾಜನಿಗೆ ಮೆಚ್ಚುಗೆ ಕೊಡದೆ ಮಂತ್ರಿ ಮೆಚ್ಚಿಕೊಂಡ ತನ್ನ ಮನಸ್ಸನ್ನು ಅವನಿಗೆ ಒಪ್ಪಸುತ್ತಾಳೆ. ರಾಜ ಅವಳನ್ನು ಮದುವೆಯಾಗಲು ಹೇಳುತ್ತಾನೆ. ಆದರೆ ಅವಳು ರಾಜನನ್ನು ಒಪ್ಪದೆ ಮಂತ್ರಿಯನ್ನು ಮದುವೆಯಾಗುತ್ತಾಳೆ.

**ಹಕ್ಕಿಪಿಕ್ಕಿಯವರ ಕಾವ್ಯ :**

ದಂಡಿನ ಮಾರಮ್ಮನನ್ನು ಕುರಿತಾದ ಕಾವ್ಯ

ದಂಡಿನ ಮಾರಮ್ಮ ನೀ ಜತರಾ ಆದಿ
ಆವೋ ಜಾಯಿ ಭಾಯೆನಿರೆ ೧

ದಂಡಿನ ಮಾರಮ್ಮನೀ ಜತರಾ ಜಾಯ್
ದಂಡಿನ ಮಾರಮ್ಮ ನೀ ಆಶೀರ್ವಾದಲೇ
ಅಕ್ಕಾಯೆ ಅಸಲ್ ಕರಿ ಪಾಳಜ್
ಕಿಯೀ ಆಶೀರ್ವಾದ ಲೇ ಆವೀಷು ೨

ದಂಡಿನ ಮಾರಮ್ಮ ನೀ ಜತರಾ ಆವಾನು
ದಂಡಿನ ಮಾರಮ್ಮ ನೀ ಜತರಾ ಆವಾನು
ಆಕ್ಕಾಯ್ ಭಳಿಯಾಂ ಆಫ್ಲೆಜಾಯ್ ೩

ದಂಡಿನ ಮಾರಮ್ಮ ನೀ ಜತರಾನು
ಅಕ್ಕಾಯ್ ಭಳಿ ಅಪಣಿಶುಂವಾತಾಕರುವಾಂಯ್ ಕರುಂಷು
ಆಫ್ಲೆನೆವರೆ ಕದ್ದೆ ಬಳಿಂಷು ೪

ಆದ್ಮೀನಿ ಜಾತ್ ಚಹಾತೋಡಿ ಸಾ

ಉತರಾ ಅಕ್ಕಾಂಯ್ ಭಾಯಿ ಭಂಡ್ರು. ಭಳೀ ರಹಂಷೀ
ಉಗು ಮಿಣುತೊ ಧರೀ ನಡುಭೋಣು ತೋಡಿ
ರವ್ವಾನಾ ಭಾಯಿ ಭಂಡ್ರು ಅಕ್ಕಾಯ ಬಳರೆಂಷೀ ೫

**ಕನ್ನಡಾನುವಾದ**

ದಂಡಿನ ಮಾರಮ್ಮನ ಜಾತ್ರೆ ಬಂತು
ಬನ್ನಿ ಹೋಗೋಣ ಅಣ್ಣೋರೆ
ಬನ್ನಿ ಹೋಗೋಣ ಅಕ್ಕೋರೆ ೧

ದಂಡಿನ ಮಾರಮ್ಮನ ಜಾತ್ರೆಗೆ ಹೋಗಿ
ದಂಡಿನ ಮಾರಮ್ಮನ ಆಶೀರ್ವಾದ ಪಡೆದು
ಎಲ್ಲರನ್ನು ಚೆನ್ನಾಗಿ ಸಾಕು ಎಂದು ಕೇಳಿ
ಆಶೀರ್ವಾದ ಪಡೆದುಕೊಂಡು ಬರೋಣ ೨

ದಂಡಿನ ಮಾರಮ್ಮನ ಜಾತ್ರೆ ಆಗುವುದು
ದಂಡಿನ ಮಾರಮ್ಮನ ಜಾತ್ರೆ ಆಗುವುದು
ಎಲ್ಲರೂ ಕೂಡಿ ನಾವು ಅಲ್ಲಿಗೆ ಹೋಗೋಣ ೩

ದಂಡಿನ ಮಾರಮ್ಮನ ಜಾತ್ರೆಗೆ
ಎಲ್ಲ ಅಣ್ಣ ತಮ್ಮಂದಿರು ಅಕ್ಕ ತಂಗಿಯರು ಬಂದಿರುತ್ತಾರೆ.
ಎಲ್ಲರನ್ನು ನೋಡಿ ಮಾತಾಡಿಸಿ ಬರೋಣ
ನಾವು ಮತ್ತೆ ಎಂದು ಕೂಡುತ್ತೇವೆ ಎಂದು ಕೇಳೋಣ. ೪

ಹಕ್ಕಿಪಿಕ್ಕಿ ಜಾತಿ ಎಲ್ಲಿಯವರೆಗೆ ಇದೆ
ಎಲ್ಲಾ ಕಡೆಯಿಂದ ಅಕ್ಕ ತಂಗಿಯರು ಅಣ್ಣ ತಮ್ಮಂದಿರು ಕಲೆಯುತ್ತವೆ.
ನಾವು ಎಲ್ಲರೂ ಕಲೆತು ದೇವಿ ಸೇವೆ ಮಾಡಿ ಆಶೀರ್ವಾದ ಪಡೆಯೋಣ.

ಸೂರ್ಯ ಹುಟ್ಟುವ ದಿಕ್ಕಿನಿಂದ ಹಿಡಿದು ಮುಳುಗುವವರೆಗಿನ
ಎಲ್ಲ ಕಡೆಯ ಜನ ಬಂದಿರುತ್ತಾರೆ. ೫
ಕಾಡು ಕೋಳಿ ಜೋಡಿನವಿಲು
ವಾಗಲಮ್ಮ ವಾಂಗಲೆಡಿಯಾಲಮ್ಮ
ಸಣ್ಣ ಸೂಜಿ ದಪ್ಪಪಟಣ
ವಾಂಗಲಮ್ಮ ವಾಂಗಲೆ ಡಿಯಾಲಮ್ಮ
ಮ್ಯಾಲೆ ಚಪ್ಪರ ಕೆಳಿಕ ಬಕರ
ವಾಂಗಲಮ್ಮ ವಾಂಗಲೆ ಡಿಯಾಲಮ್ಮ .೪೫

ಚ್ಹಾಲಿಬಾಯ್
ಚ್ಹಾಲಿಬಾಯ್
ಬೀರೇ ಪೀಯಾಸ್ ಕಿ, ಬ್ರಾಂಡಿ ಪಿಯಸ್
ಪಾವೇ ಖಾಸ್ ಕೀ, ತು ನಾಜಿ ತೂಖಾಸ್ ಕೀ
ದೇವಿ ಕೊಯತೀನ್ ತಾರಾಕನಾ ಜಮಿನ್ ಕೊಯವಿ
ತರಗನಾ ಆಸ್ತೀನ್ ಕ್ವೊಯಿಂತೆ ಮೆ ಕಿಯೆ ನಂಬು
ಕಿಂ ಕರ್ ಶೂ ಅಪನು ಜೋಡು ಉಯ್ಯಿಗುತೊ
(ನಡಿರಿ ಅಕ್ಕ
ನಡಿಂ ಅಕ್ಕ
ಬೀರು ಕುಡಿಯೋಣ ಬನ್ನಿ
ಸೊಪ್ಪು ತಿಂತೀರಾ ಮಾಂಸಾತಿಯೋಣ
ನಿಮ್ಮತ್ರ ದೇವರೂ ಇಲ್ಲ ಜಮೀನೂ ಇಲ್ಲ
ನಿನ್ನತ್ರ ಆಸ್ತಿ ಇಲ್ಲವಲಾ ನಿನ್ನ ಹೇಗೆ ನಂಬಲಿ
ನಾವು ಜೊತೆಯಾದರೆ
ಏನ್ ಮಾಡೋದು *
ಲಾಲ್ ದೋರೆ ಮೆಟ್ಟು ಪಳ್ಯಾಮ್
ದಾತಿ ಬೋಟೋಸ್ಲ ಚಿರಮಿಲಾಗಳ್ನ
ದಾತಿ ಉಠೋದ ಹೊಳೆ ಓ ಜಾಯ್
ಬಂಡೇಶ್ ಕುಂಗಲ ೪೬
(ಇವನೆ ಇವನೆ ಮೊಲ ಕುಂತಕಂಡಿತ್ತೆ
ಬಲೆ ತಗಂಡು ಬಾ, ಬಲೆ ಸರಿಮಾಡು
ಬಲೆಹಾಕನ ಎದ್ದು ಹೋಗಿ ಬಿಡ್ತು
ಮೊಲದ ತೋಲ್ವತಿನ್ನು)

**ಹಕ್ಕಿಪಿಕ್ಕಿ ಗಾದೆ ಮಾತುಗಳು**

* ಮಿಳಾತೋ ಶಿಕಾರ ನಾತೋ ಭಿಕಾರಿ
(ಸಿಕ್ಕರೆ ಶಿಕಾರಿ ಸಿಗದಿದ್ದರೆ ಭಿಕಾರಿ)
* ಕುಕ್ಕಡೋ ಪೂಂಚಣ ಮಸಾಲೋ ನಾಟಚ್ಕ
(ಹುಂಜಗ ಕೋಳಿ ಮಸಾಲೆ ಅಂತಾರೇನು)
* ಆದ್ಮೀನ  ಆವಣ ಕೋನ ಆಂದ
(ಮನುಷ್ಯನಿಗೆ ಬರದೆ ಮತ್ತಾರಿ ಒಡತಿದ)
* ತೀನ್ ವಾರೋ ಬರೋವಣೋ ತದೆ ತಾರೋ ಖರಾಜ್ ಪಿಟ್‌ನು
(ಮೂರುವಾರ ಕೋಡಬೇಕು ನಿನ್ನ ಸಾಲ ತೀರಬೇಕು)
* ಪಾಪಿರು ಪಾಪಿ ಧರ್ಮನು ಧರ್ಮಾನ

(ಪಾಪಿಯರು ಪಾಪಿಗೆ ಧರ್ಮಿಯದ ಧರ್ಮಿಗೆ)
* ದೇಸಣ ಲಾರ ವೇಸ
(ದೇಶದಂತೆ ವೇಸ)
* ಆಜಾಸೆ ದೇವ್‌ನೂ ಮಾರುಜಾವಾಳನೂಜಾಸೆ ಮಾರುಷಟ್
ಜಾವನು ಖೋಯಿನಂಖ್
(ಹೋದರೆ ದೇವರದು ಹೋಯ್ತು ಪೂಜಾರಿದೇನು ಶಾಟಿವೊಯ್ತು)

**ಹಕ್ಕಿಪಿಕ್ಕಿಯವರ ಒಗಟುಗಳು**

* ಕಾಳು ಅದ್ಮಿದೋಳ್ ದಾತ್
(ಕರಿಮನುಷ್ಯ ಬಿಳೀಹಲ್ಲು) ಜಾಲೀಮರ

* ಚಾರ್ ಕನ್ದೂರ್ ಪಾಣಿ
ಏಕ್ ಚ ಕುವಾಮೆ ಪಡ್ (ಗಾಯ್ ದೂದ)
(ನಾಲ್ಕು ಸಮುದ್ರ ನೀರು ಒಂದೇ ಬಾವಿಯಲ್ಲಿ ಬೀಳುತ್ತದೆ) ಆಕಳು ಹಾಲು

* ಏಕ್ ಕುವಾಮಾ ಅಂಡ್ಲಾ ಕಾಡಿನ ಪಡ್ (ಚೇಳುವು)
(ಒಂದು ಬಾವಿಯಾಗಿ ಅಂಗಿ ಕಳೆದುಬೀಳುತ್ತಾನೆ (ಬಾಳೆಹಣ್ಣು)
* ಏಕ್ ಬಾಟ್ಟೊಯೋ ಬಟ್ಟಾನ ಪೂಲ್ ರಮೇಶ ದೇವುಳ್ ಯೋ
ಪೂಲ್ ಸವಲತ್ತಿಯ ಉಗಿರೇಲು ಜಗತ್ ಆರಾಮ್ (ಸುಮ್ನಾ)
(ಒಂದ್ ಕ್ಲೆನ್ ಹೂವು. ಆಹೂವು ರಮೇಶನ ಗುಡಿಗೆ ಬೆಳಕಾಗಿ ಉಳಿದಿದ್ದು. ಜಗತ್ತಿಗೆ ಬೆಳಕಾಯಿತು. (ಸುಣ್ಣ)

* ತರ್ಕೂನ ಮಕಾಣನಾ ಪಣಕೊಲಗಾಣಿ (ಸುಂದರ)
ತುರುಕರ ಹೆಣಕ್ಕೆ ನೀರು ಹತ್ತುವುದಿಲ್ಲ ಚಂದ್ರ ಅಥವಾ ಸುಯ)

* ಅಡಿಕ್ಕೂ ಉಪ್ಪರ್ ಬೋಟಿ ಮೈ
ಅಡಿಕ್ಯೂ ಉಪ್ಪಾರ್ ಖೇಖ್
ಬೋಟೀನು ಮಯಿ ಪಾಣಿ (ನಾರೇಳು)
(ಮೂಳೆ ಒಳಗಡೆ ಮಾಂಸ ಮೇಲೆ ಮೂಳೆ ಮೇಲೆ ಕೂದಲು ಮಾಂಸದ ಒಳಗೆ ನೀರು) ತೆಂಗಿನಕಾಯಿ

ಬಜಾರ್ ತೂ ರಾಯಿತೊ ಗರೇ
ವಹಾಡಿತೋ ರೋದಾಲಗಾನು (ಖಾಂದೊ)
(ಸಂತೆಯಿಂದ ಮನೆಗೆ ತರೋದು
ಮುಂದೆ ಇಟ್ಕಂಡು ಅಳೋದು) ಈರುಳ್ಳಿ

ಹೀಗೆ ಹಕ್ಕಿಪಿಕ್ಕಿಸಮುದಾಯದಲ್ಲಿ ಈ ತರಹದ ವಿಭಿನ್ನ ಸಾಹಿತ್ಯ ಪ್ರಕಾರಗಳು ಲಭ್ಯವಾಗುತ್ತವೆ.

**ಆರಾಧನೆ, ಆಚರಣೆ, ನಂಬಿಕೆಗಳು :**

ಆರಾಧನೆಗಳು ಮತ್ತು ಆಚರಣೆಗಳನ್ನು ಕುರಿತಂತೆ ಜರ್ಜರಿತವಾದ ವಿವರಣೆ ಕೊಡುವುದು ಕಷ್ಟವಾಗಿದೆ. ಜಾನಪದ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಹಳಷ್ಟು ಪದಗಳು ತೀರಾ ಸರಳವಾದ ಅರ್ಥದಲ್ಲಿ ಬಳಕೆಯಾಗುತ್ತದೆ. ಸಂಪ್ರದಾಯ, ಪದ್ಧತಿ, ಸಂಸ್ಕಾರ, ಆಚರಣೆ, ಆರಾಧನೆ ಇಂಥ ಪದಗಳ ನಡುವೆ ಅಪಾರವಾದ ವ್ಯತ್ಯಾಸವನ್ನು ಗುರುತಿಸುವುದು ಸಾಧ್ಯವಿಲ್ಲವಾದರೂ ಸರಳವಾದ ಗೆರೆ ಎಳೆಯುವ ಪ್ರಯತ್ನ ಮಾಡಬಹುದು. "ತಲತಲಾಂತರದಿಂದ ಸಮುದಾಯದ ಅಂಗೀಕಾರವನ್ನು ಪಡೆದು ಬಳಕೆಯಲ್ಲಿರುವ ಮಾಟ ಮತ್ತು ಧಾರ್ಮಿಕ ವಿಧಿಗಳೇ ಜಾನಪದ ಆಚರಣೆಗಳು".೪೭ ಹಕ್ಕಿಪಿಕ್ಕಿ ಸಮುದಾಯದ ಕೆಲವು ಆಚರಣೆಗಳನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಲಾಗಿದೆ. ಅವುಗಳ ವಿಷಯದ ಪ್ರಸ್ತಾಪಕ್ಕೆ ತೊಡಗದೆ ಆಚರಣೆಗಳ ಸಾಮಾಜಿಕ ಸಂದರ್ಭ ಮತ್ತು ಅವುಗಳು ಹುಟ್ಟಿ ಬೆಳೆಯುತ್ತಿರುವ ಸಮಾಜದ ಜನರಿಗೂ ಇರುವ ಸಂಬಂಧವನ್ನು ನನ್ನ ಅಧ್ಯಯನದಲ್ಲಿ ನೋಡಲಾಗಿದೆ.

ಬದುಕಿನ ಆದಿ ಅಂತ್ಯ ಸಂಸ್ಕಾರಗಳಾದ ಹುಟ್ಟು ಮತ್ತು ಸಾವುಗಳ ಆಚರಣೆ ಬುಡಕಟ್ಟಿನ ಜನರಲ್ಲಿ ವಿಶಿಷ್ಟವಾಗಿ ನಡೆಯುತ್ತದೆ. ಇವುಗಳ ಜೊತೆಯಲ್ಲಿ ಮದವೆಯು ಸೇರಿಕೊಳ್ಳುತ್ತದೆ.

**ಧಾರ್ಮಿಕ ವಿಧಿವಿಧಾನಗಳು :**

ಬುಡಕಟ್ಟಿನ ಜನರು ಧರ್ಮದ ಬೇರುಗಳು ಸೃಷ್ಟಿಯ ಆಗುಹೋಗುಗಳಿಗೆ ದೇವರು ಕಾರಣವೆಂದು ನಂಬಿದವರು. ತಮ್ಮ ಬದುಕಿನ ಒಳಿತು-ಕೆಡಕುಗಳು ದೈವದ ಅಧೀನವೆಂದು ಭಾವಿಸುತ್ತಿದ್ದವರು. ಹೀಗಾಗಿ ದೇವರು ಅವರ ಬದುಕಿನಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ಅವರ ಜೀವನದ ಕೇಂದ್ರ ಶಕ್ತಿ ದೈವ ಅದೇ ರೀತಿ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ದೇವತಾರಾಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಹಕ್ಕಿಪಿಕ್ಕಿ ಸಮುದಾಯವು ದೇವರಿಗಾಗಿ ಗುಡಿಸಲನ್ನು ನಿರ್ಮಿಸುತ್ತಾರೆ. ಪೂರ್ವಾಭಿಮುಖವಾಗಿ ದೇವರ ಗುಡಿಸಲುಗಳು ಇರುವಂತೆ ನೋಡಿಕೊಳ್ಳುತ್ತಾರೆ. ಈ ಸಮುದಾಯದಲ್ಲಿ ದೇವರು ಯಾರ ಮೈಮೇಲೆ ಬರುತ್ತದೋ ಆತನೇ ಪೂಜಾರಿಯಾಗಿ ಕೆಲಸ ನಿರ್ವಹಿಸುತ್ತಾನೆ. ತುಳಸಿದೇವಿ, ಗಂಗಾದೇವಿ, ಶೀಳದೇವಿ, ಬಿಸಸಾಸಿ, ಚಾಂದಬಿ, ಕಾಳಿಕ, ಮುಂತಾದ ಶಕ್ತಿ ದೇವತೆಗಳನ್ನು ಪೂಜಿಸುತ್ತಾರೆ.

ಚಾಮುಂಡಿ, ದುರ್ಗಮ್ಮ, ಎಲ್ಲಮ್ಮ, ಕಾಳಿಕ ಮುಂತಾದ ಹೆಣ್ಣು ದೇವರುಗಳಿಗೆ ಆಗಾಗ ಚಿಕ್ಕ ಹಬ್ಬವನ್ನು ಮಾಡುತ್ತಾರೆ. 'ಈದ್' ಹಬ್ಬವನ್ನು ಈ ಸಮುದಾಯ ಆಚರಿಸುತ್ತಾರೆ.

**ಖವಾಳಿ ಪವಾಡ :**

ಇದು ಬುಡಕಟ್ಟು ಸಮುದಾಯದಲ್ಲಿ ಒಂದು ವಿಶೇಷವಾದ ಧಾರ್ಮಿಕ ಆಚರಣೆಯಾಗಿ ಕಂಡುಬರುತ್ತದೆ. ದೇವರ ಕಟ್ಟೆಯ ಎದುರು ಮೂರು ಕಲ್ಲು ಹೂಡಿ. ಖವಾಡಿಯನ್ನು ಮಾಡುತ್ತಾರೆ. ಇದು ರಾತ್ರಿ ನಡೆಯುವ ಆಚರಣೆಯಾಗಿದೆ. ಅಕ್ಕಿ ಹಿಟ್ಟಿನಲ್ಲಿ

ಹಿತಮಿತವಾಗಿ ಬೆಲ್ಲವನ್ನು ಬೆರೆಸಿ ವಡೆಗಳ ಆಕಾರದ ಸಿಹಿ ತಿನಿಸು ಮಾಡುತ್ತಾರೆ. ಇವುಗಳಿಗೆ ಅವರು 'ಖವಾಳಿ' ಎಂದು ಕರೆಯುತ್ತಾರೆ. ಈ ಖವಾಳಿಗಳನ್ನು ಎಣ್ಣೆಯಲ್ಲಿ ಕರಿಯುತ್ತಾರೆ. ದೇವರು ಮೈಮೇಲೆ ಬಂದವನು ಕಡಾಯಿಯಿಂದ ಖವಾಳಿಯನ್ನು ತೆಗೆಯುತ್ತಾನೆ. ದೇವರ ಗದ್ದುಗೆಯಲ್ಲಿ ಇಟ್ಟು, ಮಾರನೇ ದಿನ ಇದನ್ನು ತೆಗೆಯುವುದರ ಮೂಲಕ ಚಾಮುಂಡಿಯನ್ನು ಪೂಜಿಸಲ್ಪಡುತ್ತಾರೆ. ಒಬ್ಬರು ಹಾಡನ್ನು ಹಾಡುತ್ತ ದೇವರನ್ನು ಕರೆಯುತ್ತಾರೆ.

ಉಳಿದ ಬುಡಕಟ್ಟುಗಳಂತೆಯೇ ಹಕ್ಕಿಪಿಕ್ಕಿ ಸಮುದಾಯವು ಅನ್ಯ ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ. ಆಧುನಿಕತೆಯ ಗಾಳಿ ಅವರ ಸಮುದಾಯವನ್ನು ತಲುಪುತ್ತಿದೆ. ಆದರೂ ಪರಂಪರಾನುಗತವಾಗಿ ಬಂದಿರುವ ಧಾರ್ಮಿಕ ಆಚರಣೆಗಳು ಅವರಿಂದ ದೂರವಾಗುತ್ತಿಲ್ಲ. ತಮ್ಮ ಪೂರ್ವಜರ ನಡೆ-ನುಡಿ, ಆಚಾರ-ವಿಚಾರ, ಸಂಪ್ರದಾಯಗಳನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ.

ಈ ಸಮುದಾಯದಲ್ಲಿ ತಪ್ಪು ಮಾಡಿದವರು ಯಾರೇ ಆದರೂ ತಮ್ಮ ದೇವರುಗಳ ಮುಂದೆ ಒಪ್ಪಿಕೊಳ್ಳಲೇಬೇಕು, ಪ್ರತಿಯೊಬ್ಬರು ಸಹ ಈ ಸಮುದಾಯದಲ್ಲಿ ತಮ್ಮ ತಪ್ಪನ್ನು ಒಪ್ಪಿಕೊಳ್ಳುತ್ತಾರೆ. ಯಾರೂ ನ್ಯಾಯದ ಕಣ್ಣಿಗೆ ಮಣ್ ಎರಚುವುದಿಲ್ಲ. ಪಂಚಾಯಿತಿ ಎದುರು ಸುಳ್ಳು ಹೇಳಿದರೂ ಅವರು ನೀಡುವ ಶಿಕ್ಷೆಯ ಸಂದರ್ಭದಲ್ಲಿ ನಿಜ ಹೊರ ಬರುತ್ತದೆ. ದೈವದ ಪ್ರಾಮಾಣಿಕತೆ ಮಾಡಲು ದೈವದವರು ಆಜ್ಞೆ ಮಾಡಿದಾಗ ತಪ್ಪಿತಸ್ಥರು ಹೆದರುತ್ತಾರೆ. ದೈವ ಎಂತವರನ್ನು ನಿಜ ನುಡಿಸುತ್ತದೆ. ಎಂದು ವಕ್ತೃಗಳು ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತಾರೆ.

ಹೀಗೆ ಹಕ್ಕಿಪಿಕ್ಕಿ ಸಮುದಾಯಗಳಲ್ಲಿ ಸಾಹಿತ್ಯ, ಕಲೆ, ಸಂಸ್ಕೃತಿಗಳು ಅಭಿವ್ಯಕ್ತವಾಗಿದ್ದು ಅಧ್ಯಯನದ ಅನುಕೂಲಕ್ಕಾಗಿ ಇವರ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಕೆಲವು ಪ್ರಕಾರಗಳನ್ನು ಪರಿಚಯಿಸುವ ಕೆಲಸವನ್ನು ಮಾಡಲಾಗಿದೆ. ಪ್ರತ್ಯೇಕವಾದ ಅಧ್ಯಯನಗಳು ನಡೆದರೆ ಹಕ್ಕಿಪಿಕ್ಕಿಯವರ ಒಟ್ಟು ಸಾಂಸ್ಕೃತಿಕ ಮೌಲ್ಯಗಳ ಪರಿಚಯವಾಗುತ್ತದೆ.

**ಜನನ ಸಂದರ್ಭದ ಆಚರಣೆಗಳು :**

ಹಿಂದಿನ ಕಾಲಘಟ್ಟದಲ್ಲಿ ಒಂದು ಹೆಣ್ಣು ತನ್ನ ಹೆರಿಗೆಯನ್ನು ತಾನೇ ಮಾಡಿಕೊಳ್ಳುತ್ತಿದ್ದಳು. ಅವಳಿಗೆ ಒಂದು ಸಣ್ಣ ಗೂಡ್ಲನ್ನು ಕಟ್ಟುತ್ತಿದ್ದರು. ಅಲ್ಲಿ ಬೇರೆ ಯಾರು ಅಲ್ಲಿಗೆ ಹೋಗುವ ಆಗಿಲ್ಲ ಆದರೆ, ಇಂದು ಆಧುನಿಕತೆಯ ಪ್ರಭಾವದಿಂದಾಗಿ ಹೆರಿಗೆಯ ಪದ್ಧತಿಯಲ್ಲಿ ಸ್ವಲ್ಪ ಬದಲಾವಣೆಗಳಾಗಿರುವ ಅಂಶ ಕಂಡುಬರುತ್ತದೆ.

ಹಕ್ಕಿಪಿಕ್ಕಿ ಸಮುದಾಯ ಹುಟ್ಟು ಮತ್ತು ಸಾವುಗಳನ್ನು ಬಹುಗಂಭೀರವಾಗಿಯೇ ಪರಿಗಣಿಸುತ್ತಾರೆ. ಈ ಸಂದರ್ಭದಲ್ಲಿ ಸೂತಕಗಳನ್ನು ಬಹುಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

ಮಗು ಹುಟ್ಟಿದ ಮೇಲೆ, ಹೊಕ್ಕಳು ಬಳ್ಳಿಯನ್ನು, ಮರದ ತುಂಡು ಇಲ್ಲವೇ ಬಳೆಯ ಚೂರಿನಿಂದ ತಾನೇ ಕೊಯ್ದು ಸೀರೆಯ ನೂಲಿನಿಂದ ಹೊಕ್ಕಳನ್ನು ಕಟ್ಟುತ್ತಾಳೆ. ಹಾಗೂ ತಾನು ಸ್ನಾನ ಮಾಡಿ ಮಗುವಿಗೆ ಸ್ನಾನ ಮಾಡಿಸುತ್ತಾಳೆ. ಬೇರೆಯವರು ಅವಳಿಗೆ ಬೆಂಕಿ, ಬೇವು, ಕೊಡುವುದುಂಟು. ಬಾಣಂತಿಯೂ ತನ್ನ ಮಗುವನ್ನು ಜೋಳಿಗೆಯಲ್ಲಿ ಕಟ್ಟಿಕೊಂಡು ಊರೆಲ್ಲಾ ತಿರುಗಿ ಮೂರು ತಿಂಗಳುಗಳ ಕಾಲ ಭಿಕ್ಷೆ ಮಾಡಿ ಜೀವನ

ಸಾಗಿಸುತ್ತಾರೆ.೪೮

ಆದರೆ ಇಂದು ಈ ಸಮುದಾಯ ಬದಲಾವಣೆಗೆ ಒಳಗಾಗಿ, ಒಂದೆಡೆ ನೆಲೆನಿಂತು ಮಕ್ಕಳನ್ನು ಪೋಷಿಸುವ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಮಗುವಿನ ಜನನದ ನಂತರ, ಬಾಣಂತಿಯ ಸೂತಕ ಕಳೆಯಲು ಕೂದಲು ತೆಗೆಯುವ ಶಾಸ್ತ್ರವನ್ನು ಮಾಡುತ್ತಾರೆ. ಮಗುವಿನ ಜನನವಾದ ಐದನೇ ದಿನಕ್ಕೆ, ಈ ಶಾಸ್ತ್ರವನ್ನು ಮಾಡುತ್ತಾರೆ. ಆ ದಿನ ಅಕ್ಕಿ ಹುಗ್ಗಿಯನ್ನು ಮಾಡಿ, ಹಟ್ಟಿಯ ಮಕ್ಕಳು ಹಾಗೂ ಹೆಂಗಸರಿಗೆ ಹಂಚುತ್ತಾರೆ. ಗಂಡಸರು ಈ ಹುಗಿಯನ್ನು ಹಂಚುವುದಿಲ್ಲ ಈ ಶಾಸ್ತ್ರದ ದಿನ ಮಗುವಿಗೆ ಕೂದಲು ತೆಗೆಯುವ ಸಂಪ್ರದಾಯವನ್ನು ಇಟ್ಟುಕೊಳ್ಳುತ್ತಾರೆ. ಇದಾದ ನಂತರ ಅವರು ಕೂದಲನ್ನು ತೆಗೆಯುವುದಿಲ್ಲ, ಆದರೂ ಆಧುನೀಕರಣದ ಇಂದಿನ ಸಂದರ್ಭದಲ್ಲಿ ಇವೆಲ್ಲಾ ಮಾಯಾವಾಗಿ ಎಲ್ಲರಂತೆ ಇರುವುದು ಕಂಡುಬರುತ್ತದೆ. ಇದಾದ ನಂತರ ಮಗುವಿಗೆ ನಾಮಕರಣ ಮಾಡುವ ಶಾಸ್ತ್ರವನ್ನು ಹಮ್ಮಿಕೊಳ್ಳಲಾಗಿದೆ.

**ಋತುಮತಿ :**

ಹೆಣ್ಣು ಋತುಮತಿಯಾದರೆ, ಅವಳಿಗೆ ಸ್ನಾನ ಮಾಡಿಸಿ, ಹೂವು ಮುಡಿಸಿ ಮುಖಕ್ಕೆ ಕಾಲು ಕೈಗಳಿಗೆ ಕೆಂಪು ಬಣ್ಣ ಹಚ್ಚುತ್ತಾರೆ. ಸಿಹಿ ಊಟವನ್ನು ಅವರಿವರನ್ನು ಕರೆದು ಬಡಿಸುತ್ತಾರೆ. ಆ ಹೆಣ್ಣು ಮದುವೆಗೆ ಬಂದಿದ್ದಾಳೆಂದು ನಿರ್ಧರಿಸುತ್ತಾರೆ. ಈ ಸಂದರ್ಭದಲ್ಲಿ ಇತ್ತೀಚೆಗೆ ಇತರ ಜಾತಿಯ ಜನರಂತೆಯೆ ಅದ್ದೂರಿ ಸಮಾರಂಭಗಳನ್ನು ನಡೆಸುತ್ತಾರೆ. ಎಷ್ಟೋ ಬಾರಿ ಈ ದಿನವೇ ಮದುವೆಯ ಮಾತುಕತೆಗಳು ನಡೆಯುತ್ತವೆ. ಹಕ್ಕಿಪಿಕ್ಕಿಯರು ಒಂದು ಹೆಣ್ಣು ಋತುಮತಿಯಾಗುವವರೆಗೆ ತಮದೆಯ ಮನೆಯಲ್ಲಿ ಇರುವುದು ತಪ್ಪೆಂದು ತಿಳಿಯುತ್ತಾರೆ. ಋತುಮತಿಯಾಗುವ ಮೊದಲೆ ಈ ಸಮುದಾಯದಲ್ಲಿ ಹೆಣ್ಣನ್ನು ಮದುವೆ ಮಾಡಿಕೊಡುತ್ತಿದ್ದರು. ಮದುವೆಯಾದ ನಂತರ ಋತುಮತಿಯಾದರೆ ಯಾವುದೇ ಸಮಾರಂಭಗಳನ್ನು ಈ ಸಮುದಾಯ ಮಾಡುವುದಿಲ್ಲ.

**ಮದುವೆ :**

ಹಕ್ಕಿಪಿಕ್ಕಿಯರಲ್ಲಿ ಸಾಮಾನ್ಯವಾಗಿ, ಬಾಲ್ಯ ವಿವಾಹ ಬಳಕೆಯಲ್ಲಿತ್ತು. ಏಕೆಂದರೆ ಇಲ್ಲಿನ ವಕ್ತೃಗಳಾದ ರುದ್ರಾಕ್ಷಿ ರಾಜುರವರ ಅಭಿಪ್ರಾಯದಂತೆ ಜನರಲ್ಲಿ ಮದುವೆ ಬಗ್ಗೆ ಗ್ಯಾರಂಟಿ ಇಲ್ಲ. ಯಾರಾದರೂ ಊಟ, ತಿಂಡಿ, ದುಡ್ಡು ಎಂದರೆ ಹೆಣ್ಣನ್ನು ಅವರಿಗೆ ಕೊಟ್ಟು ಬಿಡುತ್ತಾರೆ. ಆದ್ದರಿಂದ ಚಿಕ್ಕವಯಸ್ಸಿಗೆ ಮದುವೆ ಮಾಡಿಬಿಡುತ್ತಾರೆ ಎಂದು ಹೇಳುತ್ತಾರೆ. ಆದರೆ ಇಂದು ಆ ಪದ್ಧತಿಯಿಲ್ಲ. ಹಕ್ಕಿಪಿಕ್ಕಿಯವರಲ್ಲಿ ಹೆಣ್ಣಿನ ಕಡೆಯವರಿಗೆ ಆದಾಯ ಹೆಚ್ಚು ಗಂಡು ವಧುದಕ್ಷಿಣೆ ಕೊಟ್ಟು ಮದುವೆಯಾಗ ಬೇಕಿರುವುದರಿಂದ, ಹೆಣ್ಣುಗಳಿಗೆ ಬೇಡಿಕೆ ಹೆಚ್ಚು ಒಂದು ಮದುವೆಯಿಂದ, ಹೆಣ್ಣಿನ ಕಡೆಯವರಿಗೆ ನಾಲ್ಕೈದು ಸೀರೆ, ಸಾವಿರ ರೂಪಾಯಿ ಹಣ, ಶರಾಬು, ಬ್ರಾಂದಿಗಳಿಂದ ಮಜಾ ಉಡಾಯಿಸಲು ಅವಕಾಶಗಳಿರುವುದರಿಂದ ಮದುವೆ ಅವರಲ್ಲಿ ವಿಶೇಷವೆನಿಸಿದೆ.

ಗುಜರಾತಿಗಳು ತಮ್ಮ ಕುಲದಲ್ಲೆ ಮದುವೆಯಾಗುವಂತಿಲ್ಲ ಅವರು ಕಾಳಿವಾಳೊ, ಮೋಡೋಗಳಲ್ಲಿ ಮದುವೆಯಾಗುತ್ತಾರೆ. ಪವಾರಗಳಲ್ಲೂ ಕೂಡ ಮದುವೆಯಾಗುತ್ತಾರೆ. ಪವಾರಗಳಲ್ಲಿ ಕೂಡ ಮದುವೆ ಮಾಡಿ ಕೊಳ್ಳುವಂತಿಲ್ಲ ಎಂಬ ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ.

"ಗಂಡನೊಂದಿಗೆ ಸರಿಯಾಗಿ ಹೊಂದಾಣಿಕೆಯಾಗದ ಹೆಣ್ಣಿಗೆ, ಗಂಡನ ಮನೆಗೆ ಬೇಗ ಹೋಗದೆ, ಬಹಳ ಕಾಲ ತಂದೆ ತಾಯಿಗಳ ಜೊತೆಯಲ್ಲಿ ಇರುವ ಹೆಣ್ಣಿಗೆ ಅಥವಾ ನೂರು ದಿವಸಕ್ಕೂ ಗಂಡನನ್ನು ಬಿಟ್ಟು ತಂದೆ ತಾಯಿಗಳ ಬಳಿಯಲ್ಲಿ ಇರುವ ಹೆಣ್ಣಿಗೆ ಕುಲಸ್ಥರ ಸಮ್ಮುಖದಲ್ಲಿ, ಗಂಡನೇ ಹೆಂಡತಿಯ ಬಟ್ಟೆ ಬಿಚ್ಚಿ ಅಥವಾ ಬಟ್ಟೆಯಿದ್ದಾಗಲೇ ಮೊದಲೇ ಹಿಡಿದು ತಂದಿದ್ದ ಓತಿಕ್ಯಾತವನ್ನು ಹೆಣ್ಣಿನ ಮೈ ಮೇಲೆ ಬಿಡುತ್ತಾರೆ. ಇದಕ್ಕೆ ಹಕ್ಕಿಪಿಕ್ಕಿಯವರಲ್ಲಿರುವ ನಂಬಿಕೆ ಎಂದರೆ ಹೆಣ್ಣಿಗೆ ಬುದ್ಧಿ ಬಂದು ಅವಳು ಹಿಂದಿರುಗುತ್ತಾಳೆ ಎನ್ನುವ ನಂಬಿಕೆ ಅವರಲ್ಲಿತ್ತು. ಆದರೆ ಈತರಹದ ಆಚರಣೆಗಳು ಇಂದಿನ ಸಮಾಜದಲ್ಲಿ ಕಂಡುಬರುವುದಿಲ್ಲ. ಆದರೆ ಕೆಲವು ಕಟ್ಟುನಿಟ್ಟಿನ ನೀತಿ ನಿಯಮಗಳನ್ನು ಅನುಸರಿಸುತ್ತಾರೆ.೪೯

**ಮರಣ ಸಂಸ್ಕಾರ :**

ಬುಡಕಟ್ಟುಗಳ ಜನರು ಸಾವಿಗೆ ಹೆಚ್ಚು ಭಯಪಡುತ್ತಾರೆ. ಶವಸಂಸ್ಕಾರದ ಬಹುಪಾಲು ಕ್ರಿಯೆಗಳು ಅತ್ಯಂತ ಸರಳವಾಗಿವೆ. ಹೆಣವನ್ನು ಹೂಳುವ ಪದ್ಧತಿ ಇದೆ. ಆದರೆ ಇವರು ಶವವನ್ನು ಸುಟ್ಟರೆ ದೇವತೆಗಳು ಸಿಟ್ಟಾಗುತ್ತಾರೆ ಎಂಬ ನಂಬಿಕೆಯನ್ನಿಟ್ಟು ಕೊಂಡವರು. ಹಕ್ಕಿಪಿಕ್ಕಿ ಜನರಲ್ಲಿ ಯಾರಾದರೂ ಸತ್ತರೆ ಅವರು ತಮ್ಮ ಗೂಡ್ಲುಗಳನ್ನು ಕಿತ್ತು ಬೇರೆ ಕಡೆ ಹಾಕಿಕೊಳ್ಳುತ್ತಿದ್ದರು. ಅವರ ಸಾವಿಗೆ ದಾದಾಜಿ ದೇವರು ಕಾರಣ ಎಂಬ ನಂಬಿಕೆಯನ್ನು ಹೊಂದಿರುವುದೇ ಇದಕ್ಕೆ ಪ್ರಮುಖವಾದ ಕಾರಣ. ಹಕ್ಕಿಪಿಕ್ಕಿಯವರು ಒಬ್ಬರು ಸತ್ತ ಜಾಗಕ್ಕೆ ಪುನಃ ಹೋಗುವುದಿಲ್ಲ, ಭೂತ ಹೊಡೆದಿತ್ತೆಂದು ಹೆದರುತ್ತಾರೆ. 'ವಾರ್' ಸಮಯದಲ್ಲಿ ಏನಾದರೂ ಪಂಚಾಯಿತಿ ಬಿದ್ದರೆ, ತಂದೆ-ತಾಯಿಗಳಿಗೆ ಕೂಳು ಹಾಕಿ, ಕುಲಸ್ಥರಿಗೆ ಊಟಕ್ಕೆ ಹಾಕದೆ ಹೋದರೆ ಕೊಡು-ತರುವ ಸಂಬಂಧಗಳನ್ನು ಉಳಿದವರು ನಿಷೇಧಿಸಿ ಬಿಡುತ್ತಾರೆ. ಹೆಣವನ್ನು ಮೊದಲಿಗೆ ಇವರು ಒಬ್ಬರೆ ಹೊರುತ್ತಿದ್ದರೆಂಬ ಅಂಶವನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಯಲಾಯಿತು. ಇದಕ್ಕೆ ಕಾರಣವೆನೆಂದರೆ ಸಾವಿಗೆ ಈ ಜನ ಭಯ ಪಡುತ್ತಿದ್ದರಿಂದ ಹೆದರಿ ಜನರೇ ಇಲ್ಲದ ಸ್ಥಿತಿ ನಿರ್ಮಾಣವಾಗಿ, ಚಾಪೆಯಲ್ಲಿಯೇ ಹೆಣವನ್ನು ಸುತ್ತಿ ತೊಟ್ಟುಗಳಿಂದ ಬಿಗಿಯಾಗಿ ಕಟ್ಟಿ ಆ ಕಟ್ಟುಗಳಿಗೆ ಒಂದು ಗಳುವನ್ನು ಏರಿಸಿ ಇಬ್ಬರೇ ಹೆಣವನ್ನು ಹೊತ್ತುಕೊಂಡು ಹೋಗುತ್ತಿದ್ದರು. ಆದರೆ ಈ ಸಮುದಾಯ ಇಂದು ಒಂದೆಡೆ ನೆಲೆನಿಂತಿರುವುದರಿಂದ ಈ ಆಚರಣೆಗಳು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದಲ್ಲಿ ಕಂಡುಬರುವುದಿಲ್ಲ. ಇತರ ಸಮುದಾಯದಂತೆ ಶವಸಂಸ್ಕಾರದಲ್ಲಿ ಭಾಗವಹಿಸುತ್ತಾರೆ.

**ಅಡಿ ಟಿಪ್ಪಣಿ:**

೧. ಡಾ.ಕೆ.ಎಂ. ಮೈತ್ರಿ ,ಬುಡಕಟ್ಟು ಕುಲಕಸುಬುಗಳು, ೨೦೦೨ ಪುಟ

೨. koroeber anthropology, ಪುಟ ೨೮೧-೨೮೨

೩. ಕೆ.ಬೈರಪ್ಪ, ಭಾರತದ ಸಮಾಜ, ಪರಂಪರೆ, ಪರಿವರ್ತನೆ. ಪುಟ ೯೦

೪. ಸಂಪಾದಕರು: ಎ.ಎಸ್.ಪ್ರಭಾಕರ, ಆದಿವಾಸಿ ಆಖ್ಯಾನ, ಪುಟ ೧೩೪

೫. ಸಂಪಾದಕರು: ಎ.ಎಸ್ ಪ್ರಭಾಕರ, ಆದಿವಾಸಿ ಆಖ್ಯಾನ, ಪುಟ ೧೯೨

೬. ಡಾ.ಮಧುಗುಂಡ್ಲುಪೇಟೆ, ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ, ಪುಟ ೩

೭. bose nirmal kumar, tribal life in india, national book trust, india fill, page ೬೬

೮. Abrietsurvey of dravidian tribel languages of. page ೫೫,

೯. ಡಾ.ಕೆ.ಎಮ್. ಮೈತ್ರಿ, ಬುಡಕಟ್ಟು ಕುಲಕಸುಬುಗಳು, ಪುಟ ೯೩

೧೦. ಸಂಪುಟ ಎರಡು, ಕರ್ನಾಟಕ ಬುಡಕಟ್ಟುಗಳು, ಪುಟ ೬೧

೧೧. ಸಂಪುಟ ಎರಡು, ಕರ್ನಾಟಕ ಬುಡಕಟ್ಟುಗಳು, ಪುಟ ೬೪

೧೨. ವಕ್ತೃ-೩೮, ಮೂರ್ತಿ, ಬಸವನಪುರ ದಿನಾಂಕ ೧೫/೪/೨೦೦೮

೧೩. ವಕ್ತೃ ವಯಸ್ಸು-೬೦, ಮತ್ತಿಕೆರೆ ಕಾಲೋನಿ ಮಾದಯ್ಯ, , ಪಾರ್ವತಮ್ಮ ವಯಸ್ಸು-೪೯, ಸೊಣ್ಣೇನಹಳ್ಳಿ, ದಿನಾಂಕ ೧೬/೦೨/೨೦೦೯

೧೪. ವಕ್ತೃ ಮಾದಯ್ಯ, ವಯಸ್ಸು ೬೮, ಮತ್ತಿಕೆರೆ ಕಾಲೋನಿ. ೨೬-೦೨-೦೯

೧೫. ವಕ್ತೃ ಮಟಕಯ್ಯನದೊಡ್ಡಿ, ಶಿವಲಿಂಗಯ್ಯ, ವಯಸ್ಸು ೫೩, ೨೫-೦೨-೦೯

೧೬. ಎಮ್.ಜಿ ನಾಗರಾಜ್, ರಾಮನಗರ ವೈಜಯಂತಿ

೧೭. ವಕ್ತೃ ನಾಗೇಂದ್ರ, ವಯಸ್ಸು ೬೨, ಹಕ್ಕಿಪಿಕ್ಕಿ ಕಾಲೋನಿ, ದಿನಾಂಕ ೨೯/೦೯/೨೦೦೯

೧೮. ವಕ್ತೃ ರುದ್ರಾಕ್ಷಿ ರಾಜು, ಸುಭಾಶ್ ನಗರ, ಕೆಂಗೇರಿ ಉಪನಗರ, ದಿನಾಂಕ ೧೨/೧೦/೨೦೦೯

೧೯. ವಕ್ತೃ ಕಲ್ಲೇಶಿ, ವಯಸ್ಸು ೨೧, ದಿನಾಂಕ ೨೦/೧೦/೨೦೦೯

೨೦. ವಕ್ತೃ ಜಯಪು, ವಯಸ್ಸು ೫೦, ದಿನಾಂಕ ೧೦/೦೮/೨೦೦೯

೨೧. ವಕ್ತರ ರಾಜು, ವಯಸ್ಸು ೫೨, ಹಕ್ಕಿಪಿಕ್ಕಿ ಕಾಲೋನಿ ಹೆಜ್ಜಾಲ, ದಿನಾಂಕ ೧೬/೦೨/೨೦೧೦

೨೨. ಬರಗೂರು ರಾಮಚಂದ್ರಪ್ಪ, ಹಕ್ಕಿಪಿಕ್ಕಿಗಳ ಉಪಸಂಸ್ಕೃತಿ, ೧೯೯೩ ಪುಟ ೪೧

೨೩. ಡಾ. ಅಂಬೇಡ್ಕರ್, ಬರಹ ಭಾಷಣಗಳು, ಸಂಪುಟ ೧, ಪುಟ ೨೧೮೭

೨೪. ಬರಗೂರು ರಾಮಚಂದ್ರಪ್ಪ, ಇಲ್ಲಿಗರ ಉಪಸಂಸ್ಕೃತಿ ಮಾಲೆ, ಪುಟ ೧೪

೨೫. Dictionary of sociology, Page ೮೦

೨೬. ವಕ್ತೃ, ಮಹಾದೇವಯ್ಯ, ವಯಸ್ಸು ೪೮, ದಿನಾಂಕ ೧೨/೦೫/೨೦೦೯

೨೭. The Brief serve of Longest page ೫೫

೨೮. ಪ್ರೊ. ಹಿ.ಶಿ. ರಾಮಚಂದ್ರೇಗೌಡ, ಕರ್ನಾಟಕ ಜನಪದ ಕಥೆಗಳು, , ಪುಟ ೧೬
೨೯. ವಕ್ತೃ ದೊಡ್ಡಮಾರಯ್ಯ, ವಯಸ್ಸು ೫೮, ದಿನಾಂಕ ೧೪/೧೨/೨೦೦೯
೩೦. ಡಾ.ಜಿ.ಆರ್. ತಿಪ್ಪೇಸ್ವಾಮಿ ಮತ್ತು ಡಾ. ರಂಗಾರೆಡ್ಡಿ ಕೋಡಿರಾಂಪುರ, ಜಾನಪದ ಅನ್ವಯಿಕತೆ. ಪುಟ ೧೩೬
೩೧. ವಕ್ತೃ ಮುನಿಮಾರಯ್ಯ, ವಯಸ್ಸು ೬೦, ದಿನಾಂಕ ೨೨/೧೧/೨೦೦೯
೩೨. ವಕ್ತೃ ಮಾದಮ್ಮ, ವಯಸ್ಸು ೫೮, ದಿನಾಂಕ ೨೩/೦೩/೨೦೦೯
೩೩. ವಕ್ತೃ ಮಾದಯ್ಯ, ವಯಸ್ಸು ೪೫, ದಿನಾಂಕ ೧೫/೦೭/೨೦೦೯
೩೪. ವಕ್ತೃ ವೆಂಕಟಯ್ಯ, ವಯಸ್ಸು ೬೨, ದಿನಾಂಕ ೧೯/೦೮/೨೦೦೯
೩೫. ವಕ್ತೃ ದೊಡ್ಡಭೈರಪ್ಪ, ವಯಸ್ಸು ೫೫, ೧೩/೧೦/೨೦೦೯
೩೬. ವಕ್ತೃ ಚಿಕ್ಕತಾಯಮ್ಮ, ವಯಸ್ಸು ೪೮, ದಿನಾಂಕ ೧೮/೧೧/೨೦೦೯
೩೭. standard dictionary of folklore, mythology and Legend vol೨ p೧೧೪೩.
೩೮. ಡಾ. ದೇಂವೆಂದ್ರ ಕುಮಾರ ಹಕಾರಿ.ಜಾನಪದ ಗಂಗೋತ್ರಿ, ಕರ್ನಾಟಕ ಜಾನಪದ ಅಕಾಡೆಮಿ ಬೆಂಗಳೂರು ಲೇಖನ , ಆಚರಣೆ ಮತ್ತು ಉಗ್ರ ಆಚರಣೆ ಸಂಚಿಕೆ ೪, ಜೂನ್೧೯೯೬ ಪುಟ೬೫,
೩೯. ವಕ್ತೃ ನಾಗಮ್ಮ,೫೨, ಚಿಕ್ಕ ಸೂಲಿಕೇರಿ, ೨೫/೯/೨೦೦೯
೪೦. ವಕ್ತೃ ಮಾರಮ್ಮ, ೫೨ ಮಟಕನದೊಡ್ಡಿ ೨೬/೦೯/೨೦೦೯
೪೧. ವಕ್ತೃ ನಂಜುಂಡಯ್ಯ, ೫೬ ಮಾರೆಗೌಡನದೊಡ್ಡಿ, ೨೮/೦೯/೨೦೦೯
೪೨. H.V nanjundiah and L.K anantha Krishna Iyer vol In the Mysore Triben and caste, Page-೩೮೩
೪೩. Folk cultural and oral Tradition Quoted Lal Srivastha, page೧೨೫ ೧೯೭೪
೪೪. ವಕ್ತೃ ಮುನಿಯಪ್ಪ, ೫೫ ರಾಮಗಿರಿ ಇರುಳಿಗರ ಕಾಲೋನಿ, ೧೫/೧೦/೨೦೦೯
೪೫. ವಕ್ತೃ ನಾಗೇಂದ್ರ, ವಯಸ್ಸು-೫೭,ಹಕ್ಕಿಪಿಕ್ಕಿ ಕಾಲೋನಿ, ಗವಿಪುರ
೪೬. ವಕ್ತೃ ಜಯಪು,ವಯಸ್ಸು-೫೦,ಹಕ್ಕಿಪಿಕ್ಕಿ ಕಾಲೋನಿ, ಗವಿಪುರ
೪೭. ಡಾ.ಸಿದ್ದಲಿಂಗಯ್ಯ, ಜಾನಪದ ಅನ್ವಯಿಕತೆ, ಪುಟ ೧೫೧.
೪೮. ವಕ್ತೃ ಗಂಗಮುನಿ, ವಯಸ್ಸು-೫೯, ಕಟಕನಪಾಳ್ಯ, ೧೫/೧೦/೨೦೦೯
೪೯. ವಕ್ತೃ ಹೆಸರು-ರುದ್ರಾಕ್ಷಿ ರಾಜು, ವಯಸ್ಸು-೫೨, ಸುಭಾಶ್‌ನಗರ.ಕೆಂಗೇರಿ-ಉಪನಗರ

# ಅಧ್ಯಾಯ–೩

## ಬುಡಕಟ್ಟು ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ಪರಿಕಲ್ಪನೆ

ಬದಲಾವಣೆ ಎಂಬುವುದು ನಿಸರ್ಗ ನಿಯಮವಾಗಿದೆ. ಅಂತೆಯೇ ಬದಲಾವಣೆಯು ಸಾರ್ವತ್ರಿಕವಾದುದು. ಎಲ್ಲಾ ಸಮಾಜದ ಸಮುದಾಯಗಳು ಬದಲಾಗಿವೆ. ಯಾವುದೇ ಸಮಾಜವು ಸ್ಥಾಯಿಯಾಗಿಲ್ಲ. ಸಮಾಜವು ಒಂದು ನಿರಂತರ ಪ್ರಕ್ರಿಯೆ. ಕೆಲವು ಸಮುದಾಯಗಳಲ್ಲಿ ಬದಲಾವಣೆಯನ್ನು ಗಮನಿಸಬಹುದಾದರೆ ಮತ್ತೆ ಕೆಲವು ಸಮುದಾಯಗಳಲ್ಲಿ ಇದು ಸಾಧ್ಯವಾಗುವುದಿಲ್ಲ. ಬದಲಾವಣೆಯು ಉದ್ದೇಶಿತ ಮತ್ತು ಯೋಜಿತ ಇರಬಹುದು. ಸ್ಥಿರತೆಯ ಭ್ರಮೆಯ ಹೊರತಾಗಿಯೂ ಸಮಾಜಗಳು ಬದಲಾಗುತ್ತಿವೆಯೆಂಬುದು ನಿಶ್ಚಿತ ಬದಲಾವಣೆಯು ಅನಿವಾರ್ಯವಾಗಿದೆ.

ಎರಡು ವಿಭಿನ್ನ ಕಾಲಗಳಲ್ಲಿ, ಒಂದೇ ವಸ್ತುವಿನಲ್ಲಿ ಉಂಟಾದ, ಗಮನಿಸಬಹುದಾದ ವ್ಯತ್ಯಾಸವನ್ನು ಸೂಚಿಸಲು ಬದಲಾವಣೆ ಎಂಬ ಕಲ್ಪನೆಯನ್ನು ಬಳಸಲಾಗುತ್ತದೆ. ಹಾಗಾಗಿ ಸಾಮಾಜಿಕ ಬದಲಾವಣೆಯು ಸಾಮಾಜಿಕ ವಿಷಯಗಳಲ್ಲಿ ಉಂಟಾದ ಬದಲಾವಣೆಯಾಗಿದೆ. ಸಾಮಾಜಿಕ ಬದಲಾವಣೆಯ ಕಲ್ಪನೆಯನ್ನು ಅನೇಕರು ವ್ಯಾಖ್ಯಾನಿಸಿದ್ದಾರೆ. ಕಿಂಗ್ಸ್‌ಲೇ ಡೇವಿಸ್ ರವರ ಪ್ರಕಾರ "ಸಾಮಾಜಿಕ ಪ್ರಕ್ರಿಯೆಗಳು, ಸಾಮಾಜಿಕ ಮಾದರಿಗಳು ಮತ್ತು ಸಾಮಾಜಿಕ ಅಂತರ್‌ಕ್ರಿಯೆಗಳನ್ನು ವಿವರಿಸಲು ಸಾಮಾಜಿಕ ಬದಲಾವಣೆ ಎಂಬ ಕಲ್ಪನೆಯನ್ನು ಬಳಸಲಾಗಿದೆ" ಎಂದು ವ್ಯಾಖ್ಯಾನಿಸಿದ್ದಾರೆ.

ಸಮಾಜ ವಿಜ್ಞಾನಿಗಳು ಸಾಮಾಜಿಕ ಬದಲಾವಣೆಯನ್ನು ವಿಭಿನ್ನ ಕಲ್ಪನೆಗಳ ಸಹಾಯದಿಂದ ಮತ್ತು ವಿಭಿನ್ನ ಕ್ರಮಗಳಿಂದ ಅಧ್ಯಾಯನ ನಡೆಸಿದ್ದಾರೆ. ಕೆಲವರು ತಮ್ಮದೇ ಆದ ನೈತಿಕ ಇಲ್ಲವೇ ಭಾವನಾತ್ಮಕ ದೃಷ್ಟಿಕೋನದಿಂದ ಭಾರತದಲ್ಲಿನ ಬದಲಾವಣೆಯನ್ನು ಇಲ್ಲವೇ ಬದಲಾವಣೆಯಲ್ಲದ್ದನ್ನು ವಿಶ್ಲೇಷಿಸಿದ್ದಾರೆ. ಕೆಲವರು ಬದಲಾವಣೆಯ ಕಾರಣಗಳನ್ನು ಮತ್ತೆ ಕೆಲವರು ಬದಲಾವಣೆಯ ಹಾದಿಯನ್ನು ವಿಶ್ಲೇಷಿಸಿದ್ದಾರೆ. ಮತ್ತೆ ಕೆಲವರು ನಿಧಾನ ಗತಿಯ ಬದಲಾವಣೆಯ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿದ್ದಾರಾದರೆ, ಕೆಲವರು ನಿಯತಿವಾದದ(Determinstic ) ಅರ್ಥ ವಿಶ್ಲೇಷಣೆ ನೀಡಿದ್ದಾರೆ.

## ಸಾಮಾಜಿಕ ಸ್ಥಾನಮಾನ ಮತ್ತು ಆಧುನೀಕತೆ

### ಸಾಮಾಜಿಕ ಸ್ಥಾನಮಾನ :

ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನಮಾನವನ್ನು ಹೊಂದಿರುವ. ಸೂಚಿಸುವ ಪದವೇ "ಸಾಮಾಜಿಕ ಸ್ಥಾನಮಾನ" । ಸಾಮಾನ್ಯವಾಗಿ 'ಸ್ಥಾನಮಾನ' ಎಂಬ

ಪದವನ್ನು 'ಅಂತಸ್ತು' [status] ಎಂಬ ಪದಕ್ಕೆ ಸರಿಸಮಾನವಾದ ಅರ್ಥದಲ್ಲಿಯೇ, ಅಂದರೆ ಪರ್ಯಾಯ ಪದವಾಗಿಯೇ ಬಳಸುವುದಿದೆ. ಈ ಅರ್ಥದಂತೆಯೇ ವ್ಯಾಖ್ಯಾನ ನೀಡಿರುವ ಲಿಂಟನ್ನಿನ ಪ್ರಕಾರ "ಒಂದು ನಿರ್ದಿಷ್ಟ ಸಮಾಜದಲ್ಲಿ ಒಂದು ನಿರ್ದಿಷ್ಟ ಕಾಲದಲ್ಲಿ ವ್ಯಕ್ತಿಯೋರ್ವನು ಹೊಂದಿರುವ ಸ್ಥಾನವೇ ಸಾಮಾಜಿಕ ಅಂತಸ್ತು"೨ ಎಂದು ವ್ಯಾಖ್ಯಾನಿಸಿದ್ದಾರೆ. ಈ ಅರ್ಥದಂತೆ ಪ್ರತಿಯೊಂದು ಅಂತಸ್ತಿಗೂ ಕೂಡ ಅದಕ್ಕೆ ತಕ್ಕುದಾದ ಪಾತ್ರ ನಿರೀಕ್ಷೆಗಳು [role expectations ] ಇದ್ದೇ ಇರುತ್ತವೆ.

'ಸಾಮಾಜಿಕ ಪಾತ್ರ' ಎಂಬುದು ಸಮಾಜಶಾಸ್ತ್ರದ ಮೂಲಭೂತ ಪರಿಕಲ್ಪನೆಗಳಲ್ಲೊಂದು. ಸಮಾಜದಲ್ಲಿ ಪ್ರಾಪ್ತವಾಗಿರುವ ಸ್ಥಾನದಲ್ಲಿದ್ದುಕೊಂಡು ವ್ಯಕ್ತಿಯು ಏನು ಮಾಡುತ್ತಾನೆಂಬುದನ್ನು ಸೂಚಿಸುವುದೇ ಪಾತ್ರ. ಕಿಂಗ್ಸ್‌ಲೇ ಡೇವಿಸ್‌ರವರ ಪ್ರಕಾರ "ವ್ಯಕ್ತಿಯು ತನ್ನ ಸಾಮಾಜಿಕ ಅಂತಸ್ತಿನ ಅಗತ್ಯಕ್ಕನುಸಾರವಾಗಿ ಕಾರ್ಯನಿರ್ವಹಿಸುವ ಕ್ರಮವೇ ಸಾಮಾಜಿಕ ಪಾತ್ರ."೩

"ಸಾಮಾಜಿಕ ಅಂತಸ್ತು" ಎಂಬುದು ವ್ಯಕ್ತಿಯೋರ್ವನಿಗೆ ಸಮಾಜದಲ್ಲಿ ನೀಡಲಾದ ಸ್ಥಾನಮಾನವನ್ನು ಸೂಚಿಸುವುದು. ಅಂತಃಕ್ರಿಯೆಯ ಪರಿಸ್ಥಿತಿಯಲ್ಲಿ ಭಾಗಿಯಾಗುವ ಮುನ್ನ ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ಒಂದು ಪ್ರತ್ಯೇಕ "ಗುರುತು" ಎಂಬುದಿರುತ್ತದೆ. ವ್ಯಕ್ತಿಯ ಈ ತನ್ನದೇ ಆದ ಒಂದು ಪ್ರತ್ಯೇಕ "ಗುರುತು" ಎಂದು ಕರೆಯಬಹುದೆಂಬುದು ಕಿಂಗ್ಸ್‌ಲೇ ಡೇವಿಸ್‌ನ ಅಭಿಪ್ರಾಯವಾಗಿರುತ್ತದೆ.೪

ಗಿನ್ಸ್‌ಬರ್ಗ್‌ರವರ ಪ್ರಕಾರ "ಸಾಮಾಜಿಕ ಸಮೂಹದಲ್ಲಿ ವಿಭಿನ್ನ ವ್ಯಕ್ತಿಗಳು ಹೊಂದಿರಬಹುದಾದ ಸ್ಥಾನಗಳಿಗೆ ಸಂಬಂಧಿಸಿದಂತೆ ವ್ಯಕ್ತಿಯೋರ್ವನು ಪಡೆದುಕೊಳ್ಳುವ ಸ್ಥಾನಕ್ಕೆ ಅಂತಸ್ತು" ಎಂದು ವ್ಯಾಖ್ಯಾನಿಸಿದ್ದಾರೆ.೫

**ಆಧುನಿಕತೆ :**

"ಆಧುನಿಕತೆ" ಎಂಬ ಪರಿಕಲ್ಪನೆಯು ಆಧುನಿಕ ವಿಚಾರಗಳು ಮತ್ತು ಶೈಲಿಗಳೊಂದಿಗೆ ಸಂಲಗ್ನಗೊಂಡಿದೆ. ಆದರೆ, ಸಾಮಾನ್ಯವಾಗಿ ಐತಿಹಾಸಿಕ ಅರ್ಥದಲ್ಲಿ "ಆಧುನಿಕತೆ" ಎಂದರೆ ಮಧ್ಯಕಾಲೀನ ಯುಗ"ದ[middle age] ನಂತರದ ಹಾಗೂ "ನವೋದಯ"ದ [Renaissance] ಸ್ಫೂರ್ತಿಯನ್ನು ಒಳಗೊಂಡಿರುವ ಕಾಲಘಟ್ಟದ ಕ್ರಮ ಎಂದೇ ಅರ್ಥೈಸಲಾಗುತ್ತಿದೆ. "ನವೋದಯ"ದ ಸ್ಫೂರ್ತಿಯಿಂದಾಗಿ ಸಾಂಪ್ರದಾಯಿಕ ಸಮಾಜವು ಆಧುನಿಕ ಸಾಮಾಜಿಕ ರೂಪಗಳಾಗಿ ಪರಿವರ್ತಿತವಾಗಿರುವ ಅಂಶವೂ ಈ ಪರಿಕಲ್ಪನೆಯೊಂದಿಗೆ ಸೇರಿಕೊಂಡಿದೆ. ಇನ್ನೂ ಹೆಚ್ಚು ನಿರ್ದಿಷ್ಟವಾಗಿ ಹೇಳುವುದಾದರೆ, ಈ ಪರಿಕಲ್ಪನೆಯು ಇತ್ತೀಚಿನ, ಅಂದರೆ ಸಮಕಾಲೀನ ರೀತಿ-ನೀತಿಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುವುದನ್ನು ಸೂಚಿಸುವುದು.

"ಆಧುನೀಕತೆ"ಯು ಜೀವನ ಕ್ರಮಕ್ಕೆ ಸಂಬಂಧಪಟ್ಟ ಮೌಲ್ಯಸೂಚಕ ಪದ. ಡೇನಿಯಲ್ ಲರ್ನರ್ [Daniel Learner] ಎಂಬ ಮಾನವಶಾಸ್ತ್ರಜ್ಞನು ಮಧ್ಯ ಪ್ರಾಚ್ಯ ಸಮಾಜಗಳ ಅಧ್ಯಯನವೊಂದರಲ್ಲಿ "ಆಧುನೀಕತೆ" ಎಂಬ ಕಲ್ಪನೆಯನ್ನು ಬಳಸಿದ್ದಾನೆ.೬ ಅವನ ಅಭಿಪ್ರಾಯದಂತೆ ಆಧುನೀಕರಣವು ವೈಚಾರಿಕತೆ, ವೈಜ್ಞಾನಿಕತೆ, ಮಾನವ ಹಿತಸಾಧನೆ ಮತ್ತು ವಸ್ತುಪ್ರಾಧಾನ್ಯ ದೃಷ್ಟಿಯನ್ನೊಳಗೊಂಡ ಜೀವನಕ್ರಮವನ್ನು ಪ್ರತಿಬಿಂಬಿಸುವ ಕಲ್ಪನೆ. ಆಧುನೀಕರಣವು ಜೀವನ ವಿಧಾನವನ್ನು ಪ್ರತಿನಿಧಿಸುವುದಾದ್ದರಿಂದ ಅದೊಂದು ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯು ನಾಗರಿಕತೆಯ ಬೆಳವಣಿಗೆಗೆ ಅವಕಾಶ ನೀಡುವುದರೊಂದಿಗೆ ಅಕ್ಷರಜ್ಞಾನ, ಹಣಸಂಪಾದನೆ, ಸುಸಂಸ್ಕೃತ ಜೀವನ ಮೊದಲಾದವುಗಳಿಗೆ ಸೂಕ್ತ ವೇದಿಕೆ ನಿರ್ಮಿಸುವುದು. "ಆಧುನಿಕ ವ್ಯಕ್ತಿ" ಎನ್ನಿಸಿಕೊಳ್ಳುವವನು. ಮೂಢ ನಂಬಿಕೆಗಳನ್ನು ಬದಿಗೊತ್ತಿ, ಘಟನೆಗಳ ಕಾರಣ-ಪರಿಣಾಮಗಳನ್ನು ವಿವೇಚಿಸಿ, ಸಾಧಕ ಬಾಧಕಗಳನ್ನು ವಿಮರ್ಶಿಸಿ ಪರಿಶ್ರಮಿಸುವನು. ಪಶ್ಚಿಮದ ದೇಶವೊಂದರ ಪ್ರಭಾವಿ ವಲಯಕ್ಕೆ ಸಿಲುಕಿರುವುದರ ಪರಿಣಾಮವಾಗಿ ಪಶ್ಚಿಮೇತರ ದೇಶಗಳಲ್ಲಿ ಸಂಭವಿಸಬಹುದಾದ ಸಾಮಾಜಿಕ-ಸಾಂಸ್ಕೃತಿಕ ಪರಿವರ್ತನೆಗಳನ್ನು ವಿಶ್ಲೇಷಿಸಲು "ಪಾಶ್ಚಾತ್ಯೀಕರಣ" ಎಂಬ ಪರಿಕಲ್ಪನೆಗಿಂತ "ಆಧುನಿಕೀಕರಣ" ಪರಿಕಲ್ಪನೆಯೇ ಹೆಚ್ಚು ಸೂಕ್ತ ಹಾಗೂ ಸಂಗತವಾದುದು ಎಂಬುದು ಡೇನಿಯಲ್ ಲರ್ನರ್‌ನ ನಿಲುವು.೭

ಸಾಂಪ್ರದಾಯಿಕ ಸಮಾಜಗಳು ಆಧುನಿಕವಾಗಿ ರೂಪಾಂತರಗೊಂಡ ಪ್ರಕ್ರಿಯೆಯನ್ನು ವಿಶ್ಲೇಷಿಸುವಲ್ಲಿ 'ಆಧುನಿಕೀಕರಣ'ದ ಕಲ್ಪನೆಯು ಸಹಾಯಕವಾಗಿದೆ. ಈ ಪರಿಕಲ್ಪನೆಯು ಈ ರೂಪಾಂತರಗೊಂಡ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಮತ್ತು ಸಾಮಾಜಿಕ ಮುಖಗಳ ಬಗ್ಗೆಯೂ ಮಾಹಿತಿ ನೀಡುವುದು. ಅಂದರೆ, ಆಧುನಿಕೀಕರಣ ಪ್ರಕ್ರಿಯೆಯು ಮುಖ್ಯ ಆಯಾಮಗಳ ಕುರಿತು ಈ ಪರಿಕಲ್ಪನೆ ವ್ಯಾಖ್ಯಾನ ನೀಡುತ್ತದೆ.

ರಾಜಕೀಯ ಆಧುನಿಕೀಕರಣವು ರಾಜಕೀಯ ಪಕ್ಷಗಳು, ಸಂಸದೀಯ ವಿಧಾನಗಳು, ಪ್ರೌಢ ಹಾಗೂ ಗುಪ್ತ ಮತದಾನ ಪದ್ಧತಿ, ಚುನಾವಣೆಗಳು, ಪ್ರಜಾಸತ್ತಾತ್ಮಕ ಆಂದೋಲನಗಳು, ಸಾರ್ವಜನಿಕ ಅಭಿಪ್ರಾಯ, ನಿರ್ಣಯ ಕೈಗೊಳ್ಳುವಲ್ಲಿನ ಸಾಮೂಹಿಕ ಸಹಭಾಗಿತ್ವ, ರಾಷ್ಟ್ರೀಯತೆಯ ಕಲ್ಪನೆಯ ವಿಕಾಸ, ಅಂತಾರಾಷ್ಟ್ರೀಯ ಸಹಕಾರದ ಸ್ಥಾಪನೆ, ಮುಂತಾದ ಬದಲಾವಣೆಗಳನ್ನು ಒಳಗೊಂಡಿರುವುದು.

ಸಾಂಸ್ಕೃತಿಕ ಆಧುನಿಕೀಕರಣವು ಮತಧರ್ಮದ ಕಪಿಮುಷ್ಟಿಯಿಂದ ಸಂಸ್ಥೆಗಳು ಬಿಡುಗಡೆಗೊಳ್ಳುವ ಮತಾತೀಕರಣದ [secularisation] ಪ್ರಕ್ರಿಯೆಯೊಂದಿಗೆ ತತ್ವಜ್ಞಾನ, ಮೌಲ್ಯಗಳು, ಧರ್ಮ, ಸಾಹಿತ್ಯ, ಕಲೆ, ವಿಜ್ಞಾನ, ಮುಂತಾದ ಕ್ಷೇತ್ರಗಳಲ್ಲಿನ ಹೊಸ ಬೆಳವಣಿಗೆಗಳನ್ನು ಒಳಗೊಂಡಿರುವುದು.

ಸಮಾಜವು ಸಾಮಾಜಿಕ ಸಂಬಂಧಗಳ ಬಲೆ. ವ್ಯಕ್ತಿಗಳ ಸಂಬಂಧಗಳು ವಿವಿಧ ರೀತಿಯಲ್ಲಿ ಬದಲಾವಣೆಯನ್ನು ಹೊಂದುತ್ತವೆ. ಸಾಮಾಜಿಕ ಬದಲಾವಣೆ ಎಂದರೆ ಸ್ಥೂಲವಾಗಿ 'ಸಾಮಾಜಿಕ ಸಂಬಂಧಗಳಲ್ಲಿ ಆಗುವ ಬದಲಾವಣೆಗಳು' ಎಂದು ಹೇಳಬಹುದು. ಸಾಮಾಜಿಕ ಸಂಬಂಧಗಳು ಅನೇಕ ವಿಧವಾಗಿರುತ್ತವೆ. ಈ ಸಂಬಂಧಗಳು ಸಮಾಜದಲ್ಲಿ ಒಂದಕ್ಕೊಂದು ಬಲೆಯಂತೆ ಹೆಣೆದುಕೊಂಡಿರುತ್ತವೆ. ಯಾವುದಾದರೂ ಒಂದು ಸಂಬಂಧದಲ್ಲಿ ಬದಲಾವಣೆಯಾದರೂ ಸಾಧಾರಣವಾಗಿ ಉಳಿದ ಸಂಬಂಧಗಳಲ್ಲಿ ಹಲವು ರೀತಿಯ ಬದಲಾವಣೆಗಳಿಗೆ ದಾರಿಯಾಗಬಹುದು. ಈ ಬದಲಾವಣೆಗಳು ಸರ್ವವ್ಯಾಪಕವಾದುದರಿಂದ ನಾವು ಸಮಾಜವನ್ನು ನಿತ್ಯ ಪರಿವರ್ತನಶೀಲವೆಂದು ಹೇಳುತ್ತೇವೆ.

ಪ್ರತಿಯೊಂದು ಸಮಾಜವೂ ಪರಿವರ್ತನಶೀಲವಾದುದು. ಆದರೆ ಹಲವು ಬುಡಕಟ್ಟು ಸಮುದಾಯದ ಸಮಾಜಗಳಲ್ಲಿ ಸಂಪ್ರದಾಯದ ಪ್ರಭಾವವು ಹೆಚ್ಚಾಗಿರುವುದರಿಂದ, ಅವುಗಳಲ್ಲಿ ಯಾವ ಬದಲಾವಣೆಯೂ ಆಗುತ್ತಿಲ್ಲವೆಂಬ ಭಾವನೆಯು ಮೂಡುತ್ತದೆ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವುಗಳಲ್ಲಿಯೂ ಬದಲಾವಣೆಗಳು ಗೋಚರಿಸುತ್ತವೆ. ಅವುಗಳ ತೀವ್ರತೆ ಮತ್ತು ವ್ಯಾಪಕತೆಗಳು ಆಧುನಿಕ ಸಮಾಜದಲ್ಲಿರುವಷ್ಟು ಇರುವುದಿಲ್ಲ. ಇಂದಿನ ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳ ವೇಗವೂ ಸಾಮಾಜಿಕ ಪರಿವರ್ತನೆಯೂ ಆಧುನಿಕ ಸಮಾಜದಲ್ಲಿ ಮಾತ್ರ ನಡೆಯುತ್ತಿರುವ ವಿಷಯವೆಂಬ ಭ್ರಾಂತಿಯನ್ನು ಮೂಡಿಸುತ್ತದೆ. ಈ ಅನಂತ ಬದಲಾವಣೆಗಳು ನಮ್ಮನ್ನು ದಿಗ್ಭ್ರಮೆಗೊಳಿಸಿ ಸಮಾಜವು ಗುರಿ ಇಲ್ಲದೆ ಚಲನೆಗೆ ತುತ್ತಾಗಿದೆ ಎಂಬ ಭಾವನೆಯನ್ನು ಮೂಡಿಸುತ್ತವೆ. ಆದರೆ, ಪ್ರತಿಯೊಂದು ಸಮಾಜದಲ್ಲಿ ಬದಲಾವಣೆಯು ಹೇಗೆ ನೈಜವೋ ಹಾಗೆಯೇ ಸ್ಥಿರತೆಯ ಅಂಶ ಅದರ ಜೀವನದ ಹಾಸುಹೊಕ್ಕಾಗಿರುತ್ತದೆ. ಸಮಾಜವು ನಿತ್ಯ ಪರಿವರ್ತನಶೀಲವಾದರೂ ಅದರ ಸಂಗಡ ಸ್ಥಿರತೆಯು ಅದರ ಅವಿಭಾಜ್ಯ ಅಂಶವಾಗಿರುತ್ತದೆ. ಸಮಾಜವು ವಿವಿಧ ನಿಯಂತ್ರಣ ಸಾಧನಗಳ ಮೂಲಕ ತನ್ನ ಸ್ಥಿರತೆಯನ್ನು ಕಾಪಾಡಿಕೊಂಡು ಬರುತ್ತದೆ. ಸಮಾಜದ ಸಮಸ್ಥಿತಿಯು ಚಲನಾತ್ಮಕವಾದುದು. ಅದು ನಿರ್ಜೀವ ವಸ್ತುವಿನ ಜಡ ಸಮಸ್ಥಿತಿಯಲ್ಲ. ಸಮಾಜವು ನಿತ್ಯಪರಿವರ್ತನಶೀಲವಾದ ಪ್ರಕ್ರಿಯೆಯಾದುದರಿಂದ ಅದು ಚಲನಾತ್ಮಕ ಸಮಸ್ಥಿತಿಯನ್ನು ಹೊಂದಿರುತ್ತದೆ.

ಸಾಮಾಜಿಕ ಬದಲಾವಣೆಗೂ ಮತ್ತು ನೈಸರ್ಗಿಕ ಬದಲಾವಣೆಗೂ ಇರುವ ವ್ಯತ್ಯಾಸವನ್ನು ಇಲ್ಲಿ ಸೂಚಿಸುವುದು ಅಗತ್ಯ. ಬಹುತೇಕವಾಗಿ ಸಾಮಾಜಿಕ ಬದಲಾವಣೆಯು ಮಾನವನು ಬುದ್ಧಿಪೂರ್ವಕವಾಗಿ ನಿಯೋಜಿಸಿದುದು. ಅನೇಕ ಸಂದರ್ಭಗಳಲ್ಲಿ ಬದಲಾವಣೆಗಳು ನಾವು ಯೋಚಿಸಿದಷ್ಟು ಸರಳವಾಗಿರದೇ ಇರಬಹುದು. ಹಲವು ಸಂದರ್ಭಗಳಲ್ಲಿ ನಮ್ಮ ಊಹೆಗೆ ನಿಲುಕದಂತೆ ಬದಲಾವಣೆಗಳಾಗಬಹುದು. ಯಂತ್ರಗಳ ಉಪಯೋಗದಿಂದ ಸಮಾಜದಲ್ಲಾಗಿರುವ ವಿವಿಧ ಬದಲಾವಣೆಗಳು ಇದಕ್ಕೆ ಸಾಕ್ಷಿ. ಸಾಮಾಜಿಕ ಬದಲಾವಣೆಯ ಅಧ್ಯಯನದಲ್ಲಿ ಸಾಮಾಜಿಕ ಮೌಲ್ಯಗಳ ಅರಿವು ಅಗತ್ಯ. ಇಲ್ಲವಾದರೆ ಬದಲಾವಣೆಗಳು ಅರ್ಥವಿಲ್ಲದ

ಸಂಗತಿಗಳಾಗುತ್ತವೆ. ಸಾಮಾಜಿಕ ಮೌಲ್ಯಗಳು ವಿವಿಧ ಕಾಲಗಳಲ್ಲಿ ವಿವಿಧ ಸಮಾಜಗಳಲ್ಲಿ ಭಿನ್ನವಾಗಿರುತ್ತವೆ. ಇದಲ್ಲದೆ ಸಾಮಾಜಿಕ ಮೌಲ್ಯಮಾಪನವು ವಿವಿಧ ಸಮಸ್ಯೆಗಳಿಂದ ಕೂಡಿದೆ. ಎಲ್ಲ ಕಾಲ ದೇಶಗಳಲ್ಲಿ ಇರುವ ಮೌಲ್ಯಗಳನ್ನು ಅಳೆಯಲು ಒಂದು ಸಾಮಾನ್ಯ ಮಾಪಕವು ದೊರೆಯುವುದಿಲ್ಲ. ಈ ಸಮಸ್ಯೆಗಳ ವಿಶ್ಲೇಷಣೆ ಈ ಅಧ್ಯಾಯದ ಉದ್ದೇಶವಲ್ಲ. ಆದರೆ ಸಾಮಾಜಿಕ ಮೌಲ್ಯಗಳ ಅಸ್ತಿತ್ವವನ್ನು ಗ್ರಹಿಸಲಾಗಿದೆ. ನಾವು ಸಾಮಾಜಿಕ ಬದಲಾವಣೆಯ ಅರ್ಥವನ್ನು ತಿಳಿಯುವುದು ಸಾಧ್ಯ ಎಂಬ ವಿಚಾರವನ್ನು ನೆನಪಿನಲ್ಲಿಡಬೇಕು. ಬದಲಾವಣೆಗಳನ್ನು ನಿರೂಪಿಸುವಾಗ ಅಧ್ಯಯನಕಾರರು ತಮ್ಮ ವೈಯಕ್ತಿಕ ಮೌಲ್ಯಗಳ ದೃಷ್ಟಿಯಲ್ಲಿ ನೋಡಬಾರದು.

ಭೌಗೋಳಿಕ ವಿಪರ್ಯಾಸಗಳು, ಜನಸಂಖ್ಯೆಯ ಏರಿಳಿತಗಳು, ಜನಸಂಖ್ಯೆಯ ಸಾಂದ್ರತೆಯ ಪ್ರಮಾಣದಲ್ಲಾಗುವ ವ್ಯತ್ಯಾಸಗಳು, ಜನರ ವಲಸೆಯ ಪರಿಪ್ರಮಾಣ ದಿಕ್ಕುಗಳು, ಆರ್ಥಿಕ ಅಭಿವೃದ್ಧಿಯ ಅವನತಿಗಳು, ಸಾರಿಗೆ ಸಂಪರ್ಕಗಳ ಹೆಚ್ಚಳ ಅಥವಾ ಇಳಿಮುಖ, ಯಾಂತ್ರೀಕರಣದ ವೇಗ ವಿದೇಶಿ ಸಂಸ್ಕೃತಿಗಳ ಸಂಪರ್ಕ ಸಂಬಂಧಗಳು, ಕಾಯ್ದೆ ಕಾನೂನುಗಳ ಜಾರಿಗೊಳಿಸುವಿಕೆ ಹಿಂತೆಗೆದುಕೊಳ್ಳುವಿಕೆ, ನಗರೀಕರಣದ ಪ್ರಮಾಣ, ಸಮಾಜಕಲ್ಯಾಣ ಸೇವೆಗಳ ಅನುಷ್ಠಾನ ಸ್ಥಗಿತ, ವಿದ್ಯಾವ್ಯಾಸಂಗದ, ಪ್ರಸಾರಾದ ಇತ್ಯಾದಿಗಳು ಕಾರಣ ವಿಶೇಷಗಳಾಗಿ ಸಾಮಾಜಿಕ ರಚನೆಯಲ್ಲಿ, ಸಾಂಸ್ಕೃತಿಕ ಚೌಕಟ್ಟಿನಲ್ಲಿ ಬದಲಾವಣೆಯನ್ನು ತರಲಾಗಿದೆ.

ಪರಿವರ್ತನೆಯು ಸಮಾಜದ ಬೆಳವಣಿಗೆಯ ಲಕ್ಷಣವಾಗಿದೆ. ಪರಿವರ್ತನೆ ತನ್ನಷ್ಟಕ್ಕೆ ತಾನೇ ಉಂಟಾಗುವುದಿಲ್ಲ. ಹಲವಾರು ಕಾರಣಗಳು ಪರಿವರ್ತನೆಗೆ ಎಡೆಮಾಡಿ ಕೊಡುತ್ತವೆ. ಮಾನವನ ಅಂತರ್ಗತ ಜೀವನಕ್ಕೆ ಸಂಬಂಧಿಸಿದ ಸಂಗತಿಗಳು ಸಮಾಜದಲ್ಲಿ ಬದಲಾವಣೆ ಉಂಟುಮಾಡಬಹುದು. ಇಲ್ಲವೆ ಬಾಹ್ಯ ಪರಿಸರದ ಯಾವುದೇ ಅಂಶಗಳು ಬದಲಾವಣೆಗೆ ಪ್ರೇರಕವಾಗಬಹುದು. ಕಾರಣಗಳಲ್ಲಿ ಭೌಗೋಳಿಕ ಅಥವಾ ಭೌತಿಕ, ಜೈವಿಕ ಯಂತ್ರಜ್ಞಾನದ ಮತ್ತು ಸಾಂಸ್ಕೃತಿಕ ಅಂಶಗಳು ಪ್ರಾಮುಖ್ಯವಾದುವು. ಆದರೂ ಯಾವುದೇ ಪರಿಣಾಮಕ್ಕೆ ಇದೇ ಕಾರಣ ಎಂದು ಬೆರಳು ಮಾಡಿ ತೋರಿಸುವುದು ಕಷ್ಟಸಾಧ್ಯ. ಅಸಮಂಜಸ ಕೂಡ. ಏಕೆಂದರೆ ಜೀವನವು ಅಖಂಡವಾದುದು ಬದಲಾವಣೆಯೂ ಅಷ್ಟೇ. ಇಂದು ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳಲ್ಲಾದ ಮುನ್ನಡೆಯು ವಿಶ್ವದ ಉದ್ದಗಲಕ್ಕೂ ಹಲವಾರು ತೆರನಾದ ಬದಲಾವಣೆಗಳಿಗೆ ಪ್ರಮುಖ ಕಾರಣವಾಗಿದೆ. ಸದ್ಯ ನಾವು ಭಾರತವನ್ನು ಅನುಲಕ್ಷಿಸಿ ಜನಸಂಖ್ಯೆಯು ಸಾಮಾಜಿಕ ಬದಲಾವಣೆಗೆ ಒಂದು ಮೂಲಕಾರಣವಾಗಿದೆ ಎಂಬ ಬಗೆಗೆ ಮಾತ್ರ ವಿಶ್ಲೇಷಿಸಬೇಕಾಗಿದೆ.

ಭಾರತದಲ್ಲಿ ಬ್ರಿಟೀಷರ ಆಡಳಿತ ಔದ್ಯೋಗಿಕತೆಯನ್ನು ತರಲಾಯಿತು. ಇದರಿಂದ ಸಾಮಾಜಿಕ ಸಂಚಲನ ಪ್ರಕ್ರಿಯೆ ಹೆಚ್ಚು ಮಹತ್ವ ಪಡೆಯಿತು. ಕೆಲವು ಅನಿಷ್ಠಗಳನ್ನು [ತನ್ನ ಸದಸ್ಯರನ್ನು ಜಾತಿಯಿಂದ ಹೊರಹಾಕುವುದು ಇತ್ಯಾದಿ] ಹೋಗಲಾಡಿಸಲು, ಸ್ಥಳೀಯ ನ್ಯಾಯಾಲಯಗಳಲ್ಲಿ ಬಗೆ ಹರಿಸಿಕೊಳ್ಳಲು ಅನುಕೂಲವಾಗುವಂತೆ, ಕಾನೂನು ಕಾಯಿದೆಗಳನ್ನು ಜಾರಿಗೆ ತರಲಾಯಿತು.

ಸ್ವಾತಂತ್ರ್ಯ ಬಂದನಂತರ ಸಂವಿಧಾನಾತ್ಮಕ ಮತ್ತು ಶಾಸನಬದ್ಧ ಅನುಕೂಲಗಳು ಈ ಪ್ರಕ್ರಿಯೆಯನ್ನು ಮತ್ತಷ್ಟು ಚುರುಕುಗೊಳಿಸಿದವು.೮

ಕೈಗಾರೀಕರಣ ಮತ್ತು ಆಧುನಿಕ ಶಿಕ್ಷಣಗಳಿಂದ ಶ್ರೇಣೀಕೃತ ಜಾತಿ ವ್ಯವಸ್ಥೆ ಮತ್ತು ವೃತ್ತಿ ರಚನೆಗಳ ನಡುವಿನ ಅಪಸರಣ ಕ್ಷೀಣಿಸಿ ಜಾತ್ಯಾತೀತ ಉದ್ಯೋಗಗಳ ಹುಟ್ಟಿಗೆ ಕಾರಣವಾಯಿತು. ಮುಂದೆ ಅದು ಮಾನವ ಸಮುದಾಯಕ್ಕೆ ಹೊಸ ಬಗೆಯ ಜ್ಞಾನ ಮತ್ತು ಕೌಶಲ್ಯಗಳನ್ನು ದೊರಕಿಸಿಕೊಡಲು ಸಹಾಯಕವಾಯಿತು. ಔದ್ಯೋಗಿಕ ಶೋಧನೆಗಳು ಸಮಾಜದ ಕೆಳಸ್ತರದ ಜನರು ಸುಲಭವಾಗಿ ನಿರ್ವಹಿಸಲು ಸಾಧ್ಯವಾಗುವ ಉದ್ಯೋಗಾವಕಾಶಗಳನ್ನು ಕಲ್ಪಿಸಲಾಯಿತು. ಜೊತೆ ಜೊತೆಯಲ್ಲೇ ಹೊಸ ಸ್ಥಾನಮಾನಗಳನ್ನು ಸೃಷ್ಟಿಸಿದವು. ಇದು ಪ್ರತಿಯೊಂದು ಮಾನವ ಗುಂಪು ಕೂಡ ಜಾತಿ ಕಸುಬಿನಿಂದ ಜಾತ್ಯಾತೀತ ಕಸುಬಿಗೆ ಹೋಗಲು ಅನುವುಮಾಡಿಕೊಟ್ಟಿತು. ಕೈಗಾರೀಕರಣದಿಂದ ಈ ಸಾಮಾಜಿಕ ಚಲನೆ ಮಾನವ ಗುಂಪುಗಳು ಜಾತಿ ವರ್ತುಲದಿಂದಾಚೆಗೆ ಬರುವಂತೆ ಆಗಿದ್ದು ಹೆಚ್ಚುಗಾರಿಕೆಯೇ ಸರಿ. ಎಲ್ಲಾ ಬಗೆಯ ವೃತ್ತಿ ಗುಂಪುಗಳು ರಕ್ತ ಸಂಬಂಧಗಳಿಂದ ಮುಕ್ತಗೊಂಡು ಅಧಿಕಾರಶಾಹಿ ತತ್ವದ ಆಧಾರದ ಮೇಲೆ ಕೈಗಾರಿಕೆಗಳು ಸಂಘಟಿತವಾದವು. ಪರಂಪರಾಗತ ವೃತ್ತಿಗಳನ್ನು ಕೈಬಿಟ್ಟು ಹೊಸ ವೃತ್ತಿಯನ್ನು ಅವಲಂಬಿಸಬೇಕಾದ ಅನಿವಾರ್ಯತೆ ಎದುರಾಯಿತು.

ಸಮುದಾಯ ಮತ್ತು ವೃತ್ತಿಗಳ ಸಂಬಂಧದ ಬದಲಾವಣೆ ಪ್ರಮುಖವಾಗಿ ಈ ಕೆಳಕಂಡ ಹಂತಗಳಲ್ಲಿ ಸಂಭವಿಸುತ್ತದೆ.

* ಬುಡಕಟ್ಟು ಸಮುದಾಯಗಳು ವೃತ್ತಿಯಲ್ಲಿ ಮೇಲೇರಿ ಮೇಲು ವರ್ಗದ ಉದ್ಯೋಗಗಳನ್ನು ಅಳವಡಿಸಿಕೊಳ್ಳುವುದು.
* ಸಮುದಾಯ ಮುಕ್ತ ವೃತ್ತಿಯನ್ನು ಅವಲಂಬಿಸುವುದು.
* ಬುಡಕಟ್ಟು ಸಮುದಾಯವು ತಮ್ಮ ಮೂಲ ಉದ್ಯೋಗ ತೊರೆದು ಸಮಾಜದ ಕೆಳವರ್ಗದ ಕಸುಬನ್ನು ಅವಲಂಬಿಸುವುದು.
* ಪರಂಪರಾಗತ ವೃತ್ತಿಯಲ್ಲಿ ಮುಂದುವರೆದು ಸಮುದಾಯದ ಉದ್ಯೋಗ ಮುಂದುವರಿಸಿಕೊಂಡು ಹೋಗುವುದು.

ಸಾಮಾಜಿಕ ಸ್ಥಾನಮಾನದ ದೃಷ್ಟಿಕೋನಗಳಿಂದ ಮೊದಲು ಎರಡು ಗುಂಪಿನಲ್ಲಿ ಬದಲಾವಣೆಯ ದಿಕ್ಕು ಊರ್ಧ್ವ ಮುಖವಾಗಿದ್ದರೆ ಕೊನೆಯ ಎರಡರಲ್ಲಿ ಅಧೋ ಮುಖವಾಗಿ ಸಾಗುವುದು ಗೋಚರಕ್ಕೆ ಬರುತ್ತದೆ. ಪಂಗಡ ಶ್ರೇಣಿ, ವೃತ್ತಿಗೌರವ, ಶಿಕ್ಷಣ ಸೌಲಭ್ಯ, ಕೈಗಾರಿಕಾ ಕ್ಷೇತ್ರದ ಸೇವೆ ಇವುಗಳ ವಿಸ್ತರಣೆಯಿಂದ ಮೊದಲಿನ ಎರಡರಲ್ಲಿ ಮಹತ್ತರ ಬದಲಾವಣೆ ಸಾಧಿತವಾಗುತ್ತವೆ.

ಬುಡಕಟ್ಟು ಸಮುದಾಯ ಮತ್ತು ವೃತ್ತಿಯ ನಡುವಣ ಸಂಬಂಧದಲ್ಲಿನ ಬದಲಾವಣೆಯ ಸಾಮಾಜಿಕ, ಆರ್ಥಿಕ ಅಂಶಗಳು ಗಮನಾರ್ಹ ಪಾತ್ರ ವಹಿಸುತ್ತದೆ. ಬದಲಾವಣೆಯನ್ನು ತೀವ್ರಗೊಳಿಸುವ ಇಲ್ಲವೆ ಕುಂಠಿತಗೊಳಿಸುವ ಅಂಶಗಳಲ್ಲಿ ಮಾನವ

ಗುಂಪಿನ ವೃತ್ತಿ ಅದು ಪಡೆದ ಶಿಕ್ಷಣ, ಭೂ ಒಡೆತನ ಆ ಪ್ರದೇಶದ ಅಭಿವೃದ್ಧಿ ಸ್ಥಿತಿಗತಿಗಳು ಮುಖ್ಯವಾದವು.

ಸಾಂಪ್ರದಾಯಿಕವಾಗಿ ಬುಡಕಟ್ಟು ಸಮುದಾಯಗಳು ತಮ್ಮ ವೃತ್ತಿಯ ಬಗ್ಗೆ ವ್ಯಾಮೋಹ ಕಡಿಮೆಯಾಗಿ ಸಾಮಾನ್ಯವಾಗಿ ಉನ್ನತ ಸ್ಥಾನಮಾನ, ಗೌರವಗಳನ್ನು ತಂದುಕೊಡುವ ವೃತ್ತಿಗಳನ್ನೇ ಕೈಗೊಳ್ಳುವುದು ಸಾಮಾನ್ಯ. ಅಂತೆಯೇ ಬುಡಕಟ್ಟು ಸಮುದಾಯಗಳ ಕಸುಬುಗಳೆಂದು ಪರಿಗಣಿತವಾದವನ್ನು ಈ ಸಮುದಾಯಕ್ಕೆ ಸೇರಿದವರೇ ನಿರ್ವಹಿಸುವುದು ಸ್ವಾಭಾವಿಕವಾಗಿತ್ತು. ಬದಲಾದ ಸನ್ನಿವೇಶದಲ್ಲಿ, ಕೈಗಾರೀಕರಣ ಮತ್ತು ಆಧುನೀಕರಣದಿಂದಾಗಿ ಸಾಕಷ್ಟು ಬದಲಾವಣೆಗಳಾಗಿದ್ದರೂ, ಬಹು ಸಂಖ್ಯಾತರು ಇನ್ನೂ ತಂತಮ್ಮ ಪರಂಪರಾಗತ ವೃತ್ತಿಯಲ್ಲೇ ಮುಂದುವರೆದಿರುವುದು ವಾಸ್ತವ ಸಂಗತಿ. ತಮ್ಮ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವ ದೃಷ್ಟಿಯಿಂದ ಸಮುದಾಯದ ಕಸುಬನ್ನು ತೊರೆದು ಹೋದವರಲ್ಲಿ ಬಹುಮಟ್ಟಿಗೆ ಹೆಚ್ಚಾಗಿದ್ದಾರೆ. ಈ ಪರಿಸ್ಥಿತಿಯಲ್ಲಿ ಮುಂದುವರೆದ ಸಮಾಜಗಳ ಜನತೆ ತಮ್ಮ ಸಮಾಜದಲ್ಲಿನ ಮೊದಲಿನ ಸ್ಥಾನಮಾನಗಳನ್ನು ಉಳಿಸಿಕೊಳ್ಳುವುದು ಕಷ್ಟಕರವಾಗಿದೆ. ಹೀಗೆ ಊರ್ಧ್ವಗಾಮಿ ಸಂಚಲನೆಯನ್ನು ಬುಡಕಟ್ಟು ಸಮುದಾಯವನ್ನು ನಿಚ್ಚಳವಾಗಿ ಗುರುತಿಸಬಹುದು.

ಪ್ರಸ್ತುತ ಅಧ್ಯಯನವು ವೃತ್ತಿ ಮತ್ತು ಸಮುದಾಯದಿಂದ ಸಮುದಾಯಗಳು ಕಳಚಿಕೊಳ್ಳುತ್ತಿರುವ ಬುಡಕಟ್ಟು ಯಾವ ದಿಕ್ಕಿನಲ್ಲಿ ಸಾಗುತ್ತಿವೆ ಎಂಬುದನ್ನು ಸ್ಪಷ್ಟಪಡಿಸುವ ಪ್ರಯತ್ನ ಮಾಡಲಾಗಿದೆ.

## ಕೌಟುಂಬಿಕ ಸಂರಚನೆ ಮತ್ತು ಆಧುನಿಕತೆ

ಕುಟುಂಬ ಎಂಬ ಪದವು ಆಂಗ್ಲ ಭಾಷೆಯ Family ಎಂಬ ಪದದಿಂದ ಬಂದಿದ್ದು ಇದಕ್ಕೆ ಲ್ಯಾಟಿನ್ ಭಾಷೆಯ ಫ್ಯಾಮ್ಯುಲಸ್ ಎಂಬ ಮೂಲ ಪದದಿಂದ ಉತ್ಪತ್ತಿಯಾಗಿದೆ. ಫ್ಯಾಮ್ಯುಲಸ್ ಎಂದರೆ 'ಆಳು' ಎಂಬಂರ್ಥಗಳುಂಟು. ಆದರೆ ಇಂದು ಸಮಾಜಶಾಸ್ತ್ರೀಯ ನೆಲೆಯಲ್ಲಿ ಕುಟುಂಬದ ಸದಸ್ಯರೆಂದು ಪರಿಗಣಿಸಿರುವುದು ಕಂಡುಬರುತ್ತದೆ.

"ಸಂತತಿ ಸಹಿತವಾಗಿ ಇಲ್ಲವೇ ಸಂತತಿರಹಿತವಾಗಿ ಗಂಡ-ಹೆಂಡತಿಯರು ಕೂಡಿ ಆಗಿರುವ, ಅಥವಾ ಸ್ತ್ರೀ ಅಥವಾ ಪುರುಷನೋರ್ವನೇ ಮಕ್ಕಳಿಂದೊಡಗೂಡಿ ಆಗಿರುವ, ಮತ್ತು ಹೆಚ್ಚು ಕಡಿಮೆ ಬಹುಕಾಲ ಬಾಳುವ ಸಂಘವೇ ಕುಟುಂಬ" ೯ ಎಂದು ಎಂ. ಎಸ್. ನಿಮ್‌ಕಾಫ್‌ರವರು ವ್ಯಾಖ್ಯಾನಿಸುತ್ತಾರೆ. ಒಟ್ಟಾರೆಯಾಗಿ ಕುಟುಂಬ ಎಂಬ ಪದವು ಸಾಮಾಜಿಕ ಸಂಸ್ಥೆಗಳಲ್ಲಿ ಅತ್ಯಂತ ಮೂಲಭೂತ ಸ್ವರೂಪದ ಸಾರ್ವತ್ರಿಕವಾದ ಹಾಗೂ ಮಹತ್ವ ಪೂರ್ಣವಾದ ಪಾತ್ರವನ್ನು ವಹಿಸುವ ಸಂಸ್ಥೆ ಎನಿಸಿಕೊಂಡಿದೆ.

ಕುಟುಂಬವು ಸರ್ವ ವ್ಯಾಪಕವಾಗಿದ್ದು, ಇದು ದಾಂಪತ್ಯ ಪ್ರೇಮ, ಮಾತೃಪ್ರೇಮ, ಪಿತೃ ವಾತ್ಸಲ್ಯ, ಭ್ರಾತೃ ಪ್ರೇಮ, ವಾತ್ಸಲ್ಯ, ಪ್ರೀತಿ ಕರುಣೆ ಮುಂತಾದ ಭಾವನಾತ್ಮಕ ನೆಲೆಯ ಮೇಲೆ ರಚಿತವಾದುದ್ದಾಗಿದೆ. ಕುಟುಂಬವು ಗಾತ್ರದಲ್ಲಿ ಚಿಕ್ಕದಾಗಿದ್ದು ಒಂದು ಉತ್ಕೃಷ್ಟ ಪ್ರಾಥಮಿಕ ಸಮೂಹವಾಗಿ ಸೇವೆ ಸಲ್ಲಿಸುವುದು. ಮಿಕ್ಕೆಲ್ಲ ಬಗೆಯ ಸಮೂಹಗಳಿಗಿಂತಲೂ ಕುಟುಂಬವು ವ್ಯಕ್ತಿತ್ವದ ಮೇಲೆ ಬೀರುವ ಪ್ರಭಾವವು ಅಪಾರವಾದುದ್ದಾಗಿದೆ. ಕುಟುಂಬಕ್ಕೆ ಅದರ ಪ್ರಾಮುಖ್ಯದ ಕಾರಣದಿಂದಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಕೇಂದ್ರ ಸ್ಥಾನವಿದೆ. ಕುಟುಂಬದ ಸದಸ್ಯರು ವಿಶೇಷ ಜವಾಬ್ದಾರಿಗಳೊಂದಿಗೆ ವರ್ತಿಸುವರು. ಕುಟುಂಬದಂತಹ ಸಂಸ್ಥೆಯನ್ನು ಸೂಕ್ತ ಕಾನೂನು-ಕಟ್ಟುಪಾಡುಗಳ ಮೂಲಕ ರಕ್ಷಿಸುವ ನಿಯಂತ್ರಿಸುವ ವ್ಯವಸ್ಥೆ ಎಲ್ಲಾ ಕಡೆಗಳಲ್ಲೂ ಇದೆ. ಸಾಂಸ್ಥಿಕ ರೂಪದಲ್ಲಿ ಕಂಡುಬರುವ ಕುಟುಂಬವು ಶಾಶ್ವತ ಸ್ವರೂಪದ್ದಾಗಿರುತ್ತದೆ.

ಕುಟುಂಬ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಮಾತೃವಂಶೀಯ ಮತ್ತು ಪಿತೃವಂಶೀಯ ಕುಟುಂಬ ವ್ಯವಸ್ಥೆಗಳು ಕಂಡು ಬರುತ್ತದೆ. ಪ್ರಮುಖವಾಗಿ ಬುಡಕಟ್ಟು ಸಮುದಾಯಗಳು ಮಾತೃ ವಂಶೀಯ ಕುಟುಂಬ ವ್ಯವಸ್ಥೆಯನ್ನು ಹೊಂದಿರುತ್ತಾರೆ. ಈ ಬಗೆಯ ಕುಟುಂಬದಲ್ಲಿ ಪ್ರಮುಖವಾಗಿ ಯಜಮಾನಿಕೆಯ ಸೂತ್ರದಾರಿಕೆಯು ತಾಯಿ ಮತ್ತು ಹೆಂಡತಿಯಾಗಿರುತ್ತಾಳೆ.

ಒಂದು ಸಮುದಾಯದ ಜೀವನ ಶೈಲಿ ಆ ಸಮುದಾಯದ ಸಂಸ್ಕೃತಿ ಮತ್ತು ಪರಂಪರೆಯಲ್ಲಿನ ಮೌಲ್ಯಗಳನ್ನು ಆಧರಿಸಿ ರೂಪುಗೊಂಡಿರುತ್ತದೆ. ಸಂಸ್ಕೃತಿ ಆಂತರಿಕ ಮತ್ತು ಬಾಹ್ಯ ಒತ್ತಡಗಳಿಂದಾಗಿ ಬದಲಾಗುವ ಸಾವಯವ ಸಾರ ಭೂತವಾದ್ದರಿಂದ ಆಯಾ ಬದಲಾವಣೆಗಳಿಗೆ ತಕ್ಕಂತೆ ಜೀವನ ವಿಧಾನವೂ ಆಗಾಗ ಮಾರ್ಪಾಡಿಗೆ ಒಳಗಾಗುತ್ತದೆ.೧೦ ಇರುಳಿಗರು ಕೂಡ ಈ ಹೇಳಿಕೆಯಂತೆಯೇ ತಮ್ಮ ಮೌಲ್ಯಗಳನ್ನು ಉಳಿಸಿಕೊಳ್ಳುವುದರ ಜೊತೆಗೆ ಕಾಲ, ದೇಶ ಪರಿಸರಕ್ಕನುಗುಣವಾಗಿ ಬದಲಾವಣೆಗೆ ಪಕ್ಕಾಗಿದ್ದಾರೆ.

## ಇರುಳಿಗರ ಕೌಟುಂಬಿಕ ಸಂರಚನೆ ಮತ್ತು ಆಧುನಿಕತೆ

ಇರುಳಿಗರಲ್ಲಿ ಪ್ರಮುಖವಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಕಂಡುಬರುತ್ತದೆ. ಇರುಳಿಗರು ಕಳೆದ ೨೦-೩೦ ವರ್ಷಗಳ ಹಿಂದೆ ತಾವು ಕಟ್ಟಿಕೊಳ್ಳುತ್ತಿರುವ ಗೂಡುಗಳು ತೀರಾ ಸರಳವಾದ ರಚನೆಯಿಂದ ಕೂಡಿದ ಮಾದರಿಯಾಗಿತ್ತು. ಅನ್ಯರ ನೆರವಿಲ್ಲದೆ ತನ್ನ ಕುಟುಂಬದ ಹೆಂಡತಿ ಮಕ್ಕಳ ಸಹಾಯದೊಡನೆ ಕುಟುಂಬದ ಯಜಮಾನ ಗುಡಿಸಲನ್ನು ತೀವ್ರಗತಿಯಲ್ಲಿ ನಿರ್ಮಾಣ ಮಾಡುತ್ತಾನೆ. ಕುಟುಂಬ ಹಿರಿದಾದಂತೆಲ್ಲಾ ಗುಡಿಸಲು ಇಕ್ಕಟ್ಟಾದಂತೆಲ್ಲಾ ಹೊಸ ಹೊಸ ಗೂಡುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಅವಿಭಕ್ತ ಕುಟುಂಬ ವ್ಯವಸ್ಥೆಯಾದರೂ ಮನೆ ಚಿಕ್ಕದಾಗಿ ನಿರ್ಮಿಸಿದ್ದರಿಂದ ಅನಿವಾರ್ಯವಾಗಿ ಹೊಸ ಗೂಡುಗಳು ಹುಟ್ಟಿಕೊಳ್ಳುತ್ತವೆ. ಆದರೂ ಪತಿ-ಪತ್ನಿ ಸಹೋದರಿ-ಸಹೋದರ ಎಲ್ಲರ ಸಂಬಂಧವೂ

ಅನ್ಯೋನ್ಯತೆಯಿಂದ ಕೂಡಿರುತ್ತದೆ. ತಂದೆ-ತಾಯಿ, ಅಣ್ಣ-ಅತ್ತಿಗೆ, ಮೈದುನ-ಅತ್ತಿಗೆ, ಮಾವ-ನಾದಿನಿ, ಸೋದರತ್ತೆ-ಸೋದರಮಾವ, ಚಿಕ್ಕಪ್ಪ-ಚಿಕ್ಕಮ್ಮ, ದೊಡ್ಡಪ್ಪ-ದೊಡ್ಡಮ್ಮ, ತಾತಾ-ಅಜ್ಜಿ, ಮೊಮ್ಮಗ-ಮೊಮ್ಮಗಳು ಹೀಗೆ ಇತರ ಸಮುದಾಯಗಳ ಸಂಬಂಧ ಸೂಚಕಗಳೇ ಇರುಳಿಗರಲ್ಲಿಯೂ ಕೂಡ ಬಳಕೆಯಲ್ಲಿದೆ.

ವಿವಾಹದ ನಂತರ ಹೆಣ್ಣು-ಗಂಡನ ಮನೆತನಕ್ಕೆ ಸೇರುತ್ತಾಳೆ. ಹೀಗಾಗಿ ಮಕ್ಕಳನ್ನು ತಂದೆಯ ಮನೆ ಕಡೆಯವರ ಹೆಸರು ಅಥವಾ ಅವರ ದೇವರ ಹೆಸರುಗಳಿಂದ ಕರೆಯುತ್ತಾರೆ.

**ಕೂಡಾವಳಿ :**

ಬುಡಕಟ್ಟು ಸಮುದಾಯದ ಬದುಕಿನಲ್ಲಿ ರೂಢಿಯಿರುವ ಕೂಡಿಕೆ ಪದ್ಧತಿ ಇಲ್ಲಿಗರಲ್ಲಿಯೂ ಇದೆ. ಗಂಡ ಸತ್ತು ಪ್ರಾಯವಿರುವ ಹೆಂಗಸನ್ನು, ಹೆಂಡಿರು ಸತ್ತ ಗಂಡಸಾಗಲೀ ರೋಗದ ಹೆಂಡತಿಯ ಗಂಡನಾಗಲಿ ಕಟ್ಟಿಕೊಳ್ಳುವುದು ಅಥವಾ ಕೂಡಿಕೆ ಮಾಡಿಕೊಳ್ಳುವುದು ಒಂದು ರೀತಿಯಾದರೆ, ಗಂಡನಿಲ್ಲದೆ ಹೆಂಡತಿ ನಾನಾ ಕಾರಣಕ್ಕೆ ಹೊಂದಾಣಿಕೆಯಿಲ್ಲದ ಸಂಸಾರ, ನಡತೆ ಕೆಟ್ಟ ಪತ್ನಿ, ಲೈಗಿಂಕ ತೃಪ್ತಿಕೊಡದ ಹೆಂಡತಿ, ಹೀಗೆ ಗಂಡನಿಂದ ಬಹಿಷ್ಕೃತಳಾಗಿದ್ದು ಮಾನಸಿಕ ಶಾರೀರಿಕ ಧರ್ಮಕ್ಕನುಗುಣವಾಗಿ ಬೇರೊಬ್ಬ ಗಂಡನ್ನು ಒಲಿದು ಕೂಡುವುದು ಕೂಡಿಕೆಯಾಗುತ್ತದೆ.

ಕೂಡಿಕೆ ಮಾಡಿಕೊಳ್ಳುವ ಆತನ ಹೆಂಡತಿ ಸತ್ತಿದ್ದರೆ ಆಕೆಗೆ ಸಂಬಂಧಿಸಿದ ವಸ್ತ್ರ-ಒಡವೆಗಳನ್ನು ಕೂಡಿಕೆ ಹೆಂಡತಿಗೆ ಕೊಡುತ್ತಾನೆ. ವಿಧವೆಯಾದ ಹೆಂಡತಿಗೆ ಈಗಾಗಲೇ ಮಕ್ಕಳಿದ್ದರೆ ಅದಕ್ಕೆ ಸತ್ತ ಗಂಡನ ಆಸ್ತಿಯೂ ಬರುತ್ತದೆ. ಕೂಡಿಕೆ ಗಂಡ ಕೂಡಿಕೆ ಹೆಂಡತಿಯ ಈ ಮೊದಲೇ ಜನಿಸಿದ ಮಕ್ಕಳನ್ನು ತಾವೇ ಸಾಕುವ ಹೊಣೆಗೆ ಒಳಗಾಗುತ್ತಾನೆ.

ಗಂಡನಿಂದ ತೊರೆಯಲ್ಪಟ್ಟ ಹೆಂಡತಿ ಕೂಡಿಕೆಗೆ ಸಿದ್ಧವಾಗುವಾಗ ತನ್ನ ತೊರೆದ ಗಂಡನಿಂದ ಈಗಲೇ ಹುಟ್ಟಿದ ಮಕ್ಕಳು ಕೂಡಿಕೆ ಗಂಡನ ಅಪೇಕ್ಷೆಗನುಗುಣವಾಗಿ ತಾಯಿಯ ಹಿಂದೆ ಮಕ್ಕಳು ಹೋಗುತ್ತಾರೆ. ಆದರೆ ಆ ಮಕ್ಕಳ ತಂದೆ ವಾತ್ಸಲ್ಯವುಳ್ಳವನಾಗಿ ಹೆಂಡತಿಯನ್ನು ಮಾತ್ರ ತೊರೆಯುವುದಾದರೆ ಮಕ್ಕಳು ತಮ್ಮ ತಂದೆಯ ಬಳಿಯಲ್ಲಿಯೇ ಇರುತ್ತವೆ. ಮದುವೆ ಹೆಚ್ಚು ಖರ್ಚು ಬರದಿದ್ದರೂ ಕೂಡಿಕೆಗೇ ಹೆಚ್ಚು ಖರ್ಚು ಬರುವ ಸಾಧ್ಯತೆಗಳಿವೆ. ಇಲ್ಲಿಗರ ಸಾಮಾಜಿಕ ವ್ಯವಸ್ಥೆಯಲ್ಲಿ ಕೂಡಿಕೆಗೆ ಒಲವಿರುವಂತೆ ಕಾಣುತ್ತದೆ. ಗಂಡನಿಂದ ತೊರಿಸಿಕೊಂಡ ಹೆಣ್ಣು, ಹರೆಯದಲ್ಲಿಯೇ ಗಂಡನನ್ನು ಕಳೆದುಕೊಂಡ ಹೆಣ್ಣು ಒಬ್ಬನನ್ನು ಮದುವೆಯಾಗಿದ್ದರೂ ಮತ್ತೊಬ್ಬನಲ್ಲಿ ಅನುರಕ್ತೆಯಾದ ಹೆಣ್ಣು ಹೀಗೆ ಕೂಡಿಕೆಗೆ ನಾನಾ ಕಾರಣಗಳಿರುತ್ತವೆ.

ಕೂಡಿಕೆಯಾದ ದಂಪತಿಗಳಿಗೆ ಹುಟ್ಟಿದ ಮಗುವನ್ನು ಇಲ್ಲಿಗರು ತಮಗೆ ನೆನಪಿರುವವರೆಗೂ 'ಕೂಡಿಕೆಸಾಲು' ಎಂದು ಕರೆಯುತ್ತಾರೆ. ಸಂಪ್ರದಾಯಬದ್ಧವಾಗಿ ಆದ

ಮದುವೆಯ ಫಲವಾಗಿ ಹುಟ್ಟಿದ ಸಂತಾನಗಳು ಕೂಡಿಕೆಯಿಂದ ಆದ ಸಂತಾನಕ್ಕಿಂತಲೂ ಉತ್ತಮವೆಂಬ ನಂಬಿಕೆ ಇಲ್ಲಿಗರಲ್ಲಿವೆ.

ಒಬ್ಬ ಇರುಳಿಗನ ಹೆಂಡತಿಯನ್ನು ಇನ್ನೊಬ್ಬ ಇರುಳಿಗನು ಅನೈತಿಕ ಸಂಪರ್ಕವಿಟ್ಟುಕೊಂಡರೆ ಕುಲದವರೆಲ್ಲಾ ಸೇರಿ ನಾಡಗೌಡ, ಕಟ್ಟು ಗೌಡರಿಗೆ ನ್ಯಾಯ ಒಪ್ಪಿಸಿ ಹೆಂಡತಿಯನ್ನು ಕಳೆದುಕೊಂಡವನಿಗೆ ಕರೆದು ಕೊಂಡವನಿಂದ ದಂಡ ಕೊಡಿಸುತ್ತಾರೆ. ಗಂಡನನ್ನು ತೊರೆದವಳು ಬಯಸಿದವರ ಜೊತೆಗೆ ಒಲಿದು ಆತನ ಜೊತೆ ಇರುವ ಅಭಿಲಾಷೆ ತೋರಿಸಿದರೆ ಆ ಹೆಂಡತಿಯ ಗಂಡ ಬೇರೊಬ್ಬಳನ್ನು ಕೂಡಿಕೆಯೂ ಮದುವೆಯಾಗಲು ಕುಲಸ್ತರಾದ ನಾಡಗೌಡ ಅನುಮತಿ ನೀಡುತ್ತಾರೆ. ಅಕ್ರಮ ಸಂಪರ್ಕ ಹೊಂದಿದ್ದ ವ್ಯಕ್ತಿ ಒಲಿದು ಬಂದ ಪ್ರೇಯಸಿಯನ್ನು ಒಲ್ಲೆನೆಂದರೆ ಆ ಹೆಂಗಸು ಮತ್ತೊಬ್ಬನನ್ನು ಕೂಡಿಕೆ ಮಾಡಿಕೊಳ್ಳಲು ಅವಕಾಶವಿದೆ.

ಮದುವೆಯಾದ ಗಂಡ-ಹೆಂಡತಿಯನ್ನಾಗಲೀ, ಹೆಂಡತಿ-ಗಂಡನನ್ನಾಗಲೀ ಎರಡು ಸಂಕ್ರಾಂತಿಗೆ ಮೀರಿ ಒಬ್ಬರೊಬ್ಬರು ಅಗಲಿದ್ದರೆ, ಇವರಿಬ್ಬರ ನಡುವೆ ವಿಚ್ಛೇದನ ಏರ್ಪಡುತ್ತದೆ. ಇವರಿಬ್ಬರೂ ಮನವೊಲಿದ ಹೆಣ್ಣು-ಗಂಡುಗಳೊಡನೆ ಕೂಡಿಕೆ ಪದ್ಧತಿಯಿಂದ ಮದುವೆಯಾಗಬಹುದು.

ಮದುವೆಯ ಸಂದರ್ಭದಲ್ಲಿ ಅನೇಕ ಆಚರಣೆಗಳು ಇರುಳಿಗರ ಕೌಟುಂಬಿಕ ಜೀವನದಲ್ಲಿ ಕಂಡುಬರುತ್ತದೆ. ಮಾನವ ಜೀವನದಲ್ಲಿನ ಅತ್ಯಂತ ಮಹತ್ವದ ಘಟ್ಟವೆಂದರೆ ಮದುವೆ. ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನ ವಂಶಾಭಿವೃದ್ಧಿಗಾಗಿ "ಮದುವೆ" ಎಂಬ ಸಂಪ್ರದಾಯವೊಂದನ್ನು ಸಮುದಾಯದಲ್ಲಿ ರೂಢಿಗೆ ತಂದ ಸ್ವಚ್ಛಂದ ಲೈಂಗಿಕತೆ ತಡೆ ಹಾಕುವ ಸಲುವಾಗಿ ಸಮಾಜದ ನೀತಿ-ನಿಯಮಗಳಿಗೆ ಒಳಪಟ್ಟು ದಾಂಪತ್ಯ ಸುಖವನ್ನು ಅನುಭವಿಸುವ ದಿಕ್ಕಿನಲ್ಲಿ ಈತ ರೂಪಿಸಿಕೊಂಡ ಈ "ವಿವಾಹ" ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ದಾರಿ ಮಾಡಿಕೊಟ್ಟಿತು. ಹೆಣ್ಣು-ಗಂಡುಗಳನ್ನು ಕೊಟ್ಟು ತರುವಲ್ಲಿ ಕುಲ, ಜಾತಿ ಗುಂಪುಗಳು ಸಾಗಿದಾಗ ಮದುವೆಯ ನಿಯಮ, ನಿಬಂಧನೆಗಳು ಗಟ್ಟಿಯಾದವು. ಹಾಗೆಯೇ ಭದ್ರವಾಗಿ ತಳವೂರಲು ಅನುಕೂಲವಾಯಿತು.

ಇರುಳಿಗರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯು ಸರಳ ಸಮಾಜದ ಲಕ್ಷಣಗಳನ್ನು ಹೊಂದಿರುತ್ತದೆ. ಗುಂಪುಗಳಲ್ಲಿ ವಾಸಿಸುತ್ತಿದ್ದ ಇವರ ಸಮುದಾಯವು ಒಂದೆಡೆ ಸ್ಥಿರವಾಗಿ ನೆಲೆ ನಿಂತ ಮೇಲೆ ವಸತಿ ವ್ಯವಸ್ಥೆಯನ್ನು ರೂಢಿಸಿಕೊಂಡಿರುವುದು ಕಂಡುಬರುತ್ತದೆ.

ಅವಿಭಕ್ತ ಕುಟುಂಬ ವ್ಯವಸ್ಥೆಯಿದ್ದ ಈ ಸಮುದಾಯದಲ್ಲಿ ಇಂದು ವಿಭಕ್ತ ಕುಟುಂಬಗಳಾಗಿ ವಿಭಜನೆಯಾಗಿರುವುದನ್ನು ನಾವು ಕಾಣಬಹುದು. ಆದರೂ ಸಹ ಇವರು ತಮ್ಮ ತಂದೆಯ ಆದೇಶದಂತೆ ನಡೆಯುವುದನ್ನು ಕಾಣಬಹುದು.

ಗ್ರಾಮ ಪಂಚಾಯ್ತಿಗಳು ಹುಟ್ಟುವ ಮುನ್ನ ಕಟ್ಟೆಮನೆಗಳು ಜನತೆಯ ಸಾಮಾಜಿಕ ಹಾಗೂ ಧಾರ್ಮಿಕ ಬದುಕಿನ ಅವಿಭಾಜ್ಯ ಅಂಗವಾಗಿದ್ದು ತಪ್ಪು ನಿಯಂತ್ರಿಕ

ಶಕ್ತಿಗಳಾಗಿದ್ದವೆನಿಸುತ್ತದೆ. ಜನರಿಗೂ ಸಹ ಅವುಗಳ ಬಗ್ಗೆ ಭಯ, ಭಕ್ತಿ, ಗೌರವ, ಪೂಜ್ಯ ಭಾವನೆಗಳಿದ್ದದ್ದು ಗೋಚರಿಸುತ್ತದೆ. ಬುದ್ಧಿವಂತನಾದವನು, ಕಟ್ಟೆಮನೆಯ ಯಜಮಾನನಾಗಿರುತ್ತಿದ್ದು ಆತನ ಮಕ್ಕಳು ಮುಂದುವರಿಯ ಬಹುದಾಗಿತ್ತು. ಇಲ್ಲವೇ ಬೇರೆ ಬುದ್ಧಿವಂತನೊಬ್ಬ ಕಟ್ಟೆಮನೆಯ ಯಜಮಾನಿಕೆ ವಹಿಸುತ್ತಿದ್ದ. ತಮ್ಮ ಕುಲದ ಕಟ್ಟು ಕಟ್ಟಳೆಗಳಿಗೆ ಸಂಬಂಧಿಸಿದ ಜಾತಿ ವಿಚಾರಗಳಿಗೆ ಸಂಬಂಧಿಸಿದ ವಿವಾದಗಳಿದ್ದರೆ ತಮ್ಮ ಕುಲ ಪಂಚಾಯಿತಿಯಲ್ಲಿ ಇರುಳಿಗರು ಪರಿವರ್ತಿಸಿಕೊಳ್ಳಲು ಪ್ರಯತ್ನಿಸಿ ವಿಫಲವಾದರೆ ಕಟ್ಟೆಮನೆಗಳಿಗೆ ದೂರುಕೊಡುತ್ತಿದ್ದನ್ನು ಗಮನಿಸಿದರೆ ನ್ಯಾಯಾಲಯಗಳ ವಿವಿಧ ರೂಪಗಳ ಬೇಕು ಇಲ್ಲಿಯೇ ಕಾಣ ಸಿಗುತ್ತದೆ. ತಾಲ್ಲೂಕು ಮಟ್ಟದ ಮುನ್ಸೀಸ್ ಜಿಲ್ಲಾ ಮಟ್ಟದ ಮೆಟ್ರೋ ಪಾಲಿಟನ್ ಹೈಕೋರ್ಟ್, ಸುಪ್ರೀಂ ಕೋರ್ಟುಗಳ ಕಲ್ಪನೆಯ ಬೀಜ ಮೂಲನಿವಾಸಿಗಳ ನ್ಯಾಯ ಸ್ಥಾನಗಳ ಆಧಾರದ ಮೇಲೆಯೇ ಆಗಿರಬಹುದೇ! ಇಂದು ಕಟ್ಟೆಮನೆಯ ವ್ಯವಸ್ಥೆ ನಿಷ್ಕ್ರೀಯದಾಗಿದೆ. ಇತ್ತೀಚಿನ ದಿನಗಳಲ್ಲಿ ಇರುಳಿಗರು ಆಡಳಿತಾತ್ಮಕವಾಗಿ ಯಾವುದೇ ವ್ಯಾಜ್ಯಗಳನ್ನು ಕಟ್ಟೆಮನೆಗಳಿಗೆ ತೆಗೆದುಕೊಂಡು ಹೋಗುತ್ತಿಲ್ಲ ತಮ್ಮಲ್ಲಿ ಉಂಟಾದ ವ್ಯಾಜ್ಯಗಳನ್ನು ಕೋರ್ಟು ಕಛೇರಿಯ ಕಡೆಗೆ ಒಯ್ಯುತ್ತಿದ್ದಾರೆ. ಇದು ಬೆಳೆಯುತ್ತಿರುವ ನಾಗರೀಕತೆ ಸಮಾಜದ ಪ್ರಭಾವವೇ ಆಗಿದೆ.

ಆಂಗ್ಲ ನ್ಯಾಯ ಪದ್ಧತಿಗಳು, ಹಿಂದೂ ನ್ಯಾಯ ಸೂತ್ರಗಳು ಕಾನೂನುಗಳು ಬುಡಕಟ್ಟು ಸಮುದಾಯದ ಬದುಕಿಗೆ ಪ್ರವೇಶಿಸಿ ಇರುಳಿಗರು ಜಾಗತಿಕ ನ್ಯಾಯಾಂಗದ ಚೌಕಟ್ಟಿನೊಳಗೆ ಸೇರಿಕೊಂಡಿರುವ ಅಂಶಗಳು ಸ್ಪಷ್ಟವಾಗುತ್ತದೆ.

ಹೀಗೆ ಇರುಳಿಗರಲ್ಲಿ ಆಧುನೀಕತೆಯ ಪ್ರಭಾವದಿಂದ ಹಲವಾರು ಬದಲಾವಣೆಗಳು ಕಂಡು ಬಂದಿದ್ದು ಅಧ್ಯಯನಕ್ಕೆ ಸಂಬಂಧಪಟ್ಟಂತೆ ಕ್ಷೇತ್ರಕಾರ್ಯದಲ್ಲಿ ಕಂಡು ಬಂದಂತಹ ವಿಷಯಗಳನ್ನು ಈ ಪ್ರಬಂಧದಲ್ಲಿ ಪ್ರಸ್ತಾಪಿಸಿ ಇದಕ್ಕೆ ಪೂರಕವಾದ ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

## ಹಕ್ಕಿಪಿಕ್ಕಿಗಳ ಕೌಟುಂಬಿಕ ಸಂರಚನೆ ಮತ್ತು ಆಧುನೀಕತೆ

ಹಕ್ಕಿಪಿಕ್ಕಿಯರದು ಮಾತೃಪ್ರಧಾನವಾದ ಕುಟುಂಬ ಅವರಲ್ಲಿ ಹೆಣ್ಣು ಹೆಚ್ಚಿನ ಸ್ಥಾನಮಾನಗಳನ್ನು ಹೊಂದಿರುತ್ತಾಳೆ. ಮನೆಯ ಎಲ್ಲಾ ನಿರ್ವಹಣೆಯ ಜವಾಬ್ದಾರಿಯೂ ಆಕೆಯ ಮೇಲಿರುತ್ತದೆ. ಗಂಡಸು ಕೇವಲ ಬೇಟೆ ಮತ್ತು ವ್ಯಾಪಾರ ಮಾಡುವುದಷ್ಟೇ ಪ್ರಮುಖವೇ ಹೊರೆತು ಇತರೆ ಎಲ್ಲಾ ವಿಷಯಗಳಲ್ಲಿ ಎರಡನೇ ದರ್ಜೆಯಲ್ಲಿದ್ದಾನೆ. ತಾನು ದುಡಿದ ಎಲ್ಲಾ ವರಮಾನವನ್ನು ಹೆಂಡತಿಗೆ ನೀಡಿ ತನಗೆ ಬೇಕಾದ ಹಣವನ್ನು ಅವಳಿಂದ ಪಡೆಯುವುದನ್ನು ಮಾಡುತ್ತಾರೆ. ಈ ಸಮುದಾಯದಲ್ಲಿ ಹೆಣ್ಣಿನದೇ ಹೆಚ್ಚಿನ ನಿಯಂತ್ರಣವಿರುತ್ತದೆ.

ಮಕ್ಕಳ ಪೋಷಣೆ ಸಾಮಾನ್ಯವಾಗಿ ವಯಸ್ಸಾದ ಮುದುಕರ ಜವಾಬ್ದಾರಿಯಾಗಿರುತ್ತದೆ. ಯಾವುದೇ ಮಗು ಅಜ್ಜ-ಅಜ್ಜಿ ಇಲ್ಲವೇ ತಂದೆ ತಾಯಿಯರ ನಿಯಂತ್ರಣದಲ್ಲಿರುತ್ತದೆ. ಪ್ರತಿಯೊಂದು ದಂಪತಿಗಳ ಜೋಡಿಯೂ ಪ್ರತ್ಯೇಕವಾಗಿ

ಬದುಕಲು ಇಷ್ಟ ಪಡುತ್ತದೆ. ಹೀಗಿದ್ದು ಆ ದಂಪತಿಗಳ ಮಕ್ಕಳನ್ನು ಅಲೆಮಾರಿ ಜೀವನದಲ್ಲಿ ಖಾಯಂ ಆಗಿ ನೆಲೆನಿಂತ ಮನೆಗಳಲ್ಲೇ ಮುದುಕರ ಆಶ್ರಯದಲ್ಲಿ ಬೆಳೆಯುತ್ತದೆ.

ಹಕ್ಕಿಪಿಕ್ಕಿ ಸಮುದಾಯಗಳಲ್ಲಿ ಕೌಟುಂಬಿಕವಾಗಿ ಅನಾಥ ಪ್ರಜ್ಞೆ ಅತ್ಯಂತ ಕಡಿಮೆ ೬೦ ವರ್ಷದ ಮುದುಕ ಮುದುಕಿಗೆ ಅದೇ ವಯಸ್ಸಿನ ವ್ಯಕ್ತಿಗಳನ್ನು ಸಮಾಜದವರೇ ಜೊತೆ ಮಾಡುತ್ತಾರೆ. ಯಾರು ಹೆಚ್ಚು ಕಾಲ ಏಕಾಂಗಿಗಳಾಗಿರುವುದಿಲ್ಲ. ಒಬ್ಬ ಗಂಡಸಿಗೆ ಹೆಂಡತಿ ಬಿಟ್ಟರೆ, ಸತ್ತರೆ ಎಂಟು ಹತ್ತು ದಿನ ಇಲ್ಲವೇ ತಿಂಗಳೊಳಗಾಗಿಯೇ ಇನ್ನೊಂದು ಹೆಣ್ಣನ್ನು ಜೊತೆ ಮಾಡುತ್ತಾರೆ. ಹೆಣ್ಣಿಗೂ ಈ ಸ್ಥಿತಿಯೇ ಇರುತ್ತದೆ. ಈ ಜನಾಂಗದ ಒಟ್ಟು ಧೋರಣೆಯ ಗುಂಪು ಜೀವನವಾಗಿ ಕಂಡರೂ ಕೌಟುಂಬಿಕ ವ್ಯವಸ್ಥೆಯಲ್ಲಿ ಅಷ್ಟೇ ಪ್ರತ್ಯೇಕತೆಯನ್ನು ನಾವು ಕಾಣಬಹುದಾಗಿದೆ.

ಹೊರಗೆ ವ್ಯಾಪಾರಕ್ಕೆ ಹೋಗುವ ಸಂದರ್ಭಗಳಲ್ಲಿ ತಾವು ನಿರ್ಮಿಸಿದ ಗುಡ್ಲುಗಳಲ್ಲೇ ಇವರು ವಾಸಿಸಬೇಕು ಹೊರಗೆ ಹೋದರೆ ಹೊರಗಡೆ ಮಲಗಿಕೊಂಡರೆ ಅನೈತಿಕ ಚಟುವಟಿಕೆಯಲ್ಲಿ ಭಾಗಿಯಾಗಿದ್ದಾರೆಂದು ಅವರಿಗೆ ಶಿಕ್ಷೆಯನ್ನು ವಿಧಿಸುತ್ತಾರೆ.

ಹೀಗೆ ಹಕ್ಕಿಪಿಕ್ಕಿ ಸಮುದಾಯಗಳಲ್ಲಿ ನ್ಯಾಯ-ನಿಯಮಗಳಲ್ಲಿ ಬಹುತೇಕವಾಗಿ ಜೀವಂತವಾಗಿ ಕೆಲವು ಸ್ವಲ್ಪ ಸಡಿಲಗೊಂಡಿವೆ.

**ಆಧುನೀಕತೆ**

ಹಕ್ಕಿಪಿಕ್ಕಿಯವರು ಆಧುನೀಕರಣಕ್ಕೆ ಒಳಗಾಗಿರುವ ಅಂಶವನ್ನು ನಾವು ಮನಗಾಣಬಹುದು. ಅವರಷ್ಟು ನಿರಂತರ ಬದಲಾವಣೆಗೆ ಒಳಗಾಗಿರುವ ಸಮುದಾಯ ಕರ್ನಾಟಕದಲ್ಲಿ ಯಾವುದೂ ಇಲ್ಲ. ಇದಕ್ಕೆ ಮುಖ್ಯವಾದ ಕಾರಣ ಅವರ ಅಲೆಮಾರಿ ಜೀವನ ಇಂದು ಇವರ ಜೀವನ ವಿಧಾನದಲ್ಲಿ ಸಾಕಷ್ಟು ಬದಲಾವಣೆಗಳು ಆಗಿರುವುದು ಕಂಡುಬರುತ್ತದೆ. ಹಕ್ಕಿಪಿಕ್ಕಿ ಸಮುದಾಯ ಅಲೆಮಾರಿಗಳಾಗಿದ್ದರಿಂದ ಅವರಿಗೆ ಖಾಯಂ ವಸತಿ ಗೃಹಗಳು ಇರಲಿಲ್ಲ. ಆದರೆ ಇಂದು ಖಾಯಂ ವಾಸಸ್ಥಾನಗಳನ್ನು ಮಣ್ಣು, ಇಟ್ಟಿಗೆಗಳಿಂದ ನಿರ್ಮಿಸಿಕೊಂಡರೂ ಊರಿನ ಹೊರಗೆ ಅಲೆಯುವ ಸಂಧರ್ಭಗಳಲ್ಲಿ ಗುಡಾರಗಳಲ್ಲೆ ವಾಸಿಸುತ್ತಾರೆ. ಗುಡ್ಡಲಗಳನ್ನು ಈಗ ಪ್ಲಾಸ್ಟಿಕ್ ಚೀಲಗಳಿಂದ ನಿರ್ಮಿಸುವುದನ್ನು ಕಾಣಬಹುದು.

ನ್ಯಾಯ ನಿಯಮಗಳಲ್ಲಿ ಬಹುತೇಕವಾಗಿ ಬದಲಾವಣೆ ಕಂಡುಬಂದರೂ ಕುಲಸ್ಥರು ಹೇಳಿದಂತೆ ಕೆಲವು ಸರಳಗೊಂಡಿರುವುದು ಸರ್ವೇ ಸಾಮಾನ್ಯವಾಗಿದೆ. ಕಟ್ಟುನಿಟ್ಟಿನ ಕೆಲವು ನಿಯಮಗಳನ್ನು ಸಡಿಲಗೊಳಿಸಿಕೊಳ್ಳುವುದರ ಮೂಲಕ ಸಂಪೂರ್ಣವಾಗಿ ಬದಲಾವಣೆಗೆ ಒಳಗಾಗಿರುವುದು ಸ್ಪಷ್ಟವಾಗಿರುವುದನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಮಾಹಿತಿಯನ್ನು ಆಧರಿಸಿ ಪ್ರಸ್ತಾಪಿಸಲಾಗಿದೆ.

ಇತ್ತೀಚೆಗೆ ಸಾಕಷ್ಟು ವಯಸ್ಸಿಗೆ ಬಂದ ಮೇಲೆಯೇ ಮದುವೆ ಮಾಡುವುದರಿಂದ ಬಾಲ್ಯ ವಿವಾಹಗಳು ನಿಂತಿವೆಯೆಂದು ಹೇಳಬಹುದು. ಹೆಣ್ಣುಕೊಟ್ಟು ತರುವ ಪದ್ಧತಿಯಿದೆ. ಆದರೆ ವಿಚ್ಛೇದನ ಪ್ರಕ್ರಿಯೆಯು ಇಂದು ಕ್ಲಿಷ್ಟಕರವಾಗಿದ್ದು ಏಕಪತ್ನಿ ವ್ಯವಸ್ಥೆಯ ಕಡೆಗೆ ಈ ಸಮುದಾಯವು ಸಾಗುತ್ತಿರುವುದನ್ನು ಕಾಣಬಹುದು.

ಶವ ಸಂಸ್ಕಾರದಲ್ಲೂ ಸಹ ಹಕ್ಕಿಪಿಕ್ಕಿ ಸಮುದಾಯವು ಸಾಕಷ್ಟು ಬದಲಾವಣೆಗಳಿಗೆ ಒಳಪಡಿಸಿಕೊಂಡಿದ್ದಾರೆ. ಒಬ್ಬರೆ ಶವಸಂಸ್ಕಾರ ಮಾಡುತ್ತಿದ್ದ ಕಾಲಘಟ್ಟಗಳು ದೂರವಾಗಿ ಇಂದು ಎಲ್ಲರೂ ಒಟ್ಟಿಗೆ ಸೇರಿ ವಿಧಿ ವಿಧಾನಗಳನ್ನು ನೆರವೇರಿಸುವುದನ್ನು ಕಾಣಬಹುದು.

ಹೀಗೆ ಹಕ್ಕಿಪಿಕ್ಕಿ ಸಮುದಾಯದಲ್ಲಿ ಆಧುನೀಕತೆಯ ಪ್ರಭಾವದಿಂದ ಸಾಕಷ್ಟು ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಕೌಟುಂಬಿಕ ಜೀವನ ವಿಧಾನ ಮತ್ತು ಅವರ ಆಚರಣೆಯಲ್ಲಿ ಸಾಕಷ್ಟು ಬದಲಾವಣೆಗಳು ಕಂಡು ಬರುತ್ತಿವೆ.

## ಬುಡಕಟ್ಟು ಸಮುದಾಯದ ಉತ್ಪಾದನಾ ವ್ಯವಸ್ಥೆ ಮತ್ತು ಆಧುನೀಕತೆ

ಜಗತ್ತಿನ ಉದ್ದಕ್ಕೂ ಸ್ಥಳೀಯ ಪರಂಪರೆ ಮತ್ತು ಉತ್ಪಾದನಾ ಸಾಮರ್ಥ್ಯವೂ ಸಾಂಸ್ಕೃತಿಕವಾಗಿ ಬೆಳೆದುಕೊಂಡು ಬಂದಿರುತ್ತದೆ. ಇದು ಮನುಷ್ಯ ಸಂವೇದನೆಯ ಬುಡಕಟ್ಟು ಸಮುದಾಯದ ನೈಸರ್ಗಿಕ ಪ್ರವೃತ್ತಿ. ಬುಡಕಟ್ಟು ಸಮುದಾಯಗಳು ಸಾಮಾನ್ಯವಾಗಿ ಅರಣ್ಯಗಳಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತ ಅಲ್ಲಿ ದೊರೆಯುವ ಗೆಡ್ಡೆಗೆಣಸು, ಹಣ್ಣು ಹಂಪಲು, ಸೊಪ್ಪು ಸೆದೆ, ಜೇನು ಮುಂತಾದ ಸಹಜೋತ್ಪನ್ನಗಳನ್ನು ಸೇವಿಸುತ್ತಾ ಅಗತ್ಯಕ್ಕೆ ತಕ್ಕಂತೆ ಕಾಡಿನ ಪ್ರಾಣಿಗಳನ್ನು ಬೇಟೆಯಾಡುತ್ತ ಬದುಕುವವರು. ಬೇಸಾಯ ಮಾಡಿದರೂ ಬೇಸಾಯವನ್ನು ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುತ್ತಿದ್ದರು. ಸಾಮಾನ್ಯವಾಗಿ ಭವಿಷ್ಯದ ಕನಸು ಕಾಣದೆ ಸಂಪತ್ತನ್ನು ಸಂಗ್ರಹಿಸದೆ ವರ್ತಮಾನದ ಜೀವನಕ್ಕಾಗಿ ಹೆಚ್ಚು ಶ್ರಮವಹಿಸುವ ಅಲ್ಪ ತೃಪ್ತಿ ಸಮುದಾಯಗಳು ಈ ಬುಡಕಟ್ಟು ಜನರು.

ಕರ್ನಾಟಕದಲ್ಲಿ ವಾಸವಾಗಿರುವ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಪಾರಂಪರಿಕ ಕುಲಕಸುಬುಗಳನ್ನು ಹೊಂದಿದ್ದಾರೆ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯದವರು ಆಹಾರ ಸಂಗ್ರಹಣೆ, (ಗೆಡ್ಡೆ, ಗೆಣಸು, ಸೊಪ್ಪು ಸೆದೆ ಇತ್ಯಾದಿ) ಬೇಟೆಗಾರಿಕೆ, (ಪ್ರಾಣಿ, ಪಕ್ಷಿ, ಜಲಚರಗಳು) ಪಶು ಸಂಗೋಪನೆ, ಕೃಷಿ, ಕೂಲಿ, ಹುಲ್ಲು ಮಾರುವುದು, ಕುದುರೆಗಳನ್ನು ಸಿಂಗರಿಸುವುದು, ಕಟ್ಟಿಗೆ ಕಡಿಯುವುದು, ಜೇನು ಸಂಗ್ರಹಣೆ, ಗಿಡಮೂಲಿಕೆಗಳ ಸಂಗ್ರಹ, ಅರಣ್ಯದ ಉಪಉತ್ಪನ್ನಗಳ ಸಂಗ್ರಹ, ಅಪರೂಪದ ವಸ್ತುಗಳ (ಸೂಜಿ, ದಬ್ಬಣ, ಪಿನ್ನು, ಕಸ್ತೂರಿ, ಗೋರಂಜನ, ಕರಿಮಣಿ, ಹಾಲಮಣಿ, ನವಿಲಗರಿ, ಉಡದತುಪ್ಪ, ರುದ್ರಾಕ್ಷಿ, ಹುಲಿಯುಗುರು, ಚೌಲಿ, ಪೀಪಿ ಇತ್ಯಾದಿ) ಮಾರಾಟ, (ಬುಟ್ಟಿ, ಕುಕ್ಕೆ, ಚಾಪೆ, ಕುಕ್ಕೆ ತೊಟ್ಟಿಲು, ಮೀನು ಹಿಡಿಯುವ ಕೋಳಿ, ಮೊರ, ರೊಟ್ಟಿಬುಟ್ಟಿ, ಬೀಸಣಿಕೆ, ಹಾವಾಡಿಗರ ಕಲಾತ್ಮಕ ವಸ್ತುಗಳು, ಕುರ್ಚಿ, ಸೋಫಾ, ದಿವಾನ, ಚಾಪೆ, ಏಣಿ, ಬುಕ್ಕಾ (ಬೀಜ ಬಿತ್ತನೆಯ ಸಾಧನ) ವಸ್ತುಗಳ

ತಯಾರಿಕೆ, ನಾರಿನಿಂದ ಹಗ್ಗ ಇತ್ಯಾದಿ ಹತ್ತು ಹಲವಾರು ಜೀವನೋಪಾಯದ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ.

ಉತ್ಪಾದನೆ ಪ್ರತಿಹಂತದಲ್ಲಿ ಮನುಷತ್ವದ ನೀತಿಯನ್ನು ಅನುಸರಿಸಬೇಕು. ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸು ವಿಶೇಷವಾಗಿ ಮಾನವೀಯ ಸಂಪತ್ತನ್ನು ವಿಸ್ತರಿಸುವಂತದ್ದೇ ಆಗಿತ್ತು. ನೀತಿಯಿಲ್ಲದ ಉತ್ಪಾದನೆ ಯಾವತ್ತೂ ಕೂಡ ಮನುಷ್ಯನ ಅಸ್ತಿತ್ವವನ್ನು ತುಂಡಿರಿಸುತ್ತಲೇ ಇರುತ್ತದೆ. ಬಹುಪಾಲು ಎಲ್ಲಾ ಬುಡಕಟ್ಟುಗಳು ನೈತಿಕ ಉತ್ಪಾದನೆಯಿಂದ ನೈಸರ್ಗಿಕ ಒಪ್ಪಂದದಿಂದ ಮನುಷತ್ವದ ಸಂಬಂಧಗಳಿಂದಲೇ ಬೆಸುಗೆ ಉಂಟಾಗುತ್ತದೆ. ಕಾಡು ಉತ್ಪನ್ನಗಳನ್ನು ಮಾರಾಟ ಮಾಡಿ ಜೀವನ ಸಾಗಿಸುವಂತಹ ಸ್ಥಿತಿ ಅವರದ್ದಾಗಿತ್ತು.

**ಆಧುನಿಕತೆ :**

ಆಧುನಿಕತೆಯು ಕಾಲದ ಒಂದು ಸ್ಥಿತಿ. ಬದಲಾವಣೆಯನ್ನು ರೂಪಿಸುವ ಆಧುನಿಕತೆಯು ನಾಗರೀಕತೆಗಳ ಮೂಲಕವೇ ಸಂಸ್ಕೃತಿಯ ಜೊತೆ ಮುಖಾಮುಖಿಯಾಗುತ್ತ ಬಂದಿದೆ. ಅನೇಕ ಭಾರಿ ಆಧುನಿಕತೆಯ ಗತಕಾಲದ ಭಾವನಾತ್ಮಕ ಸಂಬಂಧಗಳ ಮೇಲೆ ದಾಳಿ ಮಾಡುತ್ತಿರುತ್ತದೆ. ಜೊತೆಯಲ್ಲಿ ಪರಂಪರೆಯ ಎಷ್ಟೋ ಭಾವನೆಗಳನ್ನು ಅಳಿಸಿ ಅದರ ಮೇಲೆ ತನ್ನ ಕಾಲದ ಆಕೃತಿಯನ್ನು ಒತ್ತಾಯಿಸುತ್ತಲೇ ಇರುತ್ತದೆ. ಆಧುನಿಕತೆಯು ಸಂಸ್ಕೃತಿಯಂತೆ ವರ್ತಿಸಲಾರದು. ಸಂಸ್ಕೃತಿಯ ಅಂತರ್ಜಲದಂತೆ ಸಮುದಾಯಗಳ ಸಮಷ್ಠಿ ಮನಸ್ಸಿನ ಒಳಗೆ ಹರಿಯುತ್ತ ಅತ್ಯಂತ ಮಂದಗತಿಯಲ್ಲಿ ಸಾಗುತ್ತದೆ. ಆಧುನಿಕತೆ ಮಾತ್ರ ಸದಾ ವೇಗೋತ್ಕರ್ಷದಲ್ಲಿ ಸಮಾಜಗಳನ್ನು ಮುನ್ನೆಡೆಸಲು ಹಾತೊರೆಯುತ್ತಿರುತ್ತದೆ. ಹೀಗಾಗಿ ಸಂಸ್ಕೃತಿ ಮತ್ತು ಆಧುನಿಕತೆಗಳು ಹೊಂದಾಣಿಕೆ ಮಾಡಿಕೊಳ್ಳುವ ಕ್ರಮದಲ್ಲಿ ಪರಂಪರಾನುಗತವಾದ ಉತ್ಪನ್ನ ಪದ್ಧತಿಗಳು ಅನಿವಾರ್ಯವಾಗಿ ಕಾಲದ ಮರೆಗೆ ಸರಿಯುತ್ತವೆ.

ಬುಡಕಟ್ಟು ಸಮುದಾಯಗಳು ನಿಸರ್ಗದ ಒಡಲಿನ ಮಕ್ಕಳು. ತಮ್ಮ ಕನಿಷ್ಠ ಬೇಡಿಕೆಗಳ ಪೂರೈಕೆಗಾಗಿ ಅರಣ್ಯವನ್ನೇ ಅವಲಂಬಿಸಿದವರು. ಮಾನವ ಸೂಕ್ಷ್ಮತೆ, ಅಗಾದ ನೈಸರ್ಗಿಕ ಜ್ಞಾನ ಭಂಡಾರವನ್ನು ಅನುಚಾನವಾಗಿ ಉಳಿಸಿ ಬೆಳಸಿಕೊಂಡು ಬಂದವರು.

ಆಧುನಿಕತೆಯಿಂದ ಹಲವಾರು ಬದಲಾವಣೆಗಳು ಆಗಿವೆಯೆಂಬುದು ನಿಜ. ಆದರೆ ಬುಡಕಟ್ಟು ಸಮುದಾಯಗಳ ವಿಚಾರದಲ್ಲಿ ಈ ಮಾತು ನಿಜವಾಗಲಾರದು. ಪಾರಂಪರಿಕ ಜ್ಞಾನವನ್ನು ತಮ್ಮಲ್ಲಿ ಅಡಗಿಸಿಕೊಂಡಿದ್ದ ಬುಡಕಟ್ಟು ಸಮುದಾಯಗಳು ಆಧುನಿಕ ತಂತ್ರಜ್ಞಾನ ಹಾಗೂ ಅವುಗಳಿಂದ ಹುಟ್ಟಿದ ಕಾರ್ಖಾನೆಗಳ ಭರಾಟೆಯಿಂದಾಗಿಯೇ ತಮ್ಮ ಮೂಲ ಕಸುಬುಗಳಿಂದ ದೂರ ಸರಿಯಬೇಕಾದ ಅನಿವಾರ್ಯತೆಯುಂಟಾಯಿತು. ವಿದೇಶಿಯರು ಹೊತ್ತು ತಂದ ಆಧುನಿಕತೆಯ ಗಾಳಿ ಭಾರತೀಯ ಬುಡಕಟ್ಟು ಸಮುದಾಯಗಳಲ್ಲಿ ದುಸ್ವಪ್ನವಾಗಿ ಪರಿಣಮಿಸಿತು. ಪರಿಸರಕ್ಕೆ ಹಾನಿಯಾಗದ ರೀತಿಯಲ್ಲಿ

ಕಬ್ಬಿಣ ತಯಾರಿಸುತ್ತಿದ್ದ ಬುಡಕಟ್ಟು ಸಮುದಾಯ ಆಧುನಿಕತೆಯ ಪರಿಣಾಮವಾಗಿ ತನ್ನ ಮೂಲ ಕಸುಬನ್ನೇ ತ್ಯಜಿಸಿ ಅಪರಾಧಿ ಸಮುದಾಯವಾಗಿ ರೂಪುಗೊಳ್ಳುವಂತಾಯಿತು. ಇದು ಕೇವಲ ಬುಡಕಟ್ಟು ಸಮುದಾಯದ ಪ್ರಶ್ನೆಯಾಗಿ ಮಾತ್ರ ಉಳಿಯಲಿಲ್ಲ. ಇವರಂತಹ ಎಷ್ಟೋ ಸಮುದಾಯಗಳು ಅನುಭವಿಸುತ್ತಿರುವ ಕಷ್ಟ ನಷ್ಟಗಳನ್ನೇ ಅನುಭವಿಸಿದವು ಹಾಗೂ ಇಂದಿಗೂ ಅನುಭವಿಸುತ್ತಿವೆ.

ಅಸಮಾನತೆಯನ್ನು ಕೇವಲ ಹಣದ ಮೂಲಕ ಅಳೆಯುತ್ತಿರುವ ಇಂದಿನ ವ್ಯವಸ್ಥೆಯಲ್ಲಿ ಜಾಗತೀಕರಣ ಎನ್ನುವುದು ಇನ್ನೂ ಹೆಚ್ಚಿನ ಭಯವನ್ನೇ ಬುಡಕಟ್ಟು ಸಮುದಾಯಗಳಲ್ಲಿ ಹುಟ್ಟು ಹಾಕಿದೆ. ಕೆಲವೇ ಕೆಲವು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಜಾಗತೀಕರಣ ಎನ್ನುವ ಮಂತ್ರ ಜಪಿಸುತ್ತಾ ಅಭಿವೃದ್ಧಿ ಹೊಂದಿದ, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳನ್ನು ತಮ್ಮ ಕಬಂಧ ಬಾಹುವಿನಲ್ಲಿ ಬಿಗಿಯಾಗಿ ಬಂಧಿಸುತ್ತಾ ಸಾಗಿದೆ. ಈ ವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳು ಇನ್ನೂ ತಳಕ್ಕೆ ಸರಿಯುವ ಸಾಧ್ಯತೆಯೇ ಹೆಚ್ಚಾಗಿ ಕಂಡು ಬರುತ್ತಿದೆ. ಇಂತಹ ಉಸಿರು ಕಟ್ಟಿಸುವ ವಾತಾವರಣದಿಂದ ಅಮಾಯಕ ಬುಡಕಟ್ಟುಗಳನ್ನು ಕಾಪಾಡಬೇಕಾದ ಹೊಣೆ ಪ್ರತಿಯೊಬ್ಬ ಪ್ರಜ್ಞಾವಂತರದಾಗಿರುತ್ತದೆ. ಈ ನಿಟ್ಟಿನಲ್ಲಿ ಆಲೋಚಿಸಿ ಅವುಗಳ ಕ್ಷೇಮಕ್ಕಾಗಿ ಹೋರಾಡುವ ಹೊಣೆ ಬುಡಕಟ್ಟು ಸಮುದಾಯಗಳ ಕುರಿತು ಕಾಳಜಿಯುಳ್ಳ ಅಧ್ಯಯನಕಾರರು ಮಾಡಬೇಕಾಗಿದೆ.

ಜಾಗತೀಕರಣದ ಇಂದಿನ ಸಂದರ್ಭದ ವಿದ್ಯಾಭ್ಯಾಸ ತಂತ್ರಜ್ಞಾನ ವಿಜ್ಞಾನಗಳಂಥ ಜ್ಞಾನ ವಲಯಗಳ ಪ್ರೇರಣೆ ಬಹುಪಾಲು ಸ್ಮರಣೀಯವೆನಿಸುವುದು. ಮುಂದುವರಿದ ವರ್ಗಗಳಿಗೆ ಮಾತ್ರ. ವಿದ್ಯಾಭ್ಯಾಸ-ಉದ್ಯೋಗಗಳ ಸಂಬಂಧ ರೂಪಿಸುವ ಇಂದಿನ ಶಿಕ್ಷಣ ನಿರುದ್ಯೋಗಿಗಳನ್ನು ಅತಂತ್ರರನ್ನಾಗಿ ಮಾಡಿರುವುದು ನಿಜವಾದರೂ ಬುಡಕಟ್ಟು ವರ್ಗಗಳಿಗೆ ಅಸ್ತಿತ್ವವನ್ನೇ ಇಲ್ಲದಂತೆ ಮಾಡಿದೆ. ಏಕೆಂದರೆ ಪರಂಪರಾಗತ ವೃತ್ತಿಗಳ ಪ್ರಾಶಸ್ತ್ಯವೂ ಅಲ್ಲ. ಯುವ ವರ್ಗಕ್ಕೆ ತಮ್ಮ ವೃತ್ತಿ ಅವಮಾನಕರ ಹಾಗೆಯೇ ಆಧುನಿಕ ಬದುಕು ಗಗನ ಕುಸುಮ ಎನಿಸಿಬಿಟ್ಟಿದೆ.

ಸದ್ಯದ ಪರಿಸ್ಥಿತಿಯಲ್ಲಿ ಆದಿವಾಸಿ ಜನರು ನಿರ್ವಹಿಸುವ ಯಾವುದೇ ಕಸುಬುಗಳನ್ನು ತೆಗೆದುಕೊಂಡರೂ ಅವುಗಳು ತಮ್ಮದೇ ಆದ ಸಮಸ್ಯೆಗಳಲ್ಲಿ ಸಿಕ್ಕಿಕೊಂಡಿವೆ. ಬೇಟೆ ಹಾಗೂ ಆಹಾರ ಸಂಗ್ರಹಣೆಗಳನ್ನು ತೆಗೆದುಕೊಂಡರೆ ಸರಕಾರಗಳೇ ಬೇಟೆ ಹಾಗೂ ಆಹಾರ ಸಂಗ್ರಹಣೆಗಳನ್ನು ಕಾನೂನಿನ ಮೂಲಕ ನಿಯಂತ್ರಿಸಿವೆ. ನಾಡಿನ ಐಶಾರಾಮಿ ಬದುಕಿನ ಪ್ರಭಾವದಿಂದಾಗಿ ಇಂದು ಕಾಡುಗಳು ಕ್ಷೀಣಿಸುತ್ತಿವೆ. ನಾಗರಿಕರು ತಮ್ಮ ಶೋಕಿಗಾಗಿ ಆಧುನಿಕ ಉಪಕರಣಗಳಿಂದ ಬೇಟೆಯಾಡುವ ಮುಖಾಂತರ ಬುಡಕಟ್ಟು ಸಮುದಾಯದವರಿಗೆ ಅಲ್ಲಿಯೂ ನಿರಾಶೆ ಕಟ್ಟಿಟ್ಟ ಬುತ್ತಿಯಾಗಿದೆ. ನಾಗರಿಕರು ಎನಿಸಿಕೊಂಡವರು ತಮ್ಮ ಐಶಾರಾಮಿ ಜೀವನಕ್ಕಾಗಿ ಕಾಡನ್ನು ಕಡಿದು ಹಾಳು ಮಾಡಿರುವಾಗ ಕಾಡಿನಿಂದ ಸಿಗುವ ಆಹಾರ ಉತ್ಪಾದನೆಗಳು ಇಲ್ಲವಾಗಿವೆ. ಪಶುಸಂಗೋಪನೆ, ಕೃಷಿಕೂಲಿ ಇಂತಹ ಕಸುಬುಗಳನ್ನು ನೋಡಿದರೆ ಪಶುಸಾಕಾಣಿಕೆಯು ನಾಗರಿಕ ಜಗತ್ತಿನಲ್ಲಿ ಲಾಭಕರವಾದುದಲ್ಲ, ಜೊತೆಗೆ

ಹಸಿವಿನಿಂದಿರಬೇಕಾಗುತ್ತದೆ. ಹಾಗೆಯೇ ಕೃಷಿಯಲ್ಲಿ ಹೆಚ್ಚಿನ ಕೂಲಿ ಸಿಗದಿರುವುದು ಹಾಗೂ ಆಧುನಿಕ ಉಪಕರಣಗಳು ಕೃಷಿಯಲ್ಲಿ ಇರುವುದರಿಂದ ಕೃಷಿಕೂಲಿಕಾರರು ಹೆಚ್ಚಾಗಿ ಕೃಷಿ ಕೆಲಸಕ್ಕೆ ಬೇಕಾಗುವುದಿಲ್ಲ. ಆದಿವಾಸಿ ಸಮುದಾಯದವರ ಕರಕುಶಲ ವಸ್ತುಗಳ ತಯಾರಿಕೆಗೆ, ಕಚ್ಚಾವಸ್ತುಗಳು ಸಿಗುವುದಿಲ್ಲ. ಒಂದು ಪಕ್ಷ ಸಿಕ್ಕರೂ ಸಹ, ಒಂದು ಕರಕುಶಲ ವಸ್ತುವಿನ ತಯಾರಿಕೆಗೆ ಬೇಕಾದ ವೆಚ್ಚವನ್ನು ನೋಡಿದರೆ, ಆ ಕರಕುಶಲ ವಸ್ತು ಅಷ್ಟಕ್ಕೆ ಮಾರಾಟವಾಗುವುದಿಲ್ಲ.

ಆಧುನಿಕ ಕೈಗಾರಿಕೆಗಳು ಮುಖ್ಯವಾಗಿ ಭಾರತದ ಆದಿವಾಸಿ ಸಮುದಾಯಗಳ ಮೂಲ ಕಸುಬಿನ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಬೀರಿವೆ. ಕೈಗಾರಿಕೆಗಳ ಉತ್ಪನ್ನದಿಂದ ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿರುವಂತೆ ಬುಡಕಟ್ಟು ಸಮುದಾಯಗಳ ಹಿಂದುಳಿಯುವಿಕೆಗೂ ಕಾರಣವಾಗಿದೆ, ಮುಖ್ಯವಾಗಿ ಕೈಗಾರಿಕೆಗಳು ಪ್ರಕೃತಿಯ ಸಾರ್ಥಕ ಬಳಕೆಯಿಂದ ಜನರ ಅವಶ್ಯಕತೆಗಳನ್ನು ವೇಗವಾಗಿ ಪೂರೈಸುವ ಕೆಲಸ ಮಾಡಿರುವುದು ನಿಜ. ಆದರೆ ಈ ತ್ವರಿತ ಅಭಿವೃದ್ಧಿಯ ಜೊತೆಗೆ ತಂತಮ್ಮ ಮೂಲ ಕಸುಬುಗಳನ್ನೇ ನಂಬಿಕೊಂಡು ಹೊಟ್ಟೆಹೊರೆದುಕೊಳ್ಳುತ್ತಿದ್ದ ಈ ಬುಡಕಟ್ಟು ಸಮುದಾಯಗಳು ದಾರಿಕಾಣದೆ ಪರಿತಪಿಸುವಂತಾಯಿತು. ಇದು ಸಮುದಾಯಗಳ ಭೀಕರ ಅವನತಿಗೆ ಕಾರಣವಾಯಿತು. ಆಧುನಿಕ ಕೈಗಾರಿಕೆಗಳಿಗೆ ಉತ್ಪಾದನೆ, ವಿನಿಮಯ, ವಿತರಣೆಯಂತಹ ವ್ಯಾವಹಾರಿಕ ಪರಿಭಾಷೆ ಹಾಗೂ ಆ ಮೂಲಕ ಲಾಭನಷ್ಟಗಳೇ ಪ್ರಮುಖವಾಗುತ್ತವೆ. ಆದರೆ ಸಾಂಪ್ರದಾಯಿಕ ಕಸುಬುಗಳನ್ನು ಅವಲಂಬಿಸಿ ಬದುಕುವ ಬುಡಕಟ್ಟು ಸಮುದಾಯಗಳಿಗೆ ವ್ಯವಹಾರದ ಹೊರತಾಗಿಯೂ ಸಾಂಸ್ಕೃತಿಕ ಬದುಕು ಮುಖ್ಯವಾಗುತ್ತದೆ. ಜೊತೆಗೆ ದೊಡ್ಡ ದೊಡ್ಡ ಕಾರ್ಖಾನೆಗಳ ಉತ್ಪನ್ನಗಳ ಮುಂದೆ ಸಣ್ಣ ಕಾರ್ಖಾನೆಗಳ ಉತ್ಪನ್ನಗಳೇ ಪೈಪೋಟಿಗೆ ನಿಲ್ಲದ ಸ್ಥಿತಿಯಲ್ಲಿವೆ.

ಪಾರಂಪರಿಕ ವೃತ್ತಿಗಳನ್ನು ಗಮನಿಸಿದಾಗ ಕೆಲವು ಅಂಶಗಳು ಗಮನಕ್ಕೆ ಬರುತ್ತವೆ. ಈ ದೇಶದಲ್ಲಿ ಬುದ್ಧಿಶಕ್ತಿಗೆ ಕೊಟ್ಟ ಪ್ರಾಮುಖ್ಯತೆಯನ್ನು ದೈಹಿಕ ಶಕ್ತಿಗೆ ಕೊಡಲಿಲ್ಲ. ಜೊತೆಗೆ ದೈಹಿಕ ಶಕ್ತಿಯ ಕೆಲವು ಕೆಲಸಗಳನ್ನು ಸಹ ಕೀಳು ಮನೋಭಾವದಲ್ಲಿ ಕಾಣುವ ಪರಂಪರೆ ಮೊದಲಿನಿಂದಲೂ ಬೆಳೆದು ಬಂದಿದೆ. ಹಾಗಾಗಿ ಕೆಲವೊಂದು ಬುಡಕಟ್ಟು ಸಮುದಾಯಗಳು ತಮ್ಮ ಮೂಲ ಕಸುಬುಗಳನ್ನು ಬಿಡುತ್ತಿವೆ. ಮೊದಲಿನಿಂದಲೂ ಇಲ್ಲಿಯ ಸಾಮಾಜಿಕ ಚರಿತ್ರೆಯನ್ನು ಗಮನಿಸಿದರೆ ನಮಗೆ ಗೊತ್ತಾಗುವುದೇನೆಂದರೆ ಯಾವ ವ್ಯಕ್ತಿ ಯಾವ ಕಸಬನ್ನು ಮಾಡುತ್ತಾನೆ, ಆ ಕಸಬಿಗೆ ಸಮಾಜದಲ್ಲಿ ಯಾವ ಮಾನ್ಯತೆ ಇದೆ ಎಂಬುದರ ಆಧಾರದ ಮೇಲೆ ಸಾಮಾಜಿಕ ಮನ್ನಣೆಗಳು ದೊರಕುತ್ತವೆ. ಇಂತಹ ಸಂದರ್ಭದಲ್ಲಿ ಸಮುದಾಯವೊಂದು, ಒಂದು ಕಸುಬನ್ನು ಬಿಟ್ಟು ಮತ್ತೊಂದು ಕಸುಬನ್ನು ಮಾಡಲು ನಿರ್ಧರಿಸಿದರೆ ಅದನ್ನು ಗೌರವಿಸಬೇಕು. ಏಕೆಂದರೆ ಆ ಕಸುಬು ಅವನಿಗೆ ಸಂಭವಿಸಲಿರುವ ನೋವು, ಹಿಂಸೆ, ಹಸಿವು, ದಾರಿದ್ರ್ಯ ಮುಂತಾದವುಗಳಿಂದ ಅವನನ್ನು ರಕ್ಷಿಸುತ್ತದೆ. ನಾಗರಿಕ ಜಗತ್ತಿನ ಜನರು ಹೊಸದಾಗಿ ಆವಿಷ್ಕಾರಗೊಂಡ ತಂತ್ರಜ್ಞಾನಕ್ಕೆ ಹೋದರೆ ನಾವು ಅವರಿಗೆ ಮನ್ನಣೆ

ನೀಡುತ್ತೇವೆ. ಸಮಾಜದಲ್ಲಿ ಅವರಿಗೆ ಉನ್ನತ ಸ್ಥಾನಮಾನವನ್ನು ನೀಡುತ್ತೇವೆ. ಹಾಗೆಯೇ ಬುಡಕಟ್ಟು ಸಮುದಾಯಗಳು ಸಹ ಹೊಸ ಕಸುಬನ್ನು ಮಾಡಲು ನಿರ್ಧರಿಸಿದರೆ ಅವರಿಗೆ ಅವಕಾಶ ಕಲ್ಪಿಸಿಕೊಡುವ ಮುಖಾಂತರ ಮಾನವೀಯತೆಯನ್ನು ಮೆರೆಯಬೇಕು. ಸಾಂಸ್ಕೃತಿಕ ಅನನ್ಯತೆ ಹೆಸರಿನಲ್ಲಿ ಹಾಗೇ ಇರುವಂತೆ ಹೇಳುವುದು ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ.

ಭಾರತದ ಸರ್ಕಾರ ಅರಣ್ಯ ಕಾಯಿದೆಗೆ ೧೮೭೮ರಲ್ಲಿ ತಿದ್ದುಪಡಿ ತಂದು ಅರಣ್ಯಗಳನ್ನು ಕಂದಾಯ ಅರಣ್ಯಗಳು, ಸುರಕ್ಷಿತ ಅರಣ್ಯಗಳು ಮತ್ತು ಗ್ರಾಮ ಅರಣ್ಯಗಳು ಎಂಬ ವಿಭಾಗಗಳನ್ನು ಮಾಡಿ ನಿಯಮಗಳನ್ನು ರೂಪಿಸಲಾಯಿತ್ತು.

ಸರ್ಕಾರದ ಈ ನೀತಿಯಿಂದಾಗಿ ಅರಣ್ಯ ಉತ್ಪನ್ನಗಳನ್ನೇ ತಮ್ಮ ಜೀವಾಳವಾಗಿರಿಸಿಕೊಂಡಿದ್ದ ಬುಡಕಟ್ಟು ಸಮುದಾಯಗಳಿಗೆ ಬರಸಿಡಿಲು ಬಡಿದಂತಾಗಿ ಭೂಮಿ, ನದಿ ಮತ್ತು ಅರಣ್ಯಗಳ ಭಾಗವಾಗಿದ್ದ ಇವರು ಇವೆಲ್ಲದರಿಂದ ದೂರವಾದರು. ಉತ್ಪಾದನಾ ಕ್ರಿಯೆಗಳಲ್ಲಿ ಇರುವ ಸಾಪೇಕ್ಷ ಪ್ರತ್ಯೇಕತೆಯೂ ಬುಡಕಟ್ಟು ಚಹರೆ ಉಳಿದುಕೊಂಡು ಬರಲು ಕಾರಣವಾಗಿದೆ. ಉದಾ: ಪಶುಪಾಲನೆ, ಬೇಟೆಗಾರಿಕೆ, ಅರಣ್ಯ, ಉತ್ಪನ್ನ ಸಂಗ್ರಹ ಮುಂತಾದವು. ಈಗಲೂ ಪಶುಪಾಲನೆ, ಬೇಟೆಗಾರಿಕೆ ಹಾಗೂ ಅರಣ್ಯ ಉತ್ಪನ್ನ ಸಂಗ್ರಹದಲ್ಲಿ ತೊಡಗಿರುವ ಇರುಳಿಗರು, ಹಕ್ಕಿಪಿಕ್ಕಿಗಳು ಇಂದಿಗೂ ತಮ್ಮ ಸಾಂಸ್ಕೃತಿಕ ಚಹರೆಗಳನ್ನು ಬಿಟ್ಟುಕೊಡದೇ ಉಳಿಸಿಕೊಳ್ಳುತ್ತಿರುವುದು ಗಮನೀಯ ಸಂಗತಿ.

## ಇರುಳಿಗರಲ್ಲಿ ಉತ್ಪಾದನಾ ಚಟುವಟಿಕೆಗಳು :

### ಬೇಟೆ :

ಮೂಲನಿವಾಸಿಗಳು ಅಥವಾ ಬುಡಕಟ್ಟು ಸಮುದಾಯಗಳ ಮೂಲಗಳಲ್ಲಿ ತಮ್ಮ ಜೀವನ ನಿರ್ವಹಣೆಗೆ ಎರಡು ವೃತ್ತಿಗಳನ್ನು ಅವಲಂಬಿಸಿರುವುದು ಕಾಣುತ್ತದೆ. ಕಾಡಿನ ಗೆಡ್ಡೆ-ಗೆಣಸು ಅಗೆದು ತಿನ್ನುವುದು; ಮತ್ತು ಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಮಾಂಸವನ್ನು ಆಹಾರವಾಗಿ ಬಳಸುವುದು. ಈ ಎರಡೂ ವ್ಯಕ್ತಿಗಳು ಅವನ ಆಹಾರ ಸಂಗ್ರಹಣೆಗೆ ಮುಖ್ಯವಾಗಿದ್ದವು. ಅದರಲ್ಲೂ ಬೇಟೆ ಬಹಳ ಮುಖ್ಯವಾದುದಾಗಿತ್ತು. ಇರುಳಿಗರು ವಾಸಿಸುವ ದಟ್ಟ ಕಾಡಿನಲ್ಲಿ ಅಪಾರವಾದ ಕಾಡುಮೃಗಗಳ ಸಂಪತ್ತು ಅಡಗಿತ್ತು. ಆದರೆ ಅದೆಲ್ಲಾ ಭೂತಕಾಲಕ್ಕೆ ಸರಿದು ಹೋಗಿದೆ. ಹುಲಿ, ಆನೆ ಇತ್ಯಾದಿ ಪ್ರಾಣಿಗಳನ್ನು ಬಹಳ ಹಿಂದೆ ಬೇಟೆಯಾಡುತ್ತಿದ್ದರೂ ಅವುಗಳನ್ನು ತಿನ್ನಲು ಉಪಯೋಗಿಸುತ್ತಿರಲಿಲ್ಲ. ಅವುಗಳ ಚರ್ಮ, ದಂತಗಳನ್ನು ಮಾರಾಟ ಮಾಡಿ ದವಸ-ಧಾನ್ಯಗಳನ್ನು ತಂದುಕೊಳ್ಳುತ್ತಿದ್ದರು. ಮಾಂಸಾಹಾರ ಇವರಿಗೆ ಬಹಳ ಪ್ರಿಯವಾದುದ್ದು. ಸರ್ಕಾರಿ ಆಜ್ಞೆಯನುಸಾರ ಬೇಟೆ ನಿಷಿದ್ಧವಾದ ಮೇಲೆ ದೈನಂದಿನ ಆಹಾರಕ್ಕಾಗಿ ಸಸ್ಯಾಹಾರವನ್ನೇ ಅವಲಂಬಿಸಬೇಕಾಯಿತು. ಸೋಪಡಿ ಬೇಟೆಗೆ ಇವರು ಹೆಚ್ಚಿನ ಆದ್ಯತೆ ನೀಡುತ್ತಿದ್ದರು. ದೊಡ್ಡ ದೊಡ್ಡ ಪ್ರಾಣಿಗಳ ಬೇಟೆ ನಿಲ್ಲಿಸಿದ್ದರೂ, ಚಿಕ್ಕ ಚಿಕ್ಕ ಪ್ರಾಣಿಗಳನ್ನು

ಇಂದಿಗೂ ಬೇಟೆಯಾಡಿ ಮಾಂಸಾಹಾರವನ್ನು ಸ್ವಲ್ಪ ಮಟ್ಟಿಗಾದರೂ ಬಳಸುತ್ತಿದ್ದಾರೆ. ಅಂತಹವುಗಳಲ್ಲಿ ಕೆಲವು ಬೇಟೆಯ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ.೧೧

**ಇಲಿ ಬೇಟೆ :**

ಇಲಿ ಬೇಟೆಯಾಡುವುದನ್ನು ಕಂಡು ಸುತ್ತಮುತ್ತಲ ಬೇರೆ ಜಾತಿಯ ಜನರು ನಮ್ಮನ್ನು ಇಲ್ಲಿಗರು, ಕಾಡಿಲುಗ್ರು ಎನ್ನುತ್ತಾರೆ; ಇದರಿಂದ ನಮಗೆ ಅವರು ಬೈದಂತೆ ಅವಮಾನವಾಗುತ್ತದೆ. ಏನು ಮಾಡುವುದು? ಹೊಟ್ಟೆಯ ಪಾಡಿಗಾಗಿ ಬೇರೇನೂ ಸಿಗದಿದ್ದಾಗ ಇಲಿ, ತೋಡನ ಬೇಟೆಯಾಡಿ ಆಹಾರ ಸಂಗ್ರಹಿಸಬೇಕಾದ ಪರಿಸ್ಥಿತಿ ಬಂತು ಎನ್ನುತ್ತಾರೆ. ಇರುಳಿಗ ವಕ್ತೃ ಗೂನಯ್ಯ. ಇದೇ ಮಾತುಗಳನ್ನು ಕ್ಷೇತ್ರಕಾರ್ಯ ಕಾಲದಲ್ಲಿ ಅನೇಕ ವಕ್ತೃಗಳು ನೋವಿನಿಂದ ಹೇಳಿಕೊಂಡಿದ್ದಾರೆ. ಆದರೂ ಅಧ್ಯಯನದ ದೃಷ್ಟಿಯಿಂದ ಇಲಿ ಬೇಟೆಯಾಡುವ ವಿಧಾನವನ್ನು ನೋಡಬೇಕೆಂಬ ಈ ಅಧ್ಯಯನಕಾರನ ಬೇಡಿಕೆಯಂತೆ ಸ್ನೇಹಪರರಾದ ಇರುಳಿಗರು ತಮ್ಮ ಇಲಿ ಬೇಟೆಯ ಎಲ್ಲ ಆಯುಧಗಳನ್ನು ತೆಗೆದುಕೊಂಡು ಆರು ಜನ ಗುಂಪಾಗಿ ಹೊರಟೇ ಬಿಟ್ಟರು. ಒಣ ನೆಲದ ಬೇಟೆಯನ್ನಷ್ಟೇ ಅಲ್ಲ ಮಳೆಗಾಲ ಮತ್ತು ಭತ್ತದ ಗದ್ದೆಯ ಬದುವಿನಲ್ಲೂ ಇಲಿ, ತೋಡನ ಬೇಟೆಯಾಡುತ್ತೇವೆಂದು ಹೇಳಿದರು.

ಇಲಿ ಬೇಟೆಗೆ ಹೊರಡುವಾಗ ಹೆಂಡತಿಯು ಬುರುಡೆ ಹಿಡಿದು ಮುಂದೆ ಹೋಗಬೇಕು. ಗಂಡ; ಸಲಿಕೆ, ಗುದ್ದಲಿ, ಹಾರೆಕೋಲು, ಕೊಂಗಮಚ್ಚು, ಚೀಲಗಳನ್ನು ಎತ್ತಿಕೊಂಡು ಹಿಂದೆ ಹೋಗಬೇಕು. ಆದರೆ ಈಗ ಅದು ಬದಲಾಗಿದೆ. ಹಿಂದಿನ ದಿನವೇ ಬಿಲಗಳಿಗೆ ಸಡಿಲವಾಗಿ ಕಲ್ಲುಗಳನ್ನು ಮುಚ್ಚಿ ಬಂದಿರುತ್ತಾರೆ. ಮಾರನೇ ದಿನ ಹಾಗೆ ಕಲ್ಲು ಮುಚ್ಚಿರುವ ಬಿಲಗಳನ್ನು ಇಲಿಗಳಿದ್ದರೆ, ಆ ಕಲ್ಲುಗಳು ಜರುಗುತ್ತವೆ. ಬಿಲದ ಸುತ್ತಲೂ ಇರುವ ಪೊದೆಯನ್ನು ಮಚ್ಚಿನಿಂದ ಕೊಚ್ಚಿ ಬಿಲಕ್ಕೆ ಒಂದು ಸೂಲಿ ಕಡ್ಡಿ ಅಥವಾ ಜಿಡ್ಡಿ ಕಡ್ಡಿಯನ್ನು ಇಡುತ್ತಾರೆ. ಹಾರೆಕೋಲಿನಿಂದ ಅಗೆದು ಸಲಿಕೆಯಿಂದ ಮಣ್ಣನ್ನು ತೆಗೆಯುತ್ತಾರೆ. ಬಿಲದ ಬಾಯಿಯನ್ನು ಸರಿಯಾಗಿ ಕಾಣುವಂತೆ ಜಾಗ ಮಾಡಿಕೊಳ್ಳುತ್ತಾರೆ. ಅಷ್ಟರಲ್ಲಿ ಮತ್ತೊಬ್ಬ ಬುರುಡೆಗೆ ಒಣ ಬೆರಣಿಗಳನ್ನಾಕಿ ಅದರ ಮೇಲೆ ಹಸಿ ಸೊಪ್ಪು, ಹುಲ್ಲುಗಳನ್ನು ತುಂಬುತ್ತಾನೆ. ಗಡಿಗೆಯ ತಳಭಾಗದಲ್ಲಿರುವ ರಂಧ್ರದ ಮೂಲಕ ಬೆರಣಿಗೆ ಬೀಡಿಯ ಬೆಂಕಿಯಿಂದ ಬೆಂಕಿ ತಾಗಿಸುತ್ತಾನೆ. ಬೆಂಕಿ, ಬೆರಣಿಗೆ ಸರಿಯಾಗಿ ತಾಗಿದ ಮೇಲೆ ಬಲವಾಗಿ ಊದುತ್ತಾನೆ. ಗಡಿಗೆಯನ್ನೆಲ್ಲಾ ವ್ಯಾಪಿಸಿದ ಬೆಂಕಿ ಹಸಿ ಸೊಪ್ಪಿನ ಮೂಲಕ ದಟ್ಟವಾದ ಹೊಗೆಯಾಗಿ ಹೊರಬರುತ್ತದೆ. ಇದನ್ನು ಇರುಳಿಗರು "ಊದರಬುರುಡೆ" ಎನ್ನುತ್ತಾರೆ. ಹೀಗೆ ತಯಾರಾದ ಊದರ ಮೊಗೆಯ ಬಾಯಿಯನ್ನು ಮೊದಲೇ ಅಗೆದು ಜಾಗ ಮಾಡಿಕೊಂಡಿರುವ ಇಲಿಯ ಬಿಲದ ಬಾಯಿಗೆ ಇಡುತ್ತಾನೆ. ಅದಕ್ಕೂ ಮುನ್ನ ಎಲ್ಲಿಯಾದರೂ "ಕನ್ನಾರ" ಇವೆಯೇ ಎಂದು ಕೋಲಿನಿಂದ ಚುಚ್ಚಿ. ಚುಚ್ಚಿ ನೋಡಿ ಪರಿಶೀಲಿಸಿ ಹಾಗೇನಾದರೂ ಇದ್ದರೆ ಕಲ್ಲುಗಳಿಂದ ಅದನ್ನು ಭದ್ರವಾಗಿ ಮುಚ್ಚುತ್ತಾರೆ. ನಂತರ ಬಿಲದ ಬಾಯಿಗಿಟ್ಟ ಊದರಮೊಗೆಯ ತಳಭಾಗದ ರಂಧ್ರದಿಂದ ಬಲವಾಗಿ ಒಬ್ಬ ವ್ಯಕ್ತಿ ಊದುತ್ತಾನೆ. ಅದರಿಂದ ಹೊರಬಂದ ಹೊಗೆ ಬಿಲದ ಎಲ್ಲ

ಭಾಗಗಳನ್ನು ವ್ಯಾಪಿಸುತ್ತದೆ. ಮತ್ತೆ ಬಿಲದ ಬಾಯಿಗಳಿದ್ದರೆ ಅಲ್ಲಿ ಹೊಗೆ ಹೊರಬರುತ್ತದೆ. ಹಾಗೆ ಕಂಡ ಬಿಲದ ಬಾಯಿಗಳನ್ನು ಜೊತೆಯಲ್ಲಿದ್ದ ಉಳಿದವರು ಕಲ್ಲು-ಮಣ್ಣುಗಳಿಂದ ಭದ್ರವಾಗಿ ಮುಚ್ಚುತ್ತಾರೆ.

ತಾಯಿ ಇಲಿ ೧೫೦ರಿಂದ ೩೦೦ ಗ್ರಾಂ ಇರುತ್ತದೆ. ಮರಿಗಳು ಹುಟ್ಟಿದಾಗ ೧೦ರಿಂದ ೧೫ ಗ್ರಾಂನಷ್ಟು ಇರುತ್ತವೆ. ಇಲಿ ಬೇಟೆ ಸಂದರ್ಭದಲ್ಲಿ ಗೂಡಾಸಿಗೆಯಿಂದ ಎರಡು ಮೂರು ಮೀಟರ್‌ಗಳಿಗೆ ಬಿಲ ಕೊನೆಗೊಳ್ಳುತ್ತದೆ. ಅಷ್ಟರಲ್ಲಿ ಎರಡು ಮೂರು ಇಲಿಗಳು ಸಿಗುತ್ತವೆ. ನಂತರ ಮತ್ತೊಂದು ದಿಕ್ಕಿಗೆ ಇರುವ ಬಿಲವನ್ನು ಅಗೆಯುತ್ತಾರೆ. ಒಂದು ಬಿಲದಲ್ಲಿ ಇಷ್ಟೇ ಇಲಿಗಳಿರುತ್ತವೆಂದು ಕರಾರುವಾಕ್ಕಾಗಿ ತಾವು ಹಿಂದಿನಿಂದ ಬೇಟೆಯಾಡಿದ ಅನುಭವದ ಆಧಾರದ ಮೇಲೆ ಹೇಳುತ್ತಾರೆ. ಅಷ್ಟು ಇಲಿಗಳು ಸಿಗುವವರೆಗೂ ಎಲ್ಲಾ ದಿಕ್ಕಿನ ಬಿಲಗಳನ್ನೂ ಅಗೆದು ಇಲಿಗಳನ್ನು ಹಿಡಿಯುತ್ತಾರೆ. ಇಲಿಯೊಂದು ನಾಲ್ಕರಿಂದ ಹದಿನೈದು ಮರಿಗಳನ್ನು ಹಾಕುತ್ತದೆಯಂತೆ. ಸಣ್ಣ ಮರಿಗಳಿರುವಾಗ ಎಲ್ಲವೂ ಒಟ್ಟಿಗೆ ಇರುತ್ತವೆ. ನಂತರ ಗಂಡಿಲಿ(ಅಪ್ಪಿಲಿ)ಯ ಬಳಿ ಕೆಲವು, ಹೆಣ್ಣಿಲಿ(ಅವ್ವಿಲಿ)ಯ ಜೊತೆ ಕೆಲವು ಮರಿಗಳಿರುತ್ತವೆಯಂತೆ, ಆಹಾರವನ್ನು ಒದಗಿಸುವ ಸಲುವಾಗಿ ಈ ವಿಭಜನಾಕ್ರಮವಿರಬಹುದು. ಇಲಿ ಬೇಟೆಯ ಸಂದರ್ಭದಲ್ಲಿ ಕೆಲವು ಆಚರಣೆಗಳನ್ನು ಮಾಡುತ್ತಾರೆ. (ಆಚರಣೆ ಮತ್ತು ನಂಬಿಕೆಗಳು ಎಂಬಲ್ಲಿ ಈ ಬಗ್ಗೆ ವಿವರಿಸಲಾಗಿದೆ).

ಇಲಿ ಬೇಟೆಯ ಸಂದರ್ಭದಲ್ಲಿ ಇವರಲ್ಲಿ ಪ್ರಚಲಿತವಿರುವ ಒಂದು ಕಥೆಯನ್ನು ನೆನೆಸಿಕೊಳ್ಳುತ್ತಾರೆ. ಅದರ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ : ಬೇಟೆ ಪ್ರಾರಂಭವಾಗುತ್ತಿದೆ, ಎಂದು ತಿಳಿದ ಯಜಮಾನ(ಗಂಡಿಲಿ ಅಥವಾ ಅಪ್ಪಿಲಿ) ಇಲಿ, ಯಜಮಾನಿ(ಹೆಣ್ಣಿಲಿ ಅಥವಾ ಅವ್ವಿಲಿ) ಇಲಿಯನ್ನು ಕೇಳುತ್ತದೆ; "ಬೇಟೆಗೆ ಬಂದಿರುವವನು ವಡ್ಡನೋ; ಇಲ್ಲಿಗನೋ" ಎಂದು. "ಇಲ್ಲಿಗ ಎಂದು ಹೆಣ್ಣಿಲಿ ಹೇಳಿದರೆ "ಹಾಸೇ ಗಿಲಿ ಗಿಲಿ ಮಂಚ" –ಎನ್ನುತ್ತದೆಯಂತೆ ಗಂಡಿಲಿ; ಬಂದಿರುವವನು ವಡ್ಡನೆಂದರೆ "ಹಾಕೆ ಮೂರಕ್ಕಿ ಕಾಳು" ಎನ್ನುವುದಂತೆ. ಬೇಟೆಗೆ ಇರುಳಿಗರವನು ಬಂದರೆ ಕಷ್ಟಪಟ್ಟು ಇಲಿಗಳಿರುವ ತಾಣವನ್ನು ಹುಡುಕಲಾರ; ಯಾವುದಾದರೂ ಮೂಲೆಯಲ್ಲಿ ಸೇರಿ ಜೀವ ಉಳಿಸಿಕೊಳ್ಳಬಹುದು; ವಡ್ಡರಾದರೆ ನಮ್ಮನ್ನು ಎಲ್ಲಿದ್ದರೂ ಹಿಡಿದುಬಿಡುತ್ತಾರೆ. ಕಲ್ಲಿನಲ್ಲಿ ಸೇರಿದರೂ ಪುಡಿ ಮಾಡಿ ಹಿಡಿಯಬಲ್ಲನಾದ್ದರಿಂದ ಹಾಕೆ ಮೂರಕ್ಕಿಕಾಳು ಎನ್ನುತ್ತದೆಯಂತೆ. "ಹಾಕೆ ಮೂರಕ್ಕಿ ಕಾಳು" ಎಂದರೆ : ಸಾವಾದ ಮನೆಯಲ್ಲಿ ಬೇಯಿಸುವ ಕೂಳಿಗೆ (ಇಂಡೇಕೂಳು) ಸಂಕೇತವಾಗಿ ನಾವು ವಡ್ಡನ ಕೈಯಿಂದ ಬದುಕುಳಿಯುವುದು ಸುಳ್ಳು, ಮೂರು ಅಕ್ಕಿ ಕಾಳ್ಹಾಕಿ ನಮ್ಮ ಇಂಡೇಕೂಳು ತಯಾರು ಮಾಡು ಎನ್ನುವ ಅರ್ಥ ಬರುತ್ತದೆ. ಇದು ಇರುಳಿಗ ಮತ್ತು ವಡ್ಡ ಎರಡು ಸಮುದಾಯಗಳ ದುಡಿಮೆಯನ್ನು ಸೂಚಿಸುತ್ತದೆ. ವಡ್ಡ ಕಷ್ಟ ಜೀವಿಯಾಗಿ ಕಂಡು ಬಂದರೆ; ಇರುಳಿಗ ಅಷ್ಟು ಕಷ್ಟಜೀವಿಯಲ್ಲ ಎಂಬುದನ್ನು ಈ ಸಣ್ಣ ಪ್ರಸಂಗ ಸಂಕೇತಿಸುತ್ತದೆ.

**ತೋಡನ ಬೇಟೆ :**

ತೋಡ (ತ್ವಾಡ) ಎಂದರೆ ನಗರ, ಪಟ್ಟಣ, ಗ್ರಾಮಗಳಲ್ಲಿ ವಾಸಿಸುವ ಹೆಗ್ಗಣ; ಅದೇ ಹೆಗ್ಗಣ ಹೊಲ, ಗದ್ದೆಗಳಲ್ಲಿ ವಾಸಿಸಿದರೆ ತೋಡವಾಗುತ್ತದೆ. ಹೆಸರೇ ಸೂಚಿಸುವಂತೆ ದಪ್ಪ ಇಲಿಯೇ ತೋಡ. ಯಾರನ್ನಾದರೂ ಬಯ್ಯುವಾಗ "ಏನೋ ತಿಂದು ತಿಂದು ಒಳ್ಳೆ ತೋಡ ಇದ್ದಂಗಿದ್ದಿ" ಎಂಬುದು ಗ್ರಾಮೀಣರ ಸಾಮಾನ್ಯ ಬೈಗುಳ. ಸಾಮಾನ್ಯವಾಗಿ ರಾಗಿ, ಭತ್ತ, ಗೋಧಿಯಂತಹ ಧಾನ್ಯಗಳು ಬೆಳೆಯುವ ಅದರಲ್ಲೂ ಖುಷ್ಕಿ ಅಂದರೆ ರಾಗಿ ಬೆಳೆಯುವ ಜಮೀನಿನಲ್ಲಿ ತೋಡಗಳ ಬಿಲಗಳಿರುತ್ತವೆ. ಮಣ್ಣು ತೋಡುವ ಕೆಲಸವನ್ನು ವೇಗವಾಗಿ ಮಾಡುವುದರಿಂದ ತೊಡ (ತೋಡುವುದು)ಎಂಬ ಹೆಸರು ಬಂದಿರಬಹುದು. ತಡ ಬಿಲದ ಎಲ್ಲ ದಿಕ್ಕುಗಳಲ್ಲೂ ಹತ್ತಾರು ಮೀಟರ್‌ಗಳವರೆಗೂ ಮಣ್ಣು ತೋಡುತ್ತದೆ. ಬೆಳೆದ ಫಸಲಿನ ಅದರಲ್ಲೂ ರಾಗಿಯ ಬಲಿತ ತೆನೆಗಳನ್ನು ತನ್ನ ಬಿಲದಲ್ಲಿ ಶೇಖರಿಸುತ್ತದೆ. ತೋಡ ತೋಡುವುದನ್ನೇ ಕುರಿತು ಪ್ರಚಲಿತವಿರುವ ಮಾತು : "ತೋಡ ತೋಡ್ತಿತ್ತು. ನಾನು ನೋಡ್ತಿದ್ದೆ, ನನ್ ಕಂಡೋಡೊಯ್ತು ಗಂಡ್ ತ್ವಾಡ". ಇಲಿ ತೋಡಗಳು ರೈತ ಬೆಳೆದ ಧಾನ್ಯಗಳನ್ನು ಶೇಖರಿಸುವ ಕುರಿತು ಕತೆಯೊಂದನ್ನು ಹೇಳುತ್ತಾರೆ

ವ್ಯವಸಾಯ ಸಂದರ್ಭದಲ್ಲಿ ಭತ್ತ-ರಾಗಿ ಬೆಳೆ ಬೆಳೆದರೆ ಇಲಿಗಳೂ ಕೂಡ ತೆಗೆದುಕೊಂಡು ಹೋಗುತ್ತವೆ. ಆದ್ದರಿಂದಲೇ ಇತರರು ಇಲಿಗಳನ್ನು ಚೋರ, ಕಳ್ಳ ಎಂದು ನೋಡುತ್ತಾರೆ. ಆದರೆ ಬುಡಕಟ್ಟು ಸಮುದಾಯದವರಾದ ಇರುಳಿಗರು ನೋಡುವ ಭಾವನೆಯೇ ಬೇರೆ. ಇರುಳಿಗ ದಂಪತಿಗಳು ಮಳೆಗಾಲದಲ್ಲಿ ಬಿತ್ತನೆ ಹಾಕಲು ಗಂಡನಿಗೆ ಬೀಜ ಹುಡುಕಿ ತರಲು ಹೇಳಿದಳು. ಹಾಗೆ ಹೊರಟ ಗಂಡ; ದೇವರ ಬಳಿಗೆ ಹೋಗಿ ಬೀಜ ಕೇಳಿದ. ದೇವರು ನಳ್ಳಿ (ಏಡಿ) ಹತ್ತಿರ ಕೇಳಲು ಹೇಳಿದ. ನಳ್ಳಿ ಹತ್ತಿರ ಬಂದು ಕೇಳಿದಾಗ ಹಂದಿ ಹತ್ತಿರ ಕೇಳಲು ಹೇಳಿತು. ಅದರಂತೆ ಹಂದಿ ಹತ್ತಿರ ಕೇಳಿದಾಗ ಹುಲಿ ಹತ್ತಿರ ಹೋಗಲು ತಿಳಿಸಿತು. ಹುಲಿ-ಅಳಿಲು ಹತ್ತಿರಕ್ಕೆ ಕಳುಹಿಸಿತು. ಅಳಿಲ ಬಳಿ ಹೋದಾಗ ಅದು ಇಲಿಯ ಬಳಿ ಹೋಗಲು ಸಲಹೆ ನೀಡಿತು. ಅಂತೆಯೇ ತಿರುಗಿ ತಿರುಗಿ ಸುಸ್ತಾದ ಆತ ಇಲಿಯ ಬಳಿ ಬೀಜ ಕೇಳಿದ. ಆಗ ಇಲಿಯು ಒಂದು ನಿರ್ಬಂಧವನ್ನು ಹೇರಿ "ಬೆಳೆದ ಬೆಳೆಯಲ್ಲಿ ತನಗೆ ಅರ್ಧ ಭಾಗ ಕೊಡುವುದಾಗಿ ಮಾತು ಕೊಡುವುದಾದರೆ ಬಿತ್ತನೆ ಬೀಜ ಕೊಡುತ್ತೇನೆ" ಎಂದಿತು. ಹಾಗೆಯೇ ಆಗಲಿ ಎಂದು ಅಶ್ವಾಸನೆ ಕೊಟ್ಟ ಮೇಲೆ ಬಿತ್ತನೆ ಮನೆಗೆ ತೆಗೆದುಕೊಂಡು ಹೋಗುವಾಗ ಇಲಿ ತನ್ನ ಪಾಲನ್ನು ಕೇಳುತ್ತದೆ. ಬೆಳೆ ತೆಗೆದವನು ಇಲಿಯನ್ನು ಗದರಿಸಿ ಕಳುಹಿಸಲು ಪ್ರಯತ್ನಿಸುತ್ತಾನೆ. ಇಲಿಯು "ನೀನು ಕೊಟ್ಟ ಮಾತಿಗೆ ತಪ್ಪಿದ್ದೀಯ, ಆದ್ದರಿಂದ ಮುಂದಿನ ಸಾರಿಯಿಂದ ಬೆಳೆಯನ್ನು ಕಟಾವು ಮಾಡಿ ಮನೆಗೆ ಸಾಗಿಸುವ ಮುನ್ನ ನನ್ನ ಪಾಲನ್ನು ನಾನು ತೆಗೆದುಕೊಳ್ಳುತ್ತೇನೆ" ಎಂದು ಶಪಥ ಮಾಡಿತಂತೆ. ಆದ್ದರಿಂದಲೇ ಇಲಿಗಳು ಬೆಳೆದ ಬೆಳೆಯ ಹತ್ತಿರ ಬರುವುದು ಎಂದು ಕಥೆಯ ಮೂಲಕವೇ ಅದರ ಹಕ್ಕನ್ನು ಪ್ರತಿಪಾದಿಸುತ್ತಾರೆ. ಈ ಕಾರಣದಿಂದಲೇ ಇಲಿಗಳಿಗೆ ಹೊಲದ ಬಳಿ ವಿಷ ಹಾಕುವುದಿಲ್ಲ. ಅದರ ಫಲ ಅದು ತೆಗೆದುಕೊಂಡು ಹೋಗುತ್ತದೆನ್ನುತ್ತಾರೆ.

ತೋಡ ಹಿಡಿಯುವಾಗಲೂ ಕೂಡ ಗಟ್ಟಿಯಾದ ನೆಲವನ್ನು ಅಗೆದು ಹಿಡಿಯುತ್ತಾರೆ. ತೋಡದ ಬಿಲವನ್ನು ತೋಡುತ್ತಿದ್ದಂತೆ ಅಷ್ಟೇ ವೇಗವಾಗಿ ತಾನೂ ತೋಡಿಕೊಂಡು

ಮುಂದೆ ಹೋಗುತ್ತದೆ. ಒಂದು ಬಿಲದಲ್ಲಿ ಒಂದೇ ತೋಡ ಇರುತ್ತದೆ. ತೊಡೆ ಗಾತ್ರದ ತೋಡವೂ ಇರುತ್ತದೆ. ಸಣ್ಣ ತೋಡವೂ ಇರುತ್ತದೆ. ಕೆಲವೊಮ್ಮೆ ಅದರೊಟ್ಟಿಗೆ ಮರಿಗಳಿರುತ್ತವೆ. ಇಲಿ ರಭಸವಾಗಿ ಓಡಿದರೆ; ತೋಡ ಅಷ್ಟು ವೇಗವಾಗಿ ಓಡಲಾರದು. ತೋಡ ಎಷ್ಟು ಆಳಕ್ಕೆ ಬೇಕಾದರೂ ವೇಗವಾಗಿ ತೋಡಿಕೊಂಡು ಇಳಿಯುತ್ತದೆ. ಬೇಟೆಯ ಸಮಯದಲ್ಲಿ ತೋಡ ತೋಡುವ ರಭಸವನ್ನು ಗಮನಿಸಿದರೆ ಅರ್ಥವಾಗುತ್ತದೆ. ಪ್ರಾರಂಭದಿಂದ ಹತ್ತರಿಂದ ಇಪ್ಪತ್ತು ಮೀಟರ್ ದೂರದವರೆಗೂ ಬಿಲ ಅಗೆದು ತೋಡವನ್ನು ಹಿಡಿಯುತ್ತಾರೆ. ತೋಡಗಳು ೨೦೦ಗ್ರಾಂ ತೂಕದಿಂದ ೨ ಕೆ.ಜಿ ತೂಕದಷ್ಟು ಇರುತ್ತವೆ. ಹೀಗೆ ಹಿಡಿದ ಇಲಿ, ತೋಡಗಳ ಹಿಂಗಾಲುಗಳನ್ನು ಒಂದಕ್ಕೊಂದು ಸೇರುವಂತೆ ಮಾಡಿ ಒಂದು ಕಡ್ಡಿಯಲ್ಲಿ ಸಿಕ್ಕಿಸಿ ಒಟ್ಟಾಗಿ ಇಟ್ಟುಕೊಂಡಿರುತ್ತಾರೆ. ಬೇಟೆ ಮುಗಿದ ಮೇಲೆ ಎಲ್ಲ ಇಲಿ ತೋಡಗಳ ಪುಕ್ಕ (ಕೂದಲು) ತರೆದು (ಕಿತ್ತು) ಹೊಟ್ಟೆ ಬಗೆದು ಕರುಳು ತೆಗೆದು ಬಿಸಾಡಿ ಚೂರು, ಚೂರು ಮಾಡಿ ಬಂದಿರುವಷ್ಟೂ ಜನರೂ ಸಮವಾಗಿ ಹಂಚಿಕೊಳ್ಳುತ್ತಾರೆ. ನಂತರ ಮನೆಗೆ ತಂದು ಮಸಾಲೆ ಹಾಕಿ ಸಾರು ಮಾಡಿಕೊಂಡು ಊಟಕ್ಕೆ ಬಳಸುತ್ತಾರೆ. ಇರುಳಿಗರೇ ಹೇಳುವಂತೆ ಒಂದು ಬೊಗಸೆ ಸಾರಿನಲ್ಲಿ ಮೂರು ಜನ ಊಟ ಮಾಡಬಹುದಂತೆ. ಒಂದೊಂದು ತುಂಡು ಮಾಂಸ ಬೇರೆ ಪ್ರಾಣಿಗಳ ಅರ್ಧ ಕೆ.ಜಿ ಮಾಂಸಕ್ಕೆ ಸಮನಾಗಿರುತ್ತದೆ ಎಂದು ಹೇಳುತ್ತಾರೆ. ತೋಡದಲ್ಲಿ ದೊರೆಯುವ ತುಪ್ಪ ಸ್ವಾದಿಷ್ಟವಾಗಿರುತ್ತದೆ ಮತ್ತು ಅದನ್ನು ಹಲವಾರು ಖಾಯಿಲೆಗಳಿಗೆ ಔಷಧಿಯಾಗಿ ಬಳಸುವುದಾಗಿ ತಿಳಿಸುತ್ತಾರೆ. ಬೇಧಿ, ಮಂದ, ಅಕ್ಕಳಕಿನಂಥ ಅನೇಕ ಮಕ್ಕಳ ರೋಗಗಳಿಗೆ ದಿವ್ಯೌಷಧಿಯನ್ನಾಗಿ ತೋಡನ ತುಪ್ಪವನ್ನು ಬಳಸುವುದುಂಟು. ಒಟ್ಟಾರೆ ಇರುಳಿಗರಿಗೆ ಇಲಿ ಮತ್ತು ತೋಡನ ಮಾಂಸ ಬಹಳ ಪ್ರಿಯವಾದ ಮಾಂಸಾಹಾರ, ಸುಂಡಿಲಿ, ಮೂಗಿಲಿ, ಊರಿಲಿ ಇತ್ಯಾದಿಗಳನ್ನು ಅವರು ಬಳಸುವುದಿಲ್ಲ.

**ಜಿವಾದಿ (ಉಡನ) ಬೇಟೆ :**

ಅಗಲವಾದ ಬಂಡೆಯ ಮೇಲೆ ಮತ್ತೊಂದು ಬಂಡೆ ಕಿರಿದಾದ ಗುಹೆ ನಿರ್ಮಾಣವಾಗಿರುತ್ತದೆ. ಅಲ್ಲಿಯೇ ಜಿವಾಜಿಯ ವಾಸ. ಜಿವಾಜಿ ಇರುವ ಆ ರೀತಿಯ ಬಂಡೆಯ ಸಂದನ್ನು ಹುಡುಕಿ ಎರಡು ಬಂಡೆಗಳಿಂದುಂಟಾಗಿರುವ ಸಂದುಗಳನ್ನು ಎರಡು ಕಡೆ ಚಿಕ್ಕ ಚಿಕ್ಕ ಜಾಗಗಳನ್ನು ಬಿಟ್ಟುಕೊಂಡು ಉಳಿದ ಎಲ್ಲ ಭಾಗವನ್ನೂ ಕಲ್ಲು-ಮಣ್ಣು, ಸೊಪ್ಪುಗಳಿಂದ ಮುಚ್ಚುತ್ತಾರೆ. ಮುಚ್ಚದೆ ಬಿಟ್ಟಿರುವ ಆ ಎರಡು ರಂಧ್ರಗಳನ್ನು "ಉಡುಪಳೆ" ಮತ್ತು "ಪುಡಬಂಗು" ಎನ್ನುತ್ತಾರೆ.

ಸುಮಾರು ಎರಡು ಅಡಿ ಜಾಗದಲ್ಲಿ ಒಲೆಯೋಪಾದಿಯಲ್ಲಿ ಕಲ್ಲುಗಳನ್ನು ಜೋಡಿಸಿ, ಆ ಜಾಗದಲ್ಲಿ ಬೆಂಕಿ ಹಚ್ಚಿ, ಹಸಿರು ಸೊಪ್ಪನ್ನು ಹಾಕಿ, ಮತ್ತಷ್ಟು ಹಸಿರು ಸೊಪ್ಪಿನಿಂದ ಬಲವಾಗಿ ಗಾಳಿ ಬೀಸುತ್ತಾರೆ. ಹಾಗೆ ಬೀಸುವ ಗಾಳಿಯ ರಭಸಕ್ಕೆ ದಟ್ಟವಾದ ಹೊಗೆ ಎರಡು ಬಂಡೆಗಳ ನಡುವಿನ ಗುಹೆಗೆ ನುಗ್ಗುತ್ತದೆ. ಹೊಗೆಯನ್ನು ಒಳನುಗ್ಗಿಸಲು ಒಲೆಯೋಪಾದಿಯಲ್ಲಿ ತಯಾರಿಸಿಕೊಂಡ ಆ ಜಾಗವನ್ನು ಇರುಳಿಗರು "ಉಡುಪಳೆ" ಎಂದು ಕರೆಯುತ್ತಾರೆ. ವ್ಯಾಪಕವಾಗಿ ನುಗ್ಗಿದ ದಟ್ಟ ಹೊಗೆಯನ್ನು ತಾಳಲಾರದೆ ಉಸಿರು

ಕಟ್ಟಿದ ಜಿವಾಜಿ(ಉಡ)ಯು ಹೊರಬರಲು ಸ್ಥಳ ಹುಡುಕುತ್ತದೆ. ಹಾಗೆ ಹೊರ ಬರುವ ಜಾಗದಲ್ಲಿ ಇಬ್ಬರು ಬಲವಾದ ಆಳುಗಳು ಕಾಯ್ದಿದ್ದು ಬರುತ್ತಿರುವ ಉಡವನ್ನು ಹಿಡಿಯುತ್ತಾರೆ.

ಸಿಕ್ಕಿದ ಉಡದ ಕಾಲು ಕೊಯ್ದು, ಅದೇ ಕಾಲುಗಳನ್ನು ಮಡಿಸಿ ಉಡುವಿನ ಬಾಲವನ್ನು ಕೊಯ್ದು ಕಾಲಿನ ನರಕ್ಕೆ ಸೇರಿಸಿ ಉಡುಕಟ್ಟು ಹಾಕುತ್ತಾರೆ. ಹಾಗೆ ಸಿಕ್ಕಿದ ಉಡನ ಯಾವುದಾದರೊಂದು ಭಾಗದ ಚುರು ಮಾಂಸವನ್ನು ಕೊಯ್ದು, ಒಂದು ಎಲೆಯ ಮೇಲಿಟ್ಟು ನಂತರ ಕೊಯ್ದು ಮಾಂಸ ಮಾಡಿ ಮನೆಗೆ ತಂದು, ಅದರಿಂದ ಸಾರು ಮಾಡಿ ತಿನ್ನುತ್ತಾರೆ. ದಪ್ಪ ಉಡುವಾದರೆ ಹತ್ತು ಜನರು ತಿನ್ನುವಷ್ಟು ಮಾಂಸ ಸಿಕ್ಕುತ್ತದೆಯಂತೆ. ಉಡವನ್ನು ಕೊಯ್ದಾಗ ಅದರ ಒಳಭಾಗದ ಎರಡು ಅಳೆ(ಪಕ್ಕೆ)ಗಳಲ್ಲಿ ತುಪ್ಪವಿರುತ್ತದೆ. ಆ ತುಪ್ಪವನ್ನು ತೆಗೆದು ಬೆಂಕಿಯಿಂದ ಕಾಯಿಸಿ ಹದಮಾಡಿ ಒಂದು ಶೀಶೆಗೆ ತುಂಬಿಡುತ್ತಾರೆ. ಕೈಕಾಲು ಮೂಳೆ ಮುರಿತಕ್ಕೆ, ಉಳುಕಿಗೆ, ವಾಯು ಹಿಡಿದುಕೊಂಡರೆ ನೋವಾಗಿರುವ ಜಾಗಕ್ಕೆ ಉಡನ ಆ ತುಪ್ಪದಿಂದ ಉಜ್ಜಿದರೆ ಗುಣವಾಗುತ್ತದೆಯಂತೆ. ಇಲಿ ಬೇಟೆಯಲ್ಲಿನ ಆಚರಣೆಗಳು, ನಂಬಿಕೆಗಳು ಇಲ್ಲಿಯೂ ಅಳವಡುತ್ತವೆ.

**ಕಾಡುಕೋಳಿಯ ಬೇಟೆ :**

ತಾವು ವಾಸಿಸುವ ಕಾಡಿನ ಪರಿಸರದಲ್ಲಿ ಸಿಗುವ ಕಾಡುಕೋಳಿ, ಪಿಟ್ಟೆಕೋಳಿಗಳನ್ನು ಹಿಡಿದು ಸುಟ್ಟುಕೊಂಡು ಅಥವಾ ಸಾರು ಮಾಡಿ ಉಪಯೋಗಿಸುತ್ತಾರೆ. ಕಾಡುಕೋಳಿಯನ್ನು ಹಿಡಿಯಲು "ಪಾಜಿ"ಯನ್ನು ಬಳಸುತ್ತಾರೆ. "ಪಾಜಿ" ಎಂದರೆ ಸಣ್ಣಸಣ್ಣ ಬಿದಿರು ಅಚ್ಚೆ(ದೆಬ್ಬೆ)ಗಳು ಮತ್ತು ನಾರಿನ ಹಗ್ಗದಿಂದ ತಯಾರಿಸಿದ ಸರಳವಾದ ಬೇಟೆಯ ಸಾಧನ. ಮಡಿಕೆ ಮಡಿಕೆಯಾಗಿದ್ದು,(ಮಡಿಚಿಕೊಳ್ಳುವಂತಿದ್ದು) ಬೇಕೆಂದಾಗ ಬಿಡಿಸಿಕೊಳ್ಳಲು ಅನುಕೂಲವಾಗುವಂತೆ ಆಕಾರದಲ್ಲಿ ಮಾಡಿರುತ್ತಾರೆ. ಬೇಕಾದ ಕಡೆಗೆ ಸುಲಭವಾಗಿ ಕೊಂಡೊಯ್ಯಲು ಅನುಕೂಲಕರವಾಗಿ ಇದರ ರಚನೆಯಿರುತ್ತದೆ. ಎರಡು ಅಡಿಯ ಬಿದಿರು ದೆಬ್ಬೆಗಳನ್ನು ಸಮಾನಾಂತರವಾಗಿ ಕಟ್ಟಿ ಅರ್ಧ ಅಡಿಯ ಬಿದಿರು ದೆಬ್ಬೆಗಳನ್ನು ಅಳವಡಿಸಿ ಸಾಲೆನಾರಿನ ಹುರಿಯಿಂದ ಬಿಗಿದು ಆಯತಾಕಾರವಾಗಿ ನಿರ್ಮಿಸಿರುತ್ತಾರೆ. ಹೀಗೆ ತಯಾರಿಸಿದ ಆಯತಾಕಾರದ ಚೌಕಟ್ಟಿನ ಒಳ ಅಳತೆ ಮುಕ್ಕಾಲು ಅಡಿಯಷ್ಟಿರುತ್ತದೆ. ಪ್ರತಿ ಚೌಕಟ್ಟುಗಳ ಮೇಲೆ ಕೆಳ ಮಧ್ಯಭಾಗದಿಂದ ನಾಲ್ಕು ಕಡೆಯ ದೆಬ್ಬೆಗಳಿಗೆ ಸಂಬಂಧವೇರ್ಪಡುವಂತೆ ವಜ್ರಾಕೃತಿಯಲ್ಲಿ ನಾರಿನ ದಾರಗಳಿಂದ ಬಿಗಿದಿರುತ್ತಾರೆ. ಆ ವಜ್ರಾಕೃತಿಯ ಮೇಲು ಭಾಗದ ತ್ರಿಕೋಣ ಬಿಂದುವಿನಿಂದ "ಕುದುರೆ ಬಾಲದ ಹುರುಳಿ"ನಿಂದ ಮತ್ತು "ಎತ್ತಿನ ಬಾಲದ ಹುರುಳಿ"ನಿಂದ ಹೊಸೆದು ಮಾಡಿದ ಗಟ್ಟಿ ಓಹುರುಳು(ಉಳ್ಳು)ಗಳನ್ನು ಪ್ರತಿಯೊಂದು ಚೌಕಟ್ಟಿಗೂ ಬಿಗಿದಿರುತ್ತಾರೆ. ಜೀರು ಗಂಟಿನ (ಜೀರು ಗುಣಿಕೆ) ಮಾದರಿಯ ಹುರುಳುಗಳನ್ನು ಅಳವಡಿಸಿರುತ್ತಾರೆ.

ದಟ್ಟ ಕಾಡಿನ ಪೊದೆಗಳ ಆಯಕಟ್ಟಿನ ಜಾಗದಲ್ಲಿ ಪಾಜಿಯನ್ನು ಜಿಗ್-ಜಾಗ್ ಆಕಾರದಲ್ಲಿ ಬಲೆಯಂತೆ ಬಿಡಿಸಿಡುತ್ತಾರೆ. ಬೇಟೆಗಾರ ಸ್ವಲ್ಪ ದೂರದಲ್ಲಿ ಆ ಪಾಜಿಯ

ಎದುರಿಗೆ ಅವಿತು ಕುಳಿತಿರುತ್ತಾನೆ. ಕಾಡುಕೋಳಿಗಳ ಸ್ವರವನ್ನೇ ಅನುಸರಿಸಿ ಶಬ್ದ ಮಾಡುತ್ತಾನೆ. ಈ ಅನುಕರಣೀಯ ಧ್ವನಿ ಕಾಡುಕೋಳಿಯ ಧ್ವನಿಯಂತೆಯೇ ಇರುತ್ತದೆ. ಒಂದು ಸಲ ಹುಂಜದಂತೆಯೂ, ಮತ್ತೊಂದು ಸಲ ಹೇಂಟೆಯಂತೆಯೂ ಧ್ವನಿಗಳನ್ನು ಬದಲಾಯಿಸಿ ಕೂಗುತ್ತಾನೆ. ಪ್ರಣಯದ ಧ್ವನಿಯಂತಿರುವ ಈತನ ಧ್ವನಿಗೆ ಮರುಳಾಗಿ ಕಾಡು ಹುಂಜ ಅಥವಾ ಹೇಂಟೆಗಳು ಕುಣಿದು ಕುಪ್ಪಳಿಸಿ ಬರುವಾಗ ಅಡ್ಡ ಇರುವ ಪಾಜಿಯ ಅರಿವಿರುವುದಿಲ್ಲ. ಹಾಗೆ ಕುಣಿದು ಕುಪ್ಪಳಿಸಿ ಬರುವಾಗ ಪಾಜಿಯ ಹುರುಳಿಗೆ ಅವುಗಳ ಕೊರಳು ತಗುಲಿಕೊಳ್ಳುತ್ತದೆ. ಇದನ್ನು ಲೆಕ್ಕಿಸದೆ ಮುನ್ನುಗ್ಗಿ ಹೋಗುವಾಗ ಎಳೆವ ರಭಸಕ್ಕೆ ಕೋಳಿಯ ಕೊರಳಿಗೆ ಬಿದ್ದ ಜೀರುಗುಣಿಕೆಯು ಜೀರಿಕೊಂಡು ಒದ್ದಾಡುವಾಗ ಬೇಟೆಗಾರ ಸುಲಭವಾಗಿ ಅವುಗಳನ್ನು ಹಿಡಿದುಕೊಳ್ಳುತ್ತಾನೆ. ಇರುಳಿಗರ ಆಹಾರ ಪದಾರ್ಥಗಳಲ್ಲಿ ಕಾಡುಕೋಳಿಯ ಮಾಂಸ ವಿಶೇಷ ಸ್ಥಾನ ಪಡೆದಿದೆ.

**ಕೂರ್ಗನ ಬೇಟೆ :**

"ಕೂರ್ಗ ಯಂಗ್ ಕೆಡ್ತು ಅಂದ್ರೆ ಏತ್ (ಕಕ್ಕಸ್ಸು ಮಾಡಿ) ಕೆಡ್ತು" ಎಂಬ ಗಾದೆ ಮಾತು ಇರುಳಿಗರಲ್ಲಿ ಪ್ರಚಲಿತವಾಗಿದೆ. ಕಾರಣ ಇಷ್ಟೆ, ಕೂರ್ಗ ಒಂದು ಬಾರಿ ಒಂದು ಕಡೆ ಕಕ್ಕಸ್ಸು ಮಾಡಿತೆಂದಮೇಲೆ ಅದರ ಜೀವನಪರ್ಯಂತ ಅಲ್ಲಿಯೇ ಬಂದು ಕಕ್ಕಸ್ಸು ಮಾಡುತ್ತದೆಯಂತೆ. ಕಾರಣ ಕೇಳಿದರೆ, ಇರುಳಿಗರು ತಮ್ಮದೇ ಧಾಟಿಯಲ್ಲಿ: "ಏನಿಲ್ಲ ಸ್ವಾಮಿ ಈ ಕೂರ್ಗ ಎಲ್ತಾ, ಎಲ್ತಾ ತನ್ನೇಲುನ್ ಗುಡ್ಡೆ ಮ್ಯಾಲಿಂದಾನೆ ಕೈಲಾಸ ತಲುಪ್‌ಬೋದು ಅನ್ಕೊಂಡು ಒಂದೇ ಕಡೆ ಏಲುಕ್ ಬತ್ತುದೆ. ಅವಾಗ ನಾವು ಕಾಯ್ಕೊಂಡಿದ್ದು ಒಂದೇ ಏಟ್ಗೆ ವೊಡ್ದಾಕ್ ಬುಡ್ತೀವಿ" ಎಂದು ಹೇಳುತ್ತಾರೆ. ಅಂದರೆ ಕೂರ್ಗ ಎಲ್ಲಿ ಆಹಾರ ಹುಡುಕಿಕೊಂಡು ಹೋಗಿದ್ದರೂ ಆ ಆಹಾರವನ್ನು ತಿಂದು ಹೊಟ್ಟೆ ತುಂಬಿ ಕಕ್ಕಸ್ಸು ಮಾಡುವಂತಾದರೆ ಮೊದಲು ಕಕ್ಕಸ್ಸು ಮಾಡಿದ ಜಾಗಕ್ಕೇ ಬರುತ್ತದೆಂದು ಚೆನ್ನಾಗಿ ಗೊತ್ತು. ಹಾಗಾಗಿ ಕೂರ್ಗನ ಬೇಟೆಗೆ ಹೋಗುವ ಇರುಳಿಗರು ಮೊದಲು ಕೂರ್ಗ ಕಕ್ಕಸ್ಸು ಮಾಡಿರುವ ಸ್ಥಳವನ್ನು ಕಂಡುಕೊಂಡು, ಮರೆಯಲ್ಲಿ ಅಡಗಿ ಕುಳಿತು ಕೂರ್ಗನ ಬೇಟೆಯಾಡುವುದು, ಅದರ ಮಾಂಸವನ್ನು ಎಲ್ಲರೂ ಹಂಚಿಕೊಂಡು ತಿನ್ನುವುದು ಸಾಮಾನ್ಯವಾಗಿದೆ. ಸಾಮಾನ್ಯವಾಗಿ ಕೂರ್ಗ ಕುರಿಯ ರೂಪವನ್ನು ಹೋಲುತ್ತದೆ. ಅಷ್ಟೇ ಉದ್ದ ಮತ್ತು ದಪ್ಪವಾಗಿರುತ್ತದೆ. ಹದಿನೈದರಿಂದ ನಲವತ್ತು ಕೆ.ಜಿ ವರೆಗೂ ಈ ಕೂರ್ಗ ಇರುತ್ತದೆಯಂತೆ. ಕೂರ್ಗನ ಬೇಟೆಗೆ ಸಾಮಾನ್ಯವಾಗಿ ಬಿಲ್ಲು-ಬಾಣಗಳನ್ನು ಬಳಸುತ್ತಿದ್ದರಂತೆ. ಆದರೆ ಬಿಲ್ಲು-ಬಾಣಗಳ ಬಳಕೆ ಈಗ ನಿಂತು ಹೋಗಿದ್ದು, ಭರ್ಜಿ ಅಥವಾ ಬಂದೂಕುಗಳನ್ನು ಬಳಸುತ್ತಿದ್ದಾರೆ.

**ಮೊಲದ ಬೇಟೆ :**

ಮೊಲದ ಬೇಟೆಗೆ ಹೋಗುವಾಗ ಇರುಳಿಗರು ಪ್ರಚಲಿತವಿರುವ ಮಾತೊಂದನ್ನು ಹೇಳುತ್ತಾರೆ : ಮೊಲ ಹೇಳುತ್ತದೆಯಂತೆ: "ಮೊಲ ಮೊಲ ಎಂದು ಬಂದಿರಲ್ಲೋ ನಿಮ್ಮೆಂಡ್ತಿ ಮೊಲೆನಾ ಕೆಯ್ಯ" ಎಂದು. 'ಇರುಳಿಗರು ತಮ್ಮ ಬೂಡು(ಮನೆ)ಗಳ ಸುತ್ತ ಇರುವ ರಾಗಿ ಹೊಲಗಳಿಗೆ ಎರಗಿ ಪೈರುಗಳನ್ನು ತಿನ್ನುವ ಮೊಲಗಳನ್ನು ಹಿಡಿಯಲು ಬಹಳ

ಸುಲಭವಾದ ಸಾಧನವನ್ನು ಮಾಡಿಕೊಂಡಿದ್ದಾರೆ. ಉದ್ದನೆಯ ಸಣ್ಣ ಕಬ್ಬಿಣದ ತಂತಿಗೆ ನಾಲ್ಕು ಅಂಗುಲಗಳಿಗೆ ಒಂದರಂತೆ ತಂತಿಯ ಅಥವಾ ಹುರಿಯ "ಉರುಳು" (ಉಳ್ಳು)ಗಳನ್ನು ಸಾಲಾಗಿ ಕಟ್ಟಿರುತ್ತಾರೆ. ಈ ಉಪಕರಣ ೨೦ರಿಂದ ೩೦ ಅಡಿ ಉದ್ದವಿರುತ್ತದೆ. ಈ ಸಾಲು ಉರುಳುಗಳನ್ನು ಹೊಲದ ಬದುವಿನಲ್ಲಿ ಇಲ್ಲವೇ ಹೊಲಕ್ಕೆ ಹೋಗುವ ಕಾಲುದಾರಿಗಳಲ್ಲಿ ಗೂಟ ಹೊಡೆದು ಅಥವಾ ಅಕ್ಕ ಪಕ್ಕದ ಚಿಕ್ಕಚಿಕ್ಕ ಗಿಡಗಳಿಗೆ ಮುಕ್ಕಾಲು ಅಡಿ ಎತ್ತರಕ್ಕೆ ಇರುವಂತೆ ಎಳೆದು ಕಟ್ಟುತ್ತಾರೆ. ಬೆಳೆ ತಿನ್ನಲು ಅಥವಾ ಓಡಿಯಾಡಲು ಬಂದ ಮೊಲ ಕತ್ತಲಿನಲ್ಲಿ ಕಾಣದ ಉರುಳಿಗೆ ತಲೆ ತೂರಿಸಿ ರಭಸದಿಂದ ಮುನ್ನುಗ್ಗುವಾಗ ಉರುಳಿನ ಜೀರುಗುಣಿಕೆಗೆ ಸಿಕ್ಕಿಕೊಳ್ಳುತ್ತದೆ. ಮುಸ್ಸಂಜೆಗೆ ಹಾಕಿ ಬಂದ ಉರುಳಿಗೆ ಒಂದೆರಡು ಮೊಲಗಳಾದರೂ ಸಿಕ್ಕಿಕೊಂಡಿರುತ್ತವೆ. ಅದೇ ಉರುಳಿನಲ್ಲಿ ಜೀರಿಕೊಂಡು ಒದ್ದಾಡಿ ಪ್ರಾಣಬಿಟ್ಟಿರುವ ಮೊಲಗಳನ್ನು ಬೆಳಿಗ್ಗೆ ತಂದು ಕೊಯ್ದು ಮಾಂಸದಡಿಗೆ ಮಾಡಿ ಊಟ ಮಾಡುತ್ತಾರೆ. ಕೆಲವೊಮ್ಮೆ ಮಾಂಸ ಮಾಡಿ ಅಥವಾ ಇಡೀ ಮೊಲವನ್ನು ಪೇಟೆಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡುವುದುಂಟು.

ಮೊಲಗಳನ್ನು ಮತ್ತೊಂದು ಮಾದರಿಯಲ್ಲೂ ಬೇಟೆಯಾಡುತ್ತಾರೆ. ಬ್ಯಾಟರಿಯನ್ನು ಹಣೆಗೆ (ಹಣೆಬ್ಯಾಟರಿ) ಕಟ್ಟಿಕೊಂಡು ರಾತ್ರಿಯಲ್ಲಿ ಹುಡುಕುತ್ತಾ ಕಾಡಿನಲ್ಲಿ ಹೋಗುತ್ತಿರುತ್ತಾರೆ. ಅಡ್ಡ ಬಂದ ಮೊಲವು ಪ್ರಕಾಶಮಾನವಾದ ಬ್ಯಾಟರಿಯ ಬೆಳಕನ್ನು ನೋಡಿದ ಕೂಡಲೇ ಅದರ ಕಣ್ಣುಗಳು ಕೆಂಡದುಂಡೆಯಂತೆ ಪಳ-ಪಳ ಹೊಳೆಯುತ್ತಿರುತ್ತವೆ. ಹಾಗೆ ನೋಡಿದ ಮೊಲ ಬೇರಡೆಗೆ ನೋಡಲಾರದು. ಮೊಲದ ದೃಷ್ಟಿಯನ್ನು ಪ್ರಕಾಶಮಾನವಾದ ಟಾರ್ಚ್‌ನ ಬೆಳಕಿನ ದೃಷ್ಟಿಯಿಂದ ಕೀಲಿಸ(ಅಲುಗಾಡಿಸ) ದಂತೆ ಮುನ್ನಡೆಯುತ್ತಾ ; ತಮ್ಮ ಕಂಕುಳಲ್ಲಿ ನೇತು ಹಾಕಿಕೊಂಡಿರುವ ಮೊಲದಂತೆಯೇ ಶಬ್ದ ಮಾಡುವ ಹಾರ್ನ್ ಗುಂಡಿಯನ್ನು ಒತ್ತುತ್ತಾರೆ. ಆ ಶಬ್ದಕ್ಕೆ ಮರುಳಾದ ಮೊಲವು ಹತ್ತರ ಹತ್ತಿರ ಹತ್ತಿರ ಬರುತ್ತದೆ. ಶಬ್ದ ಮಾಡದಳತೆ ಬೇಟೆಗಾರ ಕೂಡ ಮೊಲದ ಹತ್ತಿರ ಹತ್ತಿರ ಹೋಗುತ್ತಿರುತ್ತಾನೆ. ಸನಿಹ ಹೋಗುತ್ತಿದ್ದಂತೆ ತನ್ನ ಕೈಯಲ್ಲಿನ ಖಲ್ಲಿ ಯಂತಿರುವ ಉಪಕರಣದಿಂದ ಸ್ವಲ್ಪವೂ ಸದ್ದಾಗದಂತೆ ಕವುಚಿ ಹಾಕಿ ಬಂಧಿಸುತ್ತಾರೆ. ನಂತರ ಆ ಖಲ್ಲಿಯಲ್ಲಿರುವ ಮೊಲವನ್ನು ಹಿಡಿದು ಸಾಕುತ್ತಾರೆ ಮತ್ತು ಮಾಂಸಕ್ಕಾಗಿ ಬಳಸುತ್ತಾರೆ. ಜೀವಂತವಾಗಿ ಮೊಲವನ್ನು ಹಿಡಿಯುವ ವಿಧಾನವಿದು.

**ಮಂಗನ ಬೇಟೆ :**

ಇರುಳಿಗರಲ್ಲಿ ಕೆಲವರು ಮಾತ್ರ ಮಂಗನ ಮಾಂಸವನ್ನು ತಿನ್ನುತ್ತಾರೆ. ಅವರು ಮಂಗ ಹಿಡಿಯುವ ರೀತಿ ಬಹಳ ಸ್ವಾರಸ್ಯಕರವಾಗಿದೆ. ಗುಂಪು ಮಂಗಗಳು ವಾಸಿಸುವ ಕಾಡಿನಲ್ಲಿ ಒಂದು ಗುಣಿಯನ್ನು ತೆಗೆಯುತ್ತಾರೆ. ಆ ಗುಣಿಯ ವ್ಯಾಸ ಒಂದು-ಒಂದೂವರೆ ಅಡಿ ಇರುತ್ತದೆ. ಒಂದು ಅಡಿಯಷ್ಟು ಆಳವಾಗಿರುತ್ತದೆ. ಅದರೊಳಕ್ಕೆ ಒಂದಿಷ್ಟು ಸುಲಿದ ನೆಲಗಡಲೆ ಬೀಜ ಇಲ್ಲವೆ ತೆಂಗಿನ ಕಾಯಿ ಚೂರುಗಳು ಅಥವಾ

ಬಾಳೆಹಣ್ಣು ಇತ್ಯಾದಿ ಕುರುಕಲು ತಿಂಡಿಗಳನ್ನು ಹಾಕುತ್ತಾರೆ. ನಂತರ ಸಾಲೆ ನಾರಿನ ಉರುಳು ಮಾಡಿ ಗುಣಿಯ ಮೇಲು ಭಾಗದ ವ್ಯಾಸದ ಸುತ್ತ ಬರುವಂತೆ ಹಾಕಿ ಅದನ್ನು ಮಣ್ಣಿನಿಂದ ಮುಚ್ಚಿರುತ್ತಾರೆ. ಸಾಲೆಮಾರಿನ ಒಂದು ತುದಿಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಆ ಗುಣಿಯಿಂದ ಸುಮಾರು ೨೦-೩೦ ಮೀಟರ್ ದೂರದಲ್ಲಿ ಪೊದೆಗಳ ಮರೆಯಲ್ಲಿ ಅಡಗಿ ಕುಳಿತಿರುತ್ತಾರೆ. ಕುರುಕು ತಿಂಡಿಯ ಆಸೆಗೆ ಬಂದ ಕೋತಿ ಕೈಯನ್ನೋ ತಲೆಯನ್ನೊ ಗುಣಿಯ ಒಳಗೆ ಹಾಕಿದ ಕೂಡಲೇ ಕಾಯುತ್ತಿದ್ದ ಬೇಟೆಗಾರ ತನ್ನ ಕೈಯಲ್ಲಿರುವ ಉರುಳಿನ ದಾರವನ್ನು ಎಳೆಯುತ್ತಾನೆ. ಜೀರು ಕುಣಿಕೆ ಎಳೆದ ರಭಸಕ್ಕೆ ಭದ್ರವಾಗಿ ಮಂಗನ ಕೈ ಅಥವಾ ಕೊರಳಿಗೆ ಜೀರಿಕೊಳ್ಳುತ್ತದೆ. ಕುರುಕು ತಿಂಡಿಯ ಆಸೆಗೆ ಬಂದ ಮಂಗ ಬೇಟೆಗಾರನ ಉರುಳಿಗೆ ಕೊರಳು ನೀಡಿ ಸಾಯುತ್ತದೆ. ನಂತರ ಅದರ ಚರ್ಮ ಸುಲಿದು ಮಾಂಸಮಾಡಿ ಹುರಿದು ತಿನ್ನುತ್ತಾರೆ. ಕೆಲವೊಮ್ಮೆ ಪೇಟೆಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡುತ್ತಾರೆ.

**ಮುಂಗುಸಿ(ಕಿರ)ಯ ಬೇಟೆ :**

ಮುಂಗುಸಿ ಬೇಟೆಯಲ್ಲಿ ಇರುಳಿಗರು ಬೇಟೆ ನಾಯಿಯ ಸಹಾಯವನ್ನು ಹೆಚ್ಚಾಗಿ ಪಡೆಯುತ್ತಾರೆ. ಬೇಟೆಗೆ ಹೊರಡುವಾಗ ಮನೆಯಲ್ಲಿರುವ ನಾಯಿಯನ್ನು ಕುಸ್.ಕುಸ್.ಅಸ್.ಧು.ಧು.ಸೂ.ಉಸ್ ಎಂದು ಸಿಳ್ಳೆ ಹೊಡೆದು ಬಾಲೇ ಎಂದು ಕರೆಯುತ್ತಾರೆ. ಆ ಬೇಟೆ ನಾಯಿ ಬಾಲ ಆಡಿಸುತ್ತಾ ಬೇಟೆಗಾರನನ್ನು ಹಿಂಬಾಲಿಸುತ್ತದೆ. ಬೇಟೆಗಾರನ ಮೆಳೆಗಳ ಮೇಲೆ ಸಣ್ಣ ಸಣ್ಣ ಕಲ್ಲುಗಳನ್ನೆಸೆಯುತ್ತಾ ಮುಂಗುಸಿ ಇರುವ ಜಾಗವನ್ನು ಹುಡುಕಿ ಅದು ಹೊರಬರುವಂತೆ ಮಾಡುತ್ತಾನೆ. ಹೊರಬಂದ ಮುಂಗುಸಿಯನ್ನು ನಾಯಿ ಓಡಾಡಿಸಿ ಹಿಡಿದು, ಅದರೊಡನೆ ಸಾಕಷ್ಟು ಆಟವಾಡಿ ಸಾಯಿಸುತ್ತದೆ. ಸತ್ತ ಆ ಮುಂಗುಸಿಯ ಮಾಂಸದ ರುಚಿ ಬಹಳ ಚೆನ್ನಾಗಿರುತ್ತದೆಂದು ಇರುಳಿಗರು ಹೇಳುತ್ತಾರೆ. ಬೇರೆ ಜನರು ಜೊತೆಯಲ್ಲಿದ್ದರೆ ಬೇಟೆ ನಾಯಿ ಬರುವುದಿಲ್ಲವೆನ್ನುತ್ತಾರೆ. ಹಾಗೆಯೇ ಮೆಳೆ ಸಂದಿನಲ್ಲಿ ನಾಯಿ ಉಚ್ಚೆ ಮಾಡಿದರೆ ಖಂಡಿತ ಬೇಟೆಯಾಗುತ್ತದೆ ಎಂದು ನಂಬಿಕೆ ಇಟ್ಟುಕೊಂಡಿದ್ದಾರೆ.

ಮುಂಗುಸಿ ಬೇಟೆಯನ್ನು ಇನ್ನೊಂದು ವಿಧಾನದಲ್ಲಿಯೂ ಮಾಡುತ್ತಾರೆ. ದೊಡ್ಡ ಬಿದಿರಿನಿಂದ ತಯಾರಿಸಿದ ಮಂಕರಿಯಲ್ಲಿ ಒಂದು ಭಾಗಕ್ಕೆ ಕವಡುಗಡ್ಡಿಯೊಂದನ್ನು ಕೊಟ್ಟು ಅರೆ ತೆರೆದಿರುವಂತೆ ನಿಲ್ಲಿಸುತ್ತಾರೆ. ಒಳಗೆ ಒಂದು ಗೂಟ ನೆಟ್ಟು ಅದಕ್ಕೆ ಕೋಳಿ ಮರಿಯೊಂದನ್ನು ಕಟ್ಟಿರುತ್ತಾರೆ. ಕೋಳಿ ಮರಿ ಪಿಂಯ್ಯ ಪಿಂಯ್ಯ ಎಂದು ಚೀರುತ್ತಿರುತ್ತದೆ. ಕೋಳಿ ಮರಿಯನ್ನು ತಿನ್ನಲೆಂದು ಬಂದ ಮುಂಗುಸಿ ಗೂಟಕ್ಕೆ ಕಟ್ಟಿರುವ ಅದನ್ನು ಎಳೆದಾಡುವಾಗ ಮಂಕರಿಗೆ ಆಸರೆಯಾಗಿ ಕೊಟ್ಟಿದ್ದ ಅವಡುಗಡ್ಡಿಯು ಜಾರಿ ಮಂಕರಿ ಕವುಚಿಕೊಳ್ಳುತ್ತದೆ. ಮಂಕರಿಯ ಒಳಗೆ ಮುಂಗುಸಿಯು ಸೇರಿಕೊಂಡಿರುತ್ತದೆ. ಬೇಟೆಗಾರ ಮತ್ತೊಂದು ಬಲವಾದ ಕವಡುಗಡ್ಡಿಯಿಂದ ಮುಂಗುಸಿಯ ಕುತ್ತಿಗೆಯನ್ನು ಬಲವಾಗಿ ಅದುಮಿ ಹಿಡಿದು ಮಂಕರಿಯನ್ನು ಸರಿಸಿ

ಮುಂಗುಸಿಯನ್ನು ಹಿಡಿದುಕೊಂಡು ಚರ್ಮ ಸುಲಿದು ಮಾಂಸವಾಗಿಸಿ ಮನೆ ಮಂದಿಯೆಲ್ಲಾ ಸಾರು ಮಾಡಿ ಉಟಕ್ಕೆ ಬಳಸುತ್ತಾರೆ.

**ಕಾಡುಹಂದಿ ಬೇಟೆ :**

ಇರುಳಿಗರು ಸೋಪಡಿ (ಗುಂಪು) ಬೇಟೆಗೆ ಹೋದಾಗ ಸಾಮಾನ್ಯವಾಗಿ ಕಾಡುಹಂದಿಯ ಬೇಟೆಯಾಡುತ್ತಾರೆ. ತಮ್ಮ ಮನೆಗಳಲ್ಲಿರುವ ಕೋವಿ, ಕತ್ತಿ, ಭರ್ಜಿ, ಕೊಡಲಿ, ಗಂಡುಕೊಡಲಿ, ಚಿಪ್ಪುಗೊಡಲಿ, ಕುಡುಗೋಲು, ಈಟಿ, ಕೊಂಗಮಚ್ಚು ಇತ್ಯಾದಿ ಆಯುಧಗಳನ್ನು ತೆಗೆದುಕೊಳಡು, ತಾವು ಸಾಕಿರುವ ನಾಯಿಗಳೊಡನೆ ಕಾಡಿಗೆ ಗುಂಪು-ಗುಂಪಾಗಿ ಹೋಗುತ್ತಾರೆ. ಹಂದಿಗಳನ್ನು ಹೊರಗೆ ಎಬ್ಬಿಸಲು ಪೊದರು, ಮೆಳೆಗಳ ಸಂದಿಗಳಿಗೆ ಕಲ್ಲೆಸೆದು, ಕೇಕೆ ಹಾಕುತ್ತಾ, ಕುಣಿಯುತ್ತಾ, ಅಬ್ಬರಿಸುತ್ತಾ ಹೋಗುತ್ತಾರೆ. ಸಂದಿಗೊಂದಿಗಳಲ್ಲಿರುವ ಹಂದಿ ಮತ್ತಿತರೆ ಪ್ರಾಣಿಗಳು ಹೊರಬರುತ್ತವೆ. ಬಂದ ಪ್ರಾಣಿಗಳಿಗೆ ಮುಖ್ಯವಾಗಿ ಹಂದಿಗಳಿಗೆ ಕೋವಿಯಿಂದ ಅಥವಾ ತಮ್ಮಲ್ಲಿರುವ ಆಯುಧಗಳಿಂದ ಹೊಡೆದು ಸಾಯಿಸಿ. ಕಾಡಿನಲ್ಲಿಯೇ ಸುಟ್ಟು ಪಾಲು ಹಾಕಿ ಹಂಚಿಕೊಂಡು ಹಿಂದಿರುಗುತ್ತಾರೆ. ಕೆಲವೊಮ್ಮೆ ಎರಡು ಮೂರು ದಿನಗಳು ಕಾಡಿನಲ್ಲಿಯೇ ಇದ್ದು ಬೇಟೆಯಾಗುವ ತನಕ ಹಿಂದಿರುಗುತ್ತಿರಲಿಲ್ಲ ಎನ್ನುತ್ತಾರೆ.

ಅರಣ್ಯ ಪ್ರದೇಶಗಳಲ್ಲಿ ಬಂಡವಾಳಶಾಹಿಗಳು ಇರುಳಿಗರನ್ನು ಕೇವಲ ಜೇನು ಇಳಿಸಲು ಮಾತ್ರ ಉಪಯೋಗಿಸಿಕೊಳ್ಳುತ್ತಿದ್ದಾರೆ. ಹೀಗೆ ಇರುಳಿಗರು ಮುಖ್ಯವಾಗಿ ಆಹಾರಕ್ಕಾಗಿ ಹಲವಾರು ಬೇಟೆಗಳನ್ನು ಮಾಡುತ್ತಿದ್ದರು. ಹಂದಿಬೇಟೆ, ಮುಳ್ಳುಹಂದಿ ಬೇಟೆ, ಚಿಪ್ಪಿನ ಹಂದಿ ಬೇಟೆ, ಕಾಡುಬೆಕ್ಕು, ಪುನುಗು ಬೇಕ್ಕು ಹೀಗೆ ತಮ್ಮ ಆಹಾರಕ್ಕೆ ಬೇಕಾದುದನ್ನು ಮಾತ್ರ ಬೇಟೆಯಾಡಿ ಜೀವಿಸುತ್ತಿದ್ದರು. ಮುಳ್ಳುಹಂದಿ ಬೇಟೆಯ ವಿವರಗಳನ್ನು ತಿಳಿಸುತ್ತಾ : ಮುಳ್ಳು ಹಂದಿಗಳ ಕಿವಿ ಮಂದ (ಕೇಳಿಸುವುದಿಲ್ಲ ಅಥವಾ ಕಿವುಡು) ಶಬ್ದ ಅವಕ್ಕೆ ಸರಿಯಾಗಿ ಕೇಳುವುದಿಲ್ಲ; ಆದರೆ ವಾಸನೆ ಹಿಡಿದು ತಪ್ಪಿಸಿಕೊಂಡು ಬಿಡುತ್ತವೆ. ನಾವು ಓಡಾಡಿದ ದಾರಿಯಲ್ಲೂ ಅವು ಸುಳಿಯುವುದಿಲ್ಲ. ನಾವು ನಿಂತಿದ್ದರೆ ಕಾಲು ಸಂದಿಯಲ್ಲಿ ನುಗ್ಗಿ ತಮ್ಮ ಮೈಮೇಲಿನ ಮೊನಚಾದ ಮುಳ್ಳುಗಳನ್ನು ಚಾಚಿ ತೊಂದರೆ ಕೊಟ್ಟು ಓಡಿ ಬಿಡುತ್ತವೆ ಎನ್ನುತ್ತಾರೆ. ಹೀಗೆ ವಿವಿಧ ಪ್ರಾಣಿಗಳ ಬೇಟೆಯ ಬಗೆಗಳನ್ನು ಹೇಳುತ್ತಾರೆ ಮತ್ತು ಸ್ವತಃ ಮಾಡಿ ತೋರಿಸುತ್ತಾರೆ ಇರುಳಿಗರು. ಆದರೆ ಇಂದು ಕಾಡು ಮೊದಲಿನ ವರ್ಚಸ್ಸನ್ನು ಉಳಿಸಿಕೊಂಡಿಲ್ಲವೆಂದು ಹೇಳಬಹುದು.

**ಜೇನು ಬೇಟೆ :**

ಕಿರುಜೇನು, ನಾಯಿಜೇನು, ತುಡುವೆ ಜೇನು ತೆಗೆಯುವುದು ಅಂತಹ ಕಷ್ಟದ ಕೆಲಸವೇನಲ್ಲ ; ಇರುಳಿಗರಲ್ಲಿ ಹೆಜ್ಜೇನು ತೆಗೆಯುವುದು ಬಹು ಮುಖ್ಯಾವಾದ ಬೇಟೆಗಳಲ್ಲೊಂದು. ಎಲ್.ಕೆ.ಅನಂತಕೃಷ್ಣ ಅಯ್ಯರ್ ಹೀಗೆ ಹೇಳುತ್ತಾರೆ. The Iruligas living on hill slopes and in the forest of the plain engage themselves chiefly in gathering honey and collecting forest produce. Honey

gathering is their speciality.೧೨ ಹೆಜ್ಜೇನು ಬೇಟೆಯಲ್ಲಿ ಮರಗಳು ಮತ್ತು ಹೆಬ್ಬಂಡೆಯ ಕಿಬ್ಬಿಯಲ್ಲಿ ಎರಡೂ ರೀತಿಗಳಲ್ಲಿ ಬೇಟೆಯಾಡುತ್ತಾರೆ.

**ಹೆಬ್ಬಂಡೆಗಳಲ್ಲಿ ಹೆಜ್ಜೇನು ಬೇಟೆ :**

ಏರಲು ಕಷ್ಟಸಾಧ್ಯವಾದ ಹೆಬ್ಬಂಡೆಗಳ ಕೊರಳಲ್ಲಿರುವ ಜೇನು ಕೀಳುವುದರಲ್ಲಿ ಇರುಳಿಗರು ಸಿದ್ಧಹಸ್ತರು. ಒಂದು ಅಡಿ ಉದ್ದುದ್ದ, ಎರಡು ಅಂಗುಲ ಅಗಲದ ಬಿದಿರು ದೆಬ್ಬೆಗಳನ್ನು ತೆಗೆದುಕೊಂಡು, ಬೇಯಿಸಿ ಹದ ಮಾಡಿದ ಕಾರಚ್ಚು ಪಟ್ಟೆಯಿಂದ ಬಿಗಿದು ಏಣಿ ಮಾಡುತ್ತಾರೆ. ಇದನ್ನು ಮಾಲು ಕಟ್ಟುವುದು (ಮಾಲೆ ಕಟ್ಟುವುದು) ಎನ್ನುತ್ತಾರೆ. ಅಂದರೆ ಒಂದು ದೆಬ್ಬೆಯಿಂದ ಮತ್ತೊಂದು ದೆಬ್ಬೆಗೆ ಒಂದೂವರೆ ಅಡಿಗಳಷ್ಟು ಅಂತರ ಕೊಟ್ಟು ಮಾಲೆ ಕಟ್ಟುವಂತೆ ಕಟ್ಟುತ್ತಾರೆ. ಹಾಗೆ ಕಟ್ಟಿದ ಮಾಲನ್ನು ಬೆಟ್ಟದ ನೆತ್ತಿಯಲ್ಲಿರುವ ದಪ್ಪ ಬಂಡೆ ಅಥವಾ ಮರವಿದ್ದರೆ ಮರಕ್ಕೆ ಕಟ್ಟಿರುತ್ತಾರೆ. ಮರ, ಬಂಡೆಗಳ ಆಸರೆ ಸಿಗದಿದ್ದಾಗ ಅದನ್ನು ಬಲವಾದ ನಾಲ್ಕು ಜನ ಹಿಡಿದು ನಿಲ್ಲುತ್ತಾರೆ. ಏಣಿಯ ಮೇಲಿನಿಂದ ತನ್ನ ಬಾಯಲ್ಲಿ ಸೂಟೆ ಹಿಡಿದುಕೊಂಡು ನಡುವಿಗೆ ಒಂದುಹಗ್ಗವನ್ನು ಕಟ್ಟಿಕೊಂಡು ಜೇನಿರುವ ಜಾಗಕ್ಕೆ ಇಳಿದು ಬರುತ್ತಾನೆ. ತಾನು ಬಾಯಲ್ಲಿ ಕಚ್ಚಿ ತಂದಿರುವ ಸೂಟೆಗೆ ಬೆಂಕಿ ಹಚ್ಚಿಕೊಂಡು ಜೇನು ಹುಳುಗಳನ್ನು ಓಡಿಸುತ್ತಾನೆ, ಒಂದು ಸೂಟೆಗೆ ಹುಳುಗಳು ಹೋಗದೆ ಅದು ಮುಗಿದುಹೋದರೆ ತನ್ನ ಸೊಂಟಕ್ಕೆ ಕಟ್ಟಿಕೊಂಡಿರುವ ಹಗ್ಗದಿಂದ ಮೇಲಿರುವವರ ಕಡೆಯಿಂದ ಮತ್ತೊಂದು ಸೂಟೆಯನ್ನು ತರಿಸಿಕೊಳ್ಳುತ್ತಾನೆ. ಹುಳುಗಳೆಲ್ಲವನ್ನೂ ಓಡಿಸಿದ ನಂತರ ಹಗ್ಗದಲ್ಲಿ ಕಟ್ಟಿ ಪಾತ್ರೆಯೊಂದನ್ನು ಮೇಲಿನಿಂದ ಬಿಡುತ್ತಾರೆ. ಮಾಲು ಏಣಿಯ ಮೇಲೆ ಇಳಿದವನು ಸೊಂಟದಲ್ಲಿರುವ ಕುಡುಗೋಲಿನಿಂದ ಕೊಯ್ದು ಆ ಪಾತ್ರೆಗೆ ಜೇನು ಕೊಡಗಳನ್ನು ತುಂಬಿ, ಎಳೆಯಿರಿ ಎಂದು ಕೂಗುತ್ತಾನೆ. ಆಗ ಆ ಪಾತ್ರೆಯನ್ನು ಮೇಲಿದ್ದವರು ಎಳೆದುಕೊಳ್ಳುತ್ತಾರೆ. ಎಲ್ಲ ಜೇನನ್ನೂ ಬಿಡಿಸಿ ಪಾತ್ರೆಗೆ ತುಂಬಿ ಕಳುಹಿಸಿದ ತುವಾಯ ಅವನು ಅದೇ ಬಿದಿರು ಮಾಲು ಏಣಿಯ ಮೂಲಕ ಮೇಲೆ ಹತ್ತಿ ಬರುತ್ತಾನೆ. ಒಂದೊಂದು ಜೇನಿನಲ್ಲಿ ಹದಿನೈದು ಲೀಟರ್‌ಗಳ ತನಕವು ಜೇನು ಸಂಗ್ರಹವಾಗಿರುತ್ತದೆ. ಜೇನು ಬಂಡೆಯೊಂದರಲ್ಲಿ ಕೆಳಮಟ್ಟದಲ್ಲಿದ್ದರೆ, ಬೆಟ್ಟದ ಬುಡದಲ್ಲಿಯೇ ತರಗು-ಪುಳ್ಳೆಗಳನ್ನು ಒಟ್ಟುಗೂಡಿಸಿ ಜೇನಿರುವ ನೇರಕ್ಕೆ ಸರಿಯಾಗಿ ಬೆಂಕಿ ಹಚ್ಚುತ್ತಾರೆ. ಬೆಂಕಿಯ ಮೇಲೆ ಕಾಡುಮೆಣಸಿಗೆ ಸೊಪ್ಪು, ಇಸ್ಥರೆಸೊಪ್ಪು, ಬೇವಿನ ಸೊಪ್ಪು ಇತ್ಯಾದಿಗಳನ್ನು ಹಾಕಿ ದಟ್ಟವಾದ ಹೊಗೆ ಏಳುವಂತೆ ಮಾಡುತ್ತಾರೆ. ಈ ಹೊಗೆಯನ್ನು ತಾಳಲಾರದೆ, ಜೇನು ನೊಣಗಳು ಜೇನುಗೂಡನ್ನು ಬಿಟ್ಟು ಹಾರಿ ಹೋಗುತ್ತವೆ. ಆಗ ಮಾಲಿನ ಮೂಲಕ ಒಬ್ಬ ಇಳಿದು ಹುಟ್ಟು ಸಹಿತವಾಗಿ ಜೇನನ್ನು ಕೆಳಗಿಳಿಸುತ್ತಾನೆ. ಹುಳುಗಳು ಕಚ್ಚಿದರೆ, ಹಾಗೆ ಕಚ್ಚಿದ ಸ್ಥಳಕ್ಕೆ ನಿಂಬೆಹಣ್ಣಿನ ರಸವನ್ನು ಸವರಿಕೊಳ್ಳುತ್ತಾರೆ. ಅಥವಾ ಇನ್ನಾವುದೋ ಗಿಡಮೂಲಿಕೆಯನ್ನು ಹಾಕಿಕೊಂಡು ವಾಸಿ ಮಾಡಿಕೊಳ್ಳುತ್ತಾರೆ. ಮನುಷ್ಯರು ಮುಟ್ಟಿದರೆ ಮೈಲಿಗೆಯಾಗುತ್ತದೆ ಎಂದು ಭಾವಿಸಿ ಜೇನು ಹುಳುಗಳು ಸ್ನಾನ ಮಾಡಲು ನೀರು ಹುಡುಕಿಕೊಂಡು ಹೋಗುತ್ತವೆಂದು ಹೇಳುತ್ತಾರೆ. ತಮ್ಮ ಗೂಡಿನಲ್ಲಿರುವ ತುಪ್ಪಕ್ಕೆ ಬದಲಾಗಿ ನಿರು ಕುಡಿಯಲು ಹಾಗೆ ಮಾಡಬಹುದೇನೋ ಎನಿಸುತ್ತದೆ. ಹೀಗೆ ಬೇಟೆಯಾಡಿದ ಜೇನನ್ನು ಇರುಳಿಗರು ಮಾರಾಟ ಮಾಡಿ ಬಂದ ಹಣದಿಂದ ದವಸ ಧಾನ್ಯಗಳನ್ನು ತಂದು ಜೀವನ

ಸಾಗಿಸುತ್ತಿದ್ದರು. ಆದರೆ ಇಂದು ಅರಣ್ಯ ಇಲಾಖೆಯ ನೀತಿ-ನಿಯಮಾವಳಿಗಳಿಂದಾಗಿ ಜೇನು ಬೇಟೆಗೆ ಸರ್ಕಾರ ಇವರಿಗೆ ಅವಕಾಶ ಕೊಡುತ್ತಿಲ್ಲ. ಬದಲಾಗಿ ಕಂಟ್ರಾಕ್ಟರ್‌ಗಳ ಬಳಿಯಲ್ಲಿ ಜೇನು ಇಳಿಸುವ ಕಾರ್ಯದಲ್ಲಿ ನಿಷ್ಣಾತರಾದ ಇರುಳಿಗರು ಅವರು ಕೊಡುವ ದಿನಗೂಲಿಗೆ ತಮ್ಮ ಪ್ರಾಣದ ಹಂಗು ತೊರೆದು ಹೆಬ್ಬಂಡೆಗಳನ್ನು ಏರಿ ಆ ಜೇನನ್ನು ಇಳಿಸಿಕೊಡುತ್ತಿದ್ದಾರೆ. ಹಾಗೆ ಇಳಿಸಿಕೊಂಡ ಜೇನನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ಆ ಕಂಟ್ರಾಕ್ಟರ್‌ಗಳು ಲಾಭಗಳಿಸುತ್ತಿದ್ದಾರೆ. ಸರ್ಕಾರದ ಈ ನೀತಿಯನ್ನು ಇರುಳಿಗರು ಅಸಹಾಯಕರಾಗಿ ಟೀಕಿಸುತ್ತಿದ್ದಾರೆ ಮತ್ತು ಜೇನುಬೇಟೆಗೆ ಅವಕಾಶವನ್ನು ಸರ್ಕಾರ ಕೊಡುತ್ತಿಲ್ಲವೆಂದು ಕೊರಗಿನಿಂದಿದ್ದಾರೆ.

**ಹೆಮ್ಮರಗಳಲ್ಲಿನ ಹೆಜ್ಜೇನು ಬೇಟೆ :**

ನೀಳ ಹಾಗೂ ದಪ್ಪನಾದ ಹೆಬ್ಬಿದಿರನ್ನು ಆಯ್ದು, ಅದರ ಗಿಣ್ಣು –ಗಿಣ್ಣುಗಳಲ್ಲಿರುವ ಪಕ್ಕದ ಟಿಸಿಲು ಮತ್ತು ಕಂಕಿಗಳನ್ನು ಗೇಣುದ್ದವಿರುವಂತೆ ಉಳಿಸಿಕೊಂಡು ಸವರಿ ಹಾಕುತ್ತಾರೆ. ಮರಗಳಿಗೆ ಆಸರೆಯಾಗಿ ನಿಲ್ಲಿಸಿ ಕಾರಚ್ಚು ಪಟ್ಟೆಯಿಂದ ಬಿಗಿದು ಕಟ್ಟುತ್ತಾರೆ. ನಂತರ ಆ ಬಿದಿರು ರೆಂಬೆಗಳ ಮೂಲಕ ಹತ್ತಿ ಹೋಗಿ ಜೇನಿರುವ ರೆಂಬೆಯನ್ನು ತಲುಪುತ್ತಾರೆ. ರೆಂಬೆ ಇನ್ನೂ ದಪ್ಪವಾಗಿದ್ದು ಜೇನಿರುವ ಜಾಗಕ್ಕೆ ತಲುಪಲು ಸಾಧ್ಯವಾಗದಿದ್ದರೆ, ಅದರ ಮೇಲೂ ಒಂದು ಬಿದಿರು ಬೊಂಬನ್ನು ಬಿಗಿದುಕೊಂಡು ಜೇನಿರುವ ಜಾಗವನ್ನು ತಲುಪುತ್ತಾರೆ. ಹತ್ತುವಾಗಲೇ ಸೊಂಟಕ್ಕೆ ಹಗ್ಗವನ್ನು ಕಟ್ಟಿಕೊಂಡಿರುತ್ತಾರೆ. ಜೇನಿನ ಬಳಿಗೆ ಹೋದ ಮೇಲೆ ಹಗ್ಗವನ್ನು ಕೆಳಗೆ ಬಿಡುತ್ತಾರೆ. ಕೆಳಗಿರುವವನು ಆ ಹಗ್ಗಕ್ಕೆ ಸೂಟೆಗಳನ್ನು ಕಟ್ಟಿ ಎಳೆದುಕೊಳ್ಳುವಂತೆ ತಿಳಿಸುತ್ತಾರೆ. ಹಾಗೆ ಎಳೆದುಕೊಂಡ ಸೂಟೆಗೆ ಬೆಂಕಿ ಹಚ್ಚಿ ಜೇನು ಹುಳುಗಳನ್ನು ಓಡಿಸುತ್ತಾರೆ. ಆಗ ಸಾಕಷ್ಟು ಜೇನು ಹುಳುಗಳು ಸಾಯುತ್ತವೆ. ಆಕಸ್ಮಿಕವಾಗಿ ಬಂದೆರಗಿದ ಸೂಟೆ ಬೆಂಕಿಯು ಜೇನುಗೂಡಿಗೆ ತಾಕಿದ ಕೂಡಲೇ ಹುಳುಗಳು ಆಕ್ರಮಣ ಮಾಡುವುದನ್ನು ಮರೆತು, ಅಪಾಯದಿಂದ ಪಾರಾಗಲು ಹಾರಿ ಹೋಗುತ್ತವೆ. ನಂತರ ಅದೇ ಹಗ್ಗಕ್ಕೆ ಪಾತ್ರೆಗಳನ್ನು ಕೆಳಗಿನಿಂದ ತರಿಸಿಕೊಂಡು ಕುಡುಗೋಲಿನಿಂದ ಕೊಯ್ದು ಪಾತ್ರೆಗೆ ತುಂಬಿ ಜೇನನ್ನು ಕೆಳಗೆ ಬಿಡುತ್ತಾರೆ. ಬಹಳ ಹಿಂದೆ ಆಹಾರಕ್ಕಾಗಿಯೇ ಜೇನು ಹುಡುಕುತ್ತಿದ್ದ ಇರುಳಿಗರು ಈಗೀಗ ತಾವು ಬಳಸದೆಯೇ ಪೇಟೆಯಲ್ಲಿ ಮಾರಾಟ ಮಾಡುತ್ತಿದ್ದಾರೆ. ತಮ್ಮ ಕುಲದ ಆಚಾರ-ವಿಚಾರ-ಸಂಪ್ರದಾಯಗಳಲ್ಲಿ ಜೇನನ್ನು ಕೊಟ್ಟು ಅತಿಥಿಗಳನ್ನು ಸತ್ಕರಿಸುವ ಪರಿಹಾರ ಈಗಲೂ ಕೆಲವಡೆ ಉಳಿದುಬಂದಿದೆ.

**ಬಿದಿರು :**

ಇರುಳಿಗರ ಉತ್ಪಾದನಾ ಚಟುವಟಿಕೆಗಳಲ್ಲಿ ಬಿದಿರು ಸಹ ಒಂದು. ಈ ಸಮುದಾಯದವರು ಕಾಡಿನ ಬಿದಿರನ್ನು ಕಡಿದು ಮಂಕರಿ ಹೆಣದು ಮಾರುತ್ತಿದ್ದರು. ಅದನ್ನು ಕಟ್ಟು ನಿಟ್ಟಾಗಿ ತಡೆಯುತ್ತಿದ್ದೇವೆ ಎಂದು ಅರಣ್ಯ ಇಲಾಖೆಯವರು ಪ್ರಸ್ತಾಪಿಸುತ್ತಾರೆ. ಮಂಕರಿ ಹೆಣೆದು ಅವರು ಜೀವನ ಮಾಡಬೇಕಾದರೆ ಒಂದು ಸಹಕಾರ ಸಂಘವನ್ನು ಸ್ಥಾಪಿಸಿಕೊಂಡರೆ ಲೆವಿ ಮೂಲಕ ಬಿದಿರು ಒದಗಿಸುತ್ತೇನೆಂದು ಹೇಳುವ ಮಾತುಗಳನ್ನು ನಂಬುವಂತಿಲ್ಲ. ಯಾಕೆಂದರೆ ಪ್ರತಿ ತಿಂಗಳಲ್ಲೂ ಕಡಿಮೆ ಮೊತ್ತದ ಬಿದಿರನ್ನು ಒದಗಿಸಬಹುದೇ ವಿನಹ ಅವರು ಬದುಕು ನೆಡೆಸುವಷ್ಟು ಬಿದಿರನ್ನು

ಒದಗಿಸುವುದು ಅಸಾಧ್ಯದ ಸಂಗತಿ. ಆದರೂ ಸಹ ಈ ಭಾಗದ ಇರುಳಿಗರು, ಕದ್ದು ಬಿದಿರನ್ನು ಸಂಗ್ರಹಣೆ ಮಾಡಿ ಮೊರ, ಕೊಂಗ ಇತ್ಯಾದಿ ವಸ್ತುಗಳನ್ನು ತಯಾರಿಸುವ ಕಾಯಕದಲ್ಲಿ ನಿರತರಾಗಿದ್ದಾರೆ.

**ಬುಟ್ಟಿ ನೇಯುವಿಕೆ :**

ಹಿಂದೆ ಕಾಡುಗಳಲ್ಲಿ ಸಿಗುತ್ತಿದ್ದ ಆಹಾರ ಪದಾರ್ಥ ಹಾಗೂ ಇತರ ವಸ್ತುಗಳ ಸಂಗ್ರಹಣೆ ಮತ್ತು ಬೇಟೆ ಇರುಳಿಗರ ಮುಖ್ಯವಾಗಿದ್ದ ವೃತ್ತಿಗಳಾಗಿದ್ದವು. ದಟ್ಟವಾಗಿದ್ದ ಅರಣ್ಯಗಳ ನಿವಾಸಿಗಳಾಗಿದ್ದ ಇವರು ಕಾಡಿನ ಉದ್ದಗಲಕ್ಕೂ ಅಲೆದಾಡಿ ಅಲ್ಲಿ ಸಿಗುತ್ತಿದಂತಹ ಆಹಾರ ಪದಾರ್ಥ, ಸೌದೆ, ಇತ್ಯಾದಿಗಳನ್ನು ಸಂಗ್ರಹಿಸಿಕೊಂಡು ಬರುತ್ತಿದ್ದರು. ಸರ್ಕಾರವು ಅರಣ್ಯ ರಕ್ಷಣೆ ಮತ್ತು ಕಾಡು ಪ್ರಾಣಿ ಸಂರಕ್ಷಣೆಗಾಗಿ ಜಾರಿಗೆ ತಂದಿರುವ ಕಾನೂನುಗಳನ್ನು ಇವರನ್ನು ಎಚ್ಚರಿಕೆಯಿಂದ ಅರಣ್ಯಾಧಿಕಾರಿಗಳ ಕಣ್ಣು ತಪ್ಪಿಸಿ ಕಾಡುಗಳಲ್ಲಿ ದೊರಕುವ ನಾರು-ಬೇರುಗಳನ್ನು ಸಂಗ್ರಹಿಸುವ ಕೆಲಸವನ್ನು ಮಾಡುತ್ತಿದ್ದಾರೆ.

ಇರುಳಿಗರ ಅತ್ಯಂತ ಮುಖ್ಯವಾದ ಕಸುಬುಗಳಲ್ಲಿ ಬಿದಿರಿನ ಕೆಲಸವು ಒಂದು. ಇವರು ಅರಣ್ಯ ಪ್ರದೇಶಗಳಲ್ಲಿ ಸಿಗುವ ಬೆತ್ತವನ್ನು ಬಳಸಿ ಬುಟ್ಟಿ, ಕುಕ್ಕೆ, ತೊಟ್ಟಿಲು, ಮೀನು ಹಿಡಿಯುವ ಮಂಕರಿ ಇತ್ಯಾದಿಗಳನ್ನು ತಯಾರಿಸುವಲ್ಲಿ ನುರಿತರ ಬೆತ್ತ-ಬಿದಿರಿನಿಂದ ದಿನಬಳಕೆಗೆ ಬೇಕಾಗುವ ಕುಕ್ಕೆ, ಮೊರ, ವಂದ್ರಿ, ಗೇರ್ಸಿ, ತಡುಕು, ಕೋಳಿಪಂಜರ, ಕೂಗ, ಮೀನು ಹಿಡಿಯುವ ತಟ್ಟೆ, ಮತ್ತು ದವಸಧಾನ್ಯಗಳನ್ನು ಜೋಪಾನವಾಗಿ ಸಂಗ್ರಹಿಸಿಡುವುದಕ್ಕೆ ಅಗತ್ಯವಾದ ದೊಡ್ಡ-ದೊಡ್ಡ ಕೊಮ್ಮೆಗಳು ಇತ್ಯಾದಿಗಳನ್ನು ತಯಾರಿಸುವಲ್ಲಿ ಸಿದ್ಧ ಹಸ್ತರು. ಅರಣ್ಯಗಳಿಗೆ ಹೋಗಿ ಅಧಿಕಾರಿಗಳ ಗಮನಕ್ಕೆ ಬರದ ರೀತಿಯಲ್ಲಿ ಬಹುಜಾಗರೂಕತೆಯಿಂದ ಬಿದಿರನ್ನು ಆರಿಸಿ ತಂದುಕೊಂಡು, ವರ್ಷ ಪೂರ್ತಿ ಬಿದಿರಿನ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಮೊದಲು ಇವರು ಕತ್ತಿಯಿಂದ ಬಿದಿರಿನ ಭಾಗವನ್ನು ಕೆರೆದು ಹಾಕಿ ತಮಗೆ ಬೇಕಾದಷ್ಟು ಉದ್ದ, ಅಗಲ, ಹಾಗೂ ದಪ್ಪದ ಪಟ್ಟಿಗಳನ್ನಾಗಿ ಕತ್ತರಿಸಿಟ್ಟಿಕೊಂಡು ಬುಟ್ಟಿ, ತಟ್ಟೆ ಇತ್ಯಾದಿಗಳನ್ನು ಹೆಣೆಯುತ್ತಾರೆ. ಕಬ್ಬಿಣದ ಕತ್ತಿಯಿಂದ ಬೇಕಾದ ಅಳತೆಗೆ ಬಿದಿರನ್ನು ಕತ್ತರಿಸಿ ಅಚ್ಚೆಯನ್ನಾಗಿ ಪರಿವರ್ತಿಸಿ ಸ್ತ್ರೀಯರೂ ಹಾಗೂ ಪುರುಷರೂ ಬಿದಿರಿನ ವಸ್ತುಗಳನ್ನು ಸಿದ್ಧಪಡಿಸುತ್ತಾರೆ. ಇಲ್ಲಿನ ವಕ್ತೃಗಳು ಹೇಳುವ ಪ್ರಕಾರ ಅರ್ಧಗಂಟೆಯಲ್ಲಿ ಒಂದು ಮೊರವನ್ನು ನಲವತತು ನಿಮಿಷದಲ್ಲಿ ದೊಡ್ಡಕುಕ್ಕೆಯನ್ನು, ಚಿಕ್ಕಕುಕ್ಕೆಯನ್ನು ಇಪ್ಪತ್ತು ನಿಮಿಷಗಳಲ್ಲಿ ತಯಾರಿಸಬಲ್ಲರು. ಆದರೆ ಒಂದು ಗೇರ್ಸಿ ಮಾಡಲು ಸುಮಾರು ಎರಡು ಗಂಟೆಗಳ ಕಾಲ ಬೇಕಾಗುತ್ತದೆ. ಬಿದಿರಿನ ಈ ಸಿದ್ಧವಸ್ತುಗಳ ಬೆಲೆ ೫೦ರೂಗಳಿಂದ ಹಿಡಿದು ೧೦೦-೧೨೦ರೂಗಳವರೆಗೆ ಇರುತ್ತದೆ. ಮತ್ತು ಇವುಗಳನ್ನು ಅಕ್ಕ-ಪಕ್ಕದ ಹಳ್ಳಿಗಳಲ್ಲಿರುವ ರೈತರಿಗೆ ಹಾಗೂ ಇತರ ಬಳಕೆದಾರರಿಗೆ ಮಾರುತ್ತಾರೆ. ಕೆಲವು ಸಲ ಇವರು ಈ ವಸ್ತುಗಳನ್ನು ದಳ್ಳಾಳ್ಳಿಗಳಿಗೆ ಮಾರುವುದುಂಟು. ಇವರು ತಮ್ಮ

ಉಪಯೋಗಕ್ಕಾಗಿ ಒಣಗಿದ ಕಡ್ಡಿಗಳನ್ನು ಒಟ್ಟಾಗಿ ಕಟ್ಟಿ ಪೊರಕೆಗಳನ್ನು ಮಾಡಿಕೊಳ್ಳುತ್ತಾರೆ.

ಹೀಗೆ ಇರುಳಿಗರು ಬಿದಿರಿನಿಂದ ರೇಷ್ಮೆ ಸೊಪ್ಪಿನ ಗೂಡುಗಳು, ತಟ್ಟೆಗಳು, ಚಂದ್ರಿಕೆಗಳು, ಮೊರಗಳನ್ನು ಹೆಣೆಯುತ್ತಿದ್ದರು. ಆದರೆ ಇಂದು ಅರಣ್ಯದ ಕಾನೂನುಗಳು ಅದಕ್ಕೆ ತಡೆಯೊಡ್ಡಿ ಈ ಜನರ ಜೀವನದ ಮೇಲೆ ಬಹಳ ಕೆಟ್ಟ ಪರಿಣಾಮವನ್ನುಂಟು ಮಾಡಿದೆ.

**ಮುಸುಡಿ ಕುಕ್ಕೆ :**

ಹೊಲ ಉಳುಮೆ ಮಾಡುವಾಗ ಅಕ್ಕ ಪಕ್ಕ ಕಾಣುವ ಮೇವಿಗೆ ಬಾಯಿ ಹಾಕದಿರಲಿ ಎಂದು ಹಸುಗಳ ಬಾಯಿಗೆ ಬಿದಿರಿನ ಸಣ್ಣ ಸಣ್ಣ ಅಚ್ಚೆಗಳಿಂದ ಮಾಡಿದ ಕುಕ್ಕೆ ಹಾಕುತ್ತಾರೆ. ಅದನ್ನು ಮುಸುಡಿಕುಕ್ಕೆ ಎನ್ನುತ್ತಾರೆ. ಕೆಲವೊಮ್ಮೆ ಜಾಗಡಿ ಎಂಬ ಒಂದು ಜಾತಿಯ ಹಂಬಿನ "ಅಣಿ ಎತ್ತಿ ಬಿಡುತ್ತಾರೆ". ಅಣಿ ಹಾಕಿ ಅಥವಾ ಪ್ರಾರಂಭಿಸಿ ಬಿಟ್ಟಿರುತ್ತಾರೆ. ಎರಡು ಮೂರು ದಿನ ಬಿಟ್ಟು ನೋಡಿದರೆ ಅದರ ಕುಡಿ ಬೆಳೆದಿರುತ್ತದೆ. ಹಾಗೆ ಕುಡಿ ಬೆಳೆದಿದ್ದರೆ ಮುಸುಡಿಕುಕ್ಕೆಯನ್ನು ಹೆಣೆಯಬಹುದು. ಅದು ಕುರಿತು ಹೋಗಿದ್ದರೆ (ಒಣಗಿ ಹೋಗಿದ್ದರೆ) ಆ ಮುಸುಡಿ ಕುಕ್ಕೆ ಹೆಣೆಯುವುದು ಆತನ ವಂಶಕ್ಕೆ ಆಗಿ ಬಂದಿಲ್ಲ ಎಂದು ನಂಬುತ್ತಾರೆ.

**ಸೌದೆಕಡಿದು ತರುವುದು :**

ಜೀವನೋಪಾಯಕ್ಕಾಗಿ ಇರುಳಿಗರು ಸೌದೆ ಕಡಿದು ತಂದು ಮಾರಾಟ ಮಾಡುತ್ತಾರೆ. ಆದರೆ ಅರಣ್ಯ ಇಲಾಖೆಯ ಗಾರ್ಡುಗಳು, ರೇಂಜರುಗಳು ನೆಡೆಸುವ ದೌರ್ಜನ್ಯಗಳನ್ನು ಹೀಗೆ ಹೇಳುತ್ತಾರೆ. "ಲಕ್ಷ್ಮೀಪುರದ ಬಳಿಯಿರುವ ಮಟಕಯ್ಯನದೊಡ್ಡಿ ದಂಡು ಹೆಣ್ಣು ಗಂಡು ಸೇರಿಕೊಂಡು ಇಪ್ಪತ್ತೈದು ಒಮ್ಮೆ ಬೇಟೆಗೆ ಹೋಗಿ ಸೌದೆ ಕಡಿದು ತಲೆ ಮೇಲೆ ಇಟ್ಟುಕೊಳ್ಳುವ ಮುನ್ನ ಅರಣ್ಯ ಇಲಾಖೆಯ ಅಧಿಕಾರಿಗಳು ದಾಳಿ ಮಾಡಿ ಮೈಮೇಲಿದ್ದ ಬಟ್ಟೆ ಬರೆಗಳನ್ನು ಕಿತ್ತಿ ಹಾಕಿಸಿ ಬೆಂಕಿ ಹಾಕಿ ಸಂತೋಷ ಪಟ್ಟರಂತೆ. ಕೆಲವರು ಬೆತ್ತಲೆ ಅರೆಬೆತ್ತಲೆಯಾಗಿ ಊರಿಗೆ ವಿಷಯವನ್ನು ಬಂದು ಹೇಳಿಕೊಂಡರು".

## ಇರುಳಿಗರಲ್ಲಿ ಔಷಧಿಪದ್ಧತಿ ಮತ್ತು ಗಿಡಮೂಲಿಕೆಗಳ ಸಂಗ್ರಹ :

ಇಂಗ್ಲೀಷ್ ವೈದ್ಯ ಪದ್ಧತಿ ಬುಡಕಟ್ಟು ಸಮುದಾಯವನ್ನ ಪ್ರವೇಶಿಸಿದೆ. ಅಲ್ಲದೆ ಅನೇಕ ಸ್ವಯಂಸೇವಾ ಸಂಸ್ಥೆಗಳು ಆರೋಗ್ಯದ ಬಗ್ಗೆ ಬುಡಕಟ್ಟು ಸಮುದಾಯದವರಿಗೆ ತಿಳುವಳಿಕೆ ಮೂಡಿಸುತ್ತಿವೆ. ಆದ್ದರಿಂದ ಬುಡಕಟ್ಟು ಕಾಲೋನಿಗಳಲ್ಲಿ ಆಸ್ಪತ್ರೆಗಳು ತಲೆಯೆತ್ತುತ್ತಿವೆ. ಆದರೂ ಬುಡಕಟ್ಟು ಸಮುದಾಯಗಳು ನೇರವಾಗಿ ಆಸ್ಪತ್ರೆಗೆ ಹೋಗುವುದಿಲ್ಲ. ಪ್ರಾರಂಭದಲ್ಲಿ ತಮ್ಮ ಪಾರಂಪರಿಕ ವೈದ್ಯಪದ್ಧತಿಯ ಮೂಲಕ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದರು. ಅದರಿಂದ ಗುಣವಾಗದಿದ್ದರೆ ಮಾತ್ರ ವೈದ್ಯರ ಹತ್ತಿರ ಹೋಗುತ್ತಾರೆ. ಹೊರಗಿನಿಂದ ಬಂದ ಇಂಗ್ಲೀಷ್ ವೈದ್ಯಪದ್ಧತಿ ಬುಡಕಟ್ಟು ಸಮುದಾಯದ

ಮೇಲೆ ಎಷ್ಟು ಪ್ರಭಾವ ಬೀರಿದರೂ ತನ್ನ ಪಾರಂಪರಿಕವಾದ ವಿದ್ಯೆಯನ್ನು ಬುಡಕಟ್ಟು ಸಮುದಾಯ ಪಾಲಿಸದೆ ಇರಲಾರರು. ಕೆಲ ಸಂದರ್ಭಗಳಲ್ಲಿ ಆಧುನಿಕ ವೈದ್ಯಪದ್ಧತಿಯ ಪ್ರಭಾವದಿಂದ ಬುಡಕಟ್ಟು ಸಮುದಾಯಗಳು ಇಂಗ್ಲೀಷ್ ಔಷಧಿ ಪದ್ಧತಿಯನ್ನು ತೆಗೆದುಕೊಳ್ಳಬೇಕು ಅಥವಾ ದೇಶಿ ಔಷಧಿ ತೆಗೆದುಕೊಳ್ಳಬೇಕು ಎಂಬುದರ ಗೊಂದಲಕ್ಕೀಡಾಗುತ್ತಾರೆ. ಬುಡಕಟ್ಟು ಸಮುದಾಯಗಳನ್ನು ಸಂದರ್ಶಿಸಿದಾಗ ಹೆಚ್ಚಾಗಿ ಬುಡಕಟ್ಟು ಸಮುದಾಯಗಳು ತಮಗೆ ಪರಿಚಿತವಿರುವ ತಮ್ಮ ಪೂರ್ವಿಕರಿಂದ ಬಳುವಳಿಯಾಗಿ ಪ್ರಾಪ್ತವಾಗಿರುವ ತಮ್ಮ ಪರಂಪರೆಯ ಗಿಡಮೂಲಿಕೆ ಔಷಧಿಗಳನ್ನು ಬಳಸುವುದೆ ಹೆಚ್ಚು ಯೋಗ್ಯವೆಂದು ಬುಡಕಟ್ಟು ಸಮುದಾಯಗಳು ಅಭಿಪ್ರಾಯ ವ್ಯಕ್ತ ಗೊಳಿಸುತ್ತಾರೆ.

ವೈದ್ಯರ ವಿಷಯದಲ್ಲಿ ಇರುಳಿಗರು ತುಂಬಾ ಗುಟ್ಟು ಮಾಡುತ್ತಾರೆ. ಅದಕ್ಕೆ ಸರಿಯಾದ ಕಾರಣ ಸಿಗದಿದ್ದರೂ ಅವರ ಗುಟ್ಟು ಮಾಡುವ ತೀವ್ರತೆ ಎಷ್ಟಿರುತ್ತದೆ ಎಂದರೆ: ಒಬ್ಬಾತ ಕಾಡಿಗೆ ಹೋದಾಗ ಹಾವೊಂದು ಕಚ್ಚಿಬಿಡುತ್ತದೆ. ಆತನಿಗೆ ಹಾವು ಕಡಿತವನ್ನು ಉಪಶಮನ ಮಾಡಿಕೊಳ್ಳುವ ಔಷಧಿಯ ಸಸ್ಯ ಗೊತ್ತಿರುತ್ತದೆ. ಹಾವು ಕಡಿದ ಕೂಡಲೇ ಆ ಗಿಡಮೂಲಕೆಯ ಸಸ್ಯವನ್ನು ಹುಡುಕಿಕೊಂಡು ಹೋಗುತ್ತಾನೆ. ಇನ್ನೇನು ಸಸ್ಯವನ್ನು ಸಮೀಪಿಸಬೇಕು ಎಂಬಷ್ಟರಲ್ಲಿ ಪ್ರಜ್ಞೆ ತಪ್ಪಿ ಬಿದ್ದಾಗ ಆತನಿಗೆ ತಿಳಿದಿರುವ ಔಷಧಿಯ ಗಿಡದ ಕಡೆಗೇ ಕೈಮಾಡಿ ಮಲಗಿರುತ್ತಾನೆ. ಆ ಗಿಡದಿಂದ ಬೀಸಿ ಬರುವ ಗಾಳಿಗೆ ಅವನ ಜೀವ ಉಳಿದಿರುತ್ತದಂತೆ !

ಮಾರನೇ ದಿನ ಮಗ ತಾಯಿಯನ್ನು ಅಪ್ಪ ಎಲ್ಲಿ ಹೋದನೆಂದು ಕೇಳುತ್ತಾನೆ. ಕಾಡಿಗೆ ಹೋದವರು ಹಿಂದಿರುಗಲಿಲ್ಲ ಎನ್ನುತ್ತಾಳೆ ತಾಯಿ. ಹುಡುಕಿಕೊಂಡು ಹೋದ ಮಗನಿಗೆ ಬಿದ್ದಿರುವ ತಂದೆ ಕಾಣುತ್ತಾನೆ. ಹತ್ತಿರ ಬಂದು ನೋಡುತ್ತಾನೆ. ಇನ್ನೂ ಜೀವವಿದೆ. ಹಾಗೆ ಬಿದ್ದವನ ಕೈ ಹಾವು ಕಡಿತ ನಿವಾರಣೆಯ ಔಷಧಿಯ ಕಡೆಗಿರುವುದು ಗೊತ್ತಾಗಿ; ಆ ಗಿಡದ ಸೊಪ್ಪನ್ನು ಪುಡಿ ಮಾಡಿ ಮೂಗಿಗೆ ವಾಸನೆ ತೋರಿಸಿ, ಹೊಟ್ಟೆಗೊಂದಿಷ್ಟು ಕುಡಿಸುತ್ತಾನೆ, ಹಾವಿನ ವಿಷ ಇಳಿಯುತ್ತದೆ. ಎದ್ದವನೇ ಔಷಧಿಯನ್ನು ಯಾರು ತೋರಿಸಿದರೆಂದು ಕೇಳುತ್ತಾನೆ. ನಿನ್ನ ಕೈ ಆ ಕಡೆಗೆ ಬಿದ್ದಿತ್ತು ಅದರ ಗಾಳಿಯಿಂದ ನೀನಿನ್ನು ಜೀವಂತವಾಗಿದ್ದೆ: ಕೂಡಲೇ ಅದನ್ನು ಕಿತ್ತು ನಿನಗೆ ಉಪಚಾರ ಮಾಡಿದೆ ಎನ್ನುತ್ತಾನೆ. ಮಗ ಹೇಳಿದ ಮಾತುಗಳನ್ನು ಕೇಳಿದ ಕೂಡಲೇ ತನ್ನ ಕೈಯನ್ನು ಕುಡುಗೋಲಿನಿಂದ ಕತ್ತರಿಸಿಕೊಳ್ಳುತ್ತಾನೆ. ಅಂದರೆ ಹಾವಿನ ಔಷಧಿಯ ಸಸ್ಯವನ್ನು ತೋರಿಸಿದ ಕೈ ಇರುವುದೇ ಬೇಡ ಎಂಬುದು ಆತನ ಇಚ್ಛೆ. ಔಷಧಿಗಳ ಬಗೆಗೆ ಅಷ್ಟರಮಟ್ಟಿನ ಗುಟ್ಟು ಮಾಡುವುದು ಇರುಳಿಗರ ಜಾಯಮಾನವೆನ್ನುತ್ತಾರೆ.೧೩

ತೀರ ಹತ್ತಿರದವರಿಗೆ ಅಂದರೆ ಮಕ್ಕಳು ಅದರಲ್ಲೂ ತಂದೆಗೆ ವಿಧೇಯರಾಗಿರುವ ಮಕ್ಕಳಿಗೆ ಮಾತ್ರ ಈ ಔಷಧಿಗಳ ವಿವರಗಳನ್ನು ಹೇಳಿಕೊಡುವುದುಂಟು. ಹಾಗೆ ಹೇಳಿಕೊಡುವಾಗಲೂ ಯಾವುದೇ ಔಷಧಿಯನ್ನು ದುರುಪಯೋಗ ಪಡಿಸಿಕೊಳ್ಳಬೇಡ ಎಂಬ ಬುದ್ಧಿ ಮಾತನ್ನು ಹೇಳುತ್ತಾರೆ ಮತ್ತು ಯಾವುದೇ ವ್ಯಾಪಾರಿ ದೃಷ್ಟಿಯಿಂದ ಈ ಕಾರ್ಯವನ್ನು ಮಾಡಬೇಡ ಎಂದೂ ಸಹ ಹೇಳಿರುತ್ತಾರೆ. ವ್ಯಾಪಾರದ ದೃಷ್ಟಿಯಿಂದ

ಔಷಧಿಗಳನ್ನು ನೀಡಿದರೆ ಆದರಿಂದ ಖಾಯಿಲೆ ಗುಣವಾಗುವುದಿಲ್ಲವೆಂದು ನಂಬುತ್ತಾರೆ. ಕಾಡಿನಲ್ಲಿ ಸಿಗುವ ಪುಕ್ಕಟೆ ವಸ್ತು. ಗಿಡಮೂಲಿಕೆಗಳಿಂದ ತಯಾರಾದ ಪ್ರಕೃತಿ ದತ್ತವಾಗಿ ದೊರೆಯುವ ಔಷಧಿಗಳನ್ನು ವ್ಯಾಪರ ಮಾಡುವುದು ಪ್ರಕೃತಿಗೆ ದ್ರೋಹವೆಸಗಿದಂತೆ ಎಂಬ ನಂಬಿಕೆಯಿಂದ ಈ ಬಗೆಯ ಕಟ್ಟುಪಾಡುಗಳನ್ನು ಹಾಕಿಕೊಂಡಿರಬಹುದೆನಿಸುತ್ತದೆ. ಇಲ್ಲಿ ಇರುಳಿಗರ ನಿಸ್ವಾರ್ಥ ಸೇವೆಯ ಅರಿವಾಗದಿರದು. ತಮಗೆ ತಿಳಿದಿರುವ ಉಪಚಾರದಿಂದ ಮತ್ತೊಬ್ಬರಿಗೆ ಸಹಾಯವಾದರೆ ಅಷ್ಟೇ ಸಾಕೆಂಬ ಉಪಕಾರದ ಬುದ್ಧಿಯೂ ಕೂಡ ಇಲ್ಲಿ ಬಿಂಬಿತವಾಗುತ್ತದೆ. ಮಂತ್ರಗಳಿಂದ ಅನೇಕ ಖಾಯಿಲೆಗಳು ನಿವಾರಣೆಯಾಗುತ್ತವೆಂದು ನಂಬಿದ್ದಾರೆ. ಹಾಗೆ ಹಾಕುವ ಕೆಲವು ಮಂತ್ರಗಳನ್ನು ಮುಂದೆ ಕೊಡಲಾಗಿದೆ.

**ಅಕ್ಕಳಕು ಅಥವಾ ಅಕ್ಯಳಕು :**

ಜನಿಸಿದ ಮಕ್ಕಳಿಗೆ ಬರುವ ಖಾಯಿಲೆಗಳಲ್ಲಿ ಬಹು ಮುಖ್ಯವಾದುದು ಎಂದರೆ ಅಕ್ಯಳಕು. ಆರು ತಿಂಗಳಿಂದ ಐದು ವರ್ಷಗಳ ಅಂತರದಲ್ಲಿ ಬರುವ ಈ ರೋಗ ವಿಟಾಮಿನ್ "ಡಿ" ಕೊರತೆಯುಂಟಾದಾಗ ಕಾಣುತ್ತದೆ. ತೆಳು ಹಸಿರು ಭೇಧಿಯಾಗುವುದು, ಮಗು ಹಾಲು ಕುಡಿಯದಿರುವುದು ಇದರ ಮುಖ್ಯ ಲಕ್ಷಣ. ತಾಯಿಯ ಎದೆ ಹಾಲು ಕೂಡ ಬತ್ತಿ ಹೋಗಿರುತ್ತದೆ. ಹಟ್ಟಾಲು(ಹಟ್ಟಿಯ ಹಾಲು)ಯ್‌ಬೇಕು. ಹೇಳಿರುವ ಎರಡು ವಿಧಾನಗಳನ್ನು ಅನುಸರಿಸಿದರೆ ಖಾಯಿಲೆ ವಾಸಿಯಾಗುವುದರ ಜೊತೆಗೆ ತಾಯಿಯ ಎದೆಯಲ್ಲಿ ಹಾಲೂ ಬರುತ್ತದೆ. ಮಕ್ಕಳು ಬಿಸಿಲಲ್ಲಿ ಆಟವಾಡಿದರೆ ಈ ರೋಗ ಸಾಮಾನ್ಯವಾಗಿ ಬರಲಾರದು. ಹಾರಾಡುವ ಸಸ್ತನಿ ಎಂದು ಹೆಸರಾಗಿರುವ ಬಾವುಲಿ ಅಥವಾ ಹಿರೇಹಕ್ಕಿಯ ಸಣ್ಣ ಮರಿಯನ್ನು ತಂದು ಹರಳೆಣ್ಣೆಯಲ್ಲಿ ಚೆನ್ನಾಗಿ ಬೇಯಿಸಿ ಬಸಿದುಕೊಂಡು ಆರಿಸಿ ಕುಡಿಸಿದರೆ ಅಕ್ಯಳಕು ವಾಸಿಯಾಗುತ್ತದೆ. ಕಾಡುಪಾಪದ ಮಾಂಸವನ್ನು ಕುದಿಸಿ ಕುಡಿಸಿದರೆ ರೋಗ ನಿವಾರಣೆಯಾಗುತ್ತದೆಂದು ಹೇಳುತ್ತಾರೆ. ಅರೆ(ಬಂಡೆ) ಮೇಲೆ ಔಷಧಿ ಇರುತ್ತದೆಯಂತೆ. ಹಸುವಿನ ತುಪ್ಪದಲ್ಲಿ ಅಕ್ಕಳುಕನ ಬಾಡು ಅರೆದು ಎಣ್ಣೆ ಅಥವಾ ತುಪ್ಪದಲ್ಲಿ ಚೆನ್ನಾಗಿ ಬೇಯಿಸಬೇಕು. ಔಷಧಿಯನ್ನೂ ಅರೆದು ಹಿರೇ ಹಕ್ಕಿಯ ಪಿಕ್ಕೆ ತಂದು (ಅದು ಗುಹೆಗಳಲ್ಲಿರುತ್ತದೆ) ಹೆಬ್ಬೆರಳು ಗಾತ್ರದ ಮೂರು ಉಂಡೆಗಳನ್ನು ಇಟ್ಟು ಅದಕ್ಕೆ ಅರಿಶಿನ ಕುಂಕುಮ ಹಚ್ಚಿ ಗಂಧದಕಡ್ಡಿ ಪೂಜೆ ಮಾಡಿ, ಔಷಧಿ ಬೇಯಿಸಿ ನೆಲಕ್ಕೆ ಇಡದೆ ಕುಡಿಕೆಯನ್ನು ಹಿಡಿದು ಅದರೊಳಕ್ಕೆ ಹಾಕಿಕೊಂಡು ಬೆರಳಿನಲ್ಲಿ ತಿನ್ನಿಸಿ, ಮೈ ಕೈ ಕಾಲುಗಳಿಗೆಲ್ಲಾ ನ್ಯಾಪ (ಸವರಿ ಅಥವಾ ಹಚ್ಚಿ) ಹಿಟ್ಟು ಮಾಡಿದ ಮಡಕೆಯಲ್ಲಿ ನೀರು ಕಾಯಿಸಿ ಪ್ರತಿ ನಿತ್ಯ ಅದರಿಂದ ಸ್ನಾನ ಮಾಡಿಸಿದರೆ ಒಂದೆರಡು ವಾರಗಳಲ್ಲಿ ಮಗುವಿನ ಅಕ್ಕಳಕು ವಾಸಿಯಾಗುತ್ತದೆಂದು ಹೆಳುತ್ತಾರೆ. ಹಕ್ಕಿರೋಗ, ರಿಕೆಟ್ಸ್, ಲಿವರ್ ಕಾಯಿಲೆ, ಮೆದುಮೂಳೆ ರೋಗ ಎಂದು ನಾನಾ ಹೆಸರಿನಿಂದ ಕರೆಯುವ ಈ ರೋಗ ಮಕ್ಕಳ ಮಾರಕ ರೋಗಗಳಲ್ಲಿ ಒಂದೆನಿಸಿದೆ. ಆರು ತಿಂಗಳಿನಿಂದ ಐದು ವರ್ಷದ ಅಂತರದಲ್ಲಿ ಬರುವ ಈ ರೋಗ 'ಡಿ' ಅನ್ನಾಂಗದ ಕೊರತೆಯಿಂದ ಬರುವಂತಹುದು. ಮಕ್ಕಳು ಬಿಸಿಲಲ್ಲಿ ಆಟವಾಡಿದರೆ ಈ ರೋಗ ಬರಲಾರದು. ತೂಲಕ್ಕಿಯನ್ನು ತಂದು ಹರಳೆಣ್ಣೆಯಲ್ಲಿ ಕೊತಕೊತ ಬೇಯಿಸಿ, ಕುದಿಯುವ ಎಣ್ಣೆಯನ್ನು ಬಸಿದುಕೊಂಡು ಆರಿಸಿ ತಣ್ಣಗೆ ಮಾಡಿ ಮಗುವಿಗೆ ಕುಡಿಸಿದರೆ

ರೋಗ ನಿವಾರಣೆಯಾಗುತ್ತದೆ. 'ಬಿದ್ರೇಗಳ ಚದ್ರೆ' ಬಿದುರುಮಳೆ ತೋಟ ಕಾಡುಗಳಲ್ಲಿರುವ 'ಕಾಡುಪಾಪ' ಹಿಡಿದು ತಂದು ಕುಯ್ದು ಹರಳೆಣ್ಣೆಯಲ್ಲಿ ಬೇಯಿಸಿ ಆರಿದ ಎಣ್ಣೆಯನ್ನು ಮೈಗೆ ತಿಕ್ಕಿ ಮಸಾಜು ಮಾಡಿ ಹೊಟ್ಟೆಗೂ ಕುಡಿಸಿ, ಬಿಸಿನೀರ ಸ್ನಾನ ಮಾಡಿಸಿದರೆ ರೋಗ ನಿವಾರಣೆಯಾಗುತ್ತದೆ.

**ಮಾದಕಟ್ಟು :**

ಮಾತನಾಡುತ್ತಿರುವ ಮಗು ನಿಧಾನವಾಗಿ ತೊದಲುತ್ತಾ, ಮಾತನಾಡುವುದನ್ನೇ ನಿಲ್ಲಿಸುತ್ತದೆ. ಹೊಟ್ಟೆ ಊದಿಕೊಳ್ಳಲು ಪ್ರಾರಂಭಿಸಿ, ಕೈ ಕಾಲುಗಳು ಸಣ್ಣವಾಗುತ್ತಿರುತ್ತವೆ. ಈ ಲಕ್ಷಣಗಳು ಮಾದಕಟ್ಟು ರೋಗದ ಲಕ್ಷಣಗಳಾಗಿರುತ್ತವೆ. ಈ ರೋಗ ನಿವಾರಣೆಗಾಗಿ ಕಾಡಿನಲ್ಲಿ ಸಿಗುವ ಒಂದು ಒಂದು ಬಗೆಯ ಬೇರನ್ನು ತಂದು ಅರ್ಧ ಕಾಲು ಅಂಗುಲ ಉದ್ದದ ಚೂರು ಮಾಡಿ ಏಳು, ಒಂಭತ್ತು ಇಲ್ಲವೆ ಹದಿಮೂರು ಚೂರುಗಳನ್ನು ಮೂರು ಬಣ್ಣದ ಉಂಡೆ ದಾರಕ್ಕೆ ಪೋಣಿಸಿ ಭಾನುವಾರ ಸಂಜೆ ಮೂರರಿಂದ ಆರು ಗಂಟೆಯ ಸಮಯದಲ್ಲಿ ಪೂಜೆ ಮಾಡಿ ಮಗುವಿನ ಕೊರಳಿಗೆ ಹಾಕುತ್ತಾರೆ. ಮಾದಕಟ್ಟುಮಣಿ ಹಾಕುವವರಿಗೆ ಹನ್ನೆರಡು ಎಲೆ ಹನ್ನೆರಡು ಅಡಿಕೆ ಮತ್ತು ಕಾಣಿಕೆ ಕೊಡಬೇಕು. ಮಣಿಗಳು ಒಣಗಿದ ಹಾಗೆ ಮಗು ಲವಲವಿಕೆಯಿಂದ ಓಡಾಡುವಂತಾಗುತ್ತದೆ. ದೇಹದಲ್ಲಿ ನಿಜವಾಗಿಯೂ ಮಾದಕಟ್ಟು ಖಾಯಿಲೆ ಇದ್ದರೆ ಮಗು ತಾನಾಗಿಯೇ ಆಮಣಿಗಳನ್ನು ತಿಂದುಬಿಡುತ್ತದೆ. ಒನಕೆ ಮುಂದಿ ಅಥವಾ ಶತಪದಿಯನ್ನು ಹಿಡಿದು, ಕಾಡುಗೆಣಸಿನ ಜೊತೆ ಅರೆದು ಎಣ್ಣೆಯಲ್ಲಿ ಬೇಯಿಸಿ ತಿನ್ನಿಸಿದರೂ ಕೂಡ ಈ ರೋಗ ವಾಸಿಯಾಗುತ್ತದೆ. ಕೊರಳಿಗೆ ಹಾಕಿದ ಮಣಿ ಸರದಲ್ಲಿ ಹನ್ನೊಂದು, ಹದಿಮೂರು ಅಥವಾ ಹದಿನೈದು ಮಣಿಗಳಿದ್ದು ಚೆನ್ನಾಗಿ ಒಣಗಿದ ಮೇಲೆ ದಿನಕ್ಕೊಂದರಂತೆ ತೆಗೆದು ಅರೆದು ಊಟದಲ್ಲಿ ಬೆರೆಸಿ ತಿನ್ನಿಸಿದರೆ ಈ ರೋಗ ಸಂಪೂರ್ಣವಾಗಿ ವಾಸಿಯಾಗುತ್ತದೆಂದು ಹೇಳುತ್ತಾರೆ. ಮಣಿಗಳೆಂದು ಕಟ್ಟಿದ ಆ ಬೇರಿನಲ್ಲಿಯೇ ಔಷಧೀಯ ಗುಣಗಳಿದ್ದು ಖಾಯಿಲೆ ವಾಸಿಯಾಗಲೂ ಬೇಕಾದ ಅಂಶಗಳಿರುತ್ತವೆನಿಸುತ್ತದೆ. ಬಿಸಿಲಿನ ತಾಪ ಈ ರೋಗಕ್ಕೆ ಅಗತ್ಯವಿರುವ ಸಾಮಾನ್ಯ ಅಂಶವಾಗಿದೆ.

ಮಾದಕಟ್ಟಿಗೆ ಮತ್ತೊಂದು ಔಷಧಿ ಹೇಳುತ್ತಾರೆ : ಔಷಧಿಯ ಹೆಸರು ಹೇಳಲೊಲ್ಲರು. ಹಸಿರು ಔಷಧಿಯನ್ನು ಕಿತ್ತು ತಂದು ಅರೆದು ಹರಳುಎಣ್ಣೆಯಲ್ಲಿ ಕುದಿಸಿ ಒಂದೊಳ್ಳೆ (ಒಂದು ಒಳಲೆ) ಕುಡಿಸಿ ಬಿಸಿಲಲ್ಲಿ ನಿಲ್ಲಿಸಿದರೆ : ಹೊಟ್ಟೆ ಕಳೆಯುತ್ತದೆ.(ಬೇಧಿಯಾಗುತ್ತದೆ) ಒಂದೆರಡು ಸಾರಿ ಭೇದಿಯಾದಮೇಲೆ ಚೆನ್ನಾಗಿ ತೊಳೆದುಬಿಟ್ಟರೆ ಸರಿಯಾಗುತ್ತದೆ. ಕೆಂಪಗೆ ಕಾಯಿಸಿದ ಸೂಜಿಯೊಂದರಿಂದ ಹೊಕ್ಕಳು ಸುತ್ತ ಬರೆ ಎಳೆದು ಅಳ್ಳೆ (ಅರಳೆ ಅಥವಾ ಹತ್ತಿ) ಬತ್ತಿಯನ್ನು ಅದರ ಸುತ್ತ ಹಚ್ಚಬೇಕು. ಮೂರು ದಿನಗಳಲ್ಲಿ ಅದು ಅಳ್ಳುತ್ತದೆ.(ಅರಳುತ್ತದೆ). ಗಾಯ ಅಳ್ಳುದ್ ಮೇಲೆ ಹತ್ತಿಯನ್ನು ಕಿತ್ತು ಹಾಕಬೇಕು. ಎಂಟು ದಿವಸಗಳ ಕಾಲ ನುಗ್ಗೆ ಸೊಪ್ಪು, ಕೋಳಿಮೊಟ್ಟೆ, ಮಠಗಾ ಹಿಡಿದ ಬಾಡು, ಕಡಲೆಕಾಯಿ ಕೊಡುವ ಹಾಗಿಲ್ಲ. ಎಂಟು ದಿನ ಕಳೆಯುವಷ್ಟರಲ್ಲಿ ಮಗುವಿನ ಮಾದಕಟ್ಟು ವಾಸಿಯಾಗುತ್ತದೆ.

**ಮಾತಕಟ್ಟು :**

ತೊಡಲಾಡುವ ಮಗು ಮಾತಾಡುವುದನ್ನು ನಿಲ್ಲಿಸಿ ದಿನದಿಂದ ದಿನಕ್ಕೆ ಹೊಟ್ಟೆಯ ಗಾತ್ರ ಹಿರಿದಾಗಿ ಕೈಕಾಲು ಸಣ್ಣಗಾಗುವ ಸೂಚನೆಗಳು ಕಂಡುಬಂದರೆ ಮಾತುಕಟ್ಟು ರೋಗವೆಂದು ತಿಳಿಯುತ್ತಾರೆ. ಈ ರೋಗಕ್ಕೆ ಪರಿಹಾರಕ್ಕೆ 'ಮಾತಕಟ್ಟುಮಣಿ' ಎಂಬ ಮಣಿಯನ್ನು ತಂದು ಕೊರಳಿಗೆ ಹಾಕುತ್ತಾರೆ. ಒಕೆಮುಂಡಿ–ಶತಪದಿ–(ಮಿಲಿಪೇಡ್ Millepade)ಗಳನ್ನು ಹಿಡಿದು ತಂದು ಕಾಡುಗೆಣಸಿನ ಜೊತೆ ಅರೆದು ಬೇಯಿಸಿ ತಿನ್ನಿಸಿದರೆ ಈ ರೋಗ ನಿವಾರಣೆಯಾಗುತ್ತದೆ.

**ಕೆಂಬಾರ :**

ಈ ಪರಿಯ ರೋಗದಲ್ಲಿ ಎರಡು ಜಾತಿ. ಒಂದು ಆಡು ಕೆಂಬಾರ ಇನ್ನೊಂದು ಕೆಟ್ಟ ಕೆಂಬಾರ. ಆಡುಕೆಂಬಾರ ಬಂದರೆ ಮಕ್ಕಳು ನೆಲೆಹಿಡಿದು ಮಲಗುವುದಿಲ್ಲ ಆಡುತ್ತಾಡುತ್ತಲೇ ಇರುತ್ತವೆ. ಕೆಂಪುಗಾಣಿಕೆ ಗಿಡದಬೇರು ತಂದು ಹರಳೆಣ್ಣೆಯೊಳಗೆ ತೇಯ್ದು ಕೆಂಬಾರಕ್ಕೆ ಲೇಪಿಸಿದರೆ ನಿವಾರಣೆಯಾಗುತ್ತದೆ. ಗಂಗಗುಂಗೆ ಬೇರು ತಂದು ಕಲ್ಲಿನ ಮೇಲೆ ತೇದು ಹರಳೆಣ್ಣೆ ಬೆರೆಸಿ ಲೇಪಿಸಿದರೆ ವಾಸಿಯಾಗುತ್ತದೆ. ಈ ಮದ್ದಿನ ಪ್ರಯೋಗಕ್ಕೊಳಗಾದ ಮಕ್ಕಳು ಸಪ್ಪೆ ಹಿಟ್ಟು ತಿಂದುಕೊಂಡು ಪಥ್ಯ ಇರಬೇಕಾಗುತ್ತದೆ.

**ಕಲ್ಲುಗ್ಯಾರ (ಮಂಡಿಯಮ್ಮ) :**

ಕುರಿ ಅಥವಾ ಮೇಕೆಗಳನ್ನು ಕುಯ್ದು ಅವುಗಳ ಗರ್ಭದ 'ಕಸರೇ' ಕರ್ಚು (ವಿಸೆರಾ) ತೆಗೆದು ರೋಗಪೀಡಿತ ಮಕ್ಕಳ ಮೈಗೆಲ್ಲಾ ಸವರಿ ಲೇಪ ಹಾಕಿ ಸಂಜೆ ಬಿಸಿ ಬಿಸಿ ನೀರೆರೆದು ತೊಳೆದರೆ ರೋಗ ನಿವಾರಣೆಯಾಗುತ್ತದೆ.

**ಗೋಂತಟ್ಟು :**

ತೊಟ್ಟಿಲ ಅಥವಾ ನಡೆದಾಡುತ್ತಿರುವ ಮಗುವಿನ ಮೈಮೇಲೆ, ಸಣ್ಣಸಣ್ಣ ರಾಗಿ ಕಾಳಿನಂತೆ ಗುಳ್ಳೆಗಳು ಕಾಣಿಸಿಕೊಂಡು ಜ್ವರ ಪೀಡಿತವಾದ ಮಗುವಿಗೆ ಗೋಂತಟ್ಟು ಸೋಂಕು ಬಂದಿದೆಯೆಂದು ತಿಳಿಯುತ್ತಾರೆ. ಜ್ವರಪೀಡಿತವಾದ ಕಂದಮ್ಮನ ಕಣ್ಣು ಕೆಂಪಗಾಗಿ ಆಗಾಗ್ಗೆ ಭೇದಿಯೂ ಆಗುತ್ತಿರುತ್ತದೆ. ಗೋಣೆಮರದ ಮೊಗುಗಳನ್ನು ತಮದು, ತಾಯ ಎದೆ ಹಾಲಿನಲ್ಲಿ ಅಥವಾ ಹಸುವಿನ ಹಾಲಿನಲ್ಲಿ ಅರೆದು ಕುಡಿಸಿದರೆ ಸೋಂಕು ನಿವಾರಣೆಯಾಗುತ್ತದೆ. ಮಲಗಿರುವ ಮಗುವಿನ ತಲೆಯ ಕೆಳಕ್ಕೆ ಬೇವಿನಸೊಪ್ಪನ್ನು ಇರಿಸಿದರೆ ರೋಗ ನಿವಾರಣೆಯೆಂದು ನಂಬುತ್ತಾರೆ.

**ಮಂದ (ಭೇದಿ) :**

ಮಗು ಸರಿಯಾಗಿ ಹಾಲು ಕುಡಿಯದೆ, ಅನ್ನ ತಿನ್ನದೆ ಮೆಟ್ಟಿ ಬೀಳುವುದು. ಭೇದಿ ಮಾಡುವಾಗ ಜೋರಾಗಿ ಹೂಸುವುದು. ನೋವಿನಿಂದ ಜೋರಾಗಿ ಅಳುವುದು ಇತ್ಯಾದಿ

ಮಾಡಿದರೆ ಮಂದ ಅಥವಾ ಭೇದಿಯಾಗಿದೆ ಎಂದು ಹೇಳುತ್ತಾರೆ. ತಾಯಿ ಬಳಸುವ ಆಹಾರದಿಂದ ಮಗುವಿಗೆ ಹಾಲು ಕುಡಿಸುದ್ದರಿಂದ ಬರುತ್ತದೆಂದು ಹೇಳುತ್ತಾರೆ. ಮಗುವಿನ ಮೈ ಬಿಸಿಯಾಗಿದ್ದು ಜ್ವರ ಬಂದಂತೆ ಕಾಣುತ್ತದೆ. ಮಂದ ಅಥವಾ ಭೇದಿಯಾದ ಮಗು ಬಹಳ ಬಳಲಿದಂತೆ ಕಾಣುತ್ತದೆ. ಕಪ್ಪು ಬಳೆಯ ಅರ್ಧ ಭಾಗವನ್ನು ತೆಗೆದುಕೊಂಡು ಅದನ್ನು ಹರಳೆಣ್ಣೆ ಬಿಟ್ಟು ಹಚ್ಚಿದ ಮಣ್ಣಿನ ಸೊಡರಿನಲ್ಲಿ ಕೆಂಪಗಾಗುವಂತೆ ಕಾಯಿಸಿ, ಮಗುವಿನ ಬಲಗಾಲ ಹೆಬ್ಬೆಟ್ಟಿನ ನರದ ಮೇಲೆ ಚುಟ್ಟಿಗೆ (ಸುಟ್ಟಿಗೆ) ಹಾಕುತ್ತಾರೆ. ಕಾಯ್ದ ಬಳೆ ಚೂರು ಮಗುವಿನ ಶರೀರದ ಭಾಗಕ್ಕೆ ತಗುಲಿದ ತಕ್ಷಣ ಪಟ್ಟೆಂದು ಶಬ್ಧ ಬಂದರೆ ಮಗುವಿಗೆ ಮಂದವಾಗಿದೆ ಎಂದು ತಿಳಿಯುತ್ತಾರೆ. ನಂತರ ಕಾಡು ಮೆಣಸಿನ ಗಿಡದ ಬೇರು ಅರೆದು ಒಳಲೆಗೆ ಹಾಕಿ ತಾಯಿಯ ಎದೆ ಹಾಲಿನ ಜೊತೆ ಕುಡಿಸಿದರೆ ಮಂದ ಅಥವಾ ಭೇದಿ ವಾಸಿಯಾಗುತ್ತದೆಂದು ಹೇಳುತ್ತಾರೆ.

ಹೀಗೆ ಇರುಳಿಗರು ಮಕ್ಕಳಿಗೆ ಬರುವ ಗೋಂತಟ್ಟು ಕೆಂಬಾರ, ಕೆಟ್ಟ ಕೆಂಬಾರ, ಕಲ್ಲುಗದವಾರ ಅಥವಾ ಪಕ್ಕೆ ರೋಗ, ಬಾಲಗ್ರಾವು, ಬದ್ದಗುಳಿ, ಲಾಳಕಿವಿ, ಮೆಟರೆಗಟ್ಟು, ಹೊಟ್ಟೆನೋವು ಮುಂತಾದ ರೋಗಗಳಿಗೆ ಔಷಧಿಗಳನ್ನು ಮಾಡುವ ವಿಧಾನವನ್ನು ತಿಳಿಸುತ್ತಾರೆ.

ಅಜೀರ್ಣದಿಂದ ಮಗು 'ಮಪ್ರ'ದ ನಿದ್ದೆಗೊಳಗಾಗಿ ಆಗಾಗ್ಗೆ ಮೆಟ್ಟಿ ಬೀಳುವ ಮತ್ತು ಭೇದಿ ಮಾಡಿಕೊಳ್ಳುತ್ತಿದ್ದರೆ ಮಂದವಾಗಿದೆಯೆಂದು ತಿಳಿಯುತ್ತಾರೆ. ಈ ಸ್ಥಿತಿಯ ಮಗುವಿಗೆ ಕಿವಿ ತಣ್ಣಗಿದ್ದು ಮೈಬಿಸಿಯಾಗಿರುತ್ತದೆ. ಅಪ್ಪಟ ಕರಿಬಳೆಯ ಉದ್ದನೆಯ ಮುರುಕನ್ನು ಆರಿಸಿ ತೆಗೆದುಕೊಂಡು ಹರಳೆಣ್ಣೆ(ಕೈಯ್ಯೆಣ್ಣೆ) ದೀಪವನ್ನುರಿಸಿ ದೀಪದ ಜ್ವಾಲೆಯಲ್ಲಿ ಬಳೆ ಚೂರನ್ನು ಕಾಯಿಸಿ ಮಗುವಿನ ಮುಖದ ಮೆಲುಕಿನ ಭಾಗ, ತಲೆಗುಣಿ, ನೆತ್ತಿಸುಳಿ, ಬಲಗಾಲ ಹೆಬೆಟ್ಟಿನ ನರದ ಮೇಲೆ–ಈ ಭಾಗಗಳಲ್ಲಿ ಯಾವುದಾದರೂ ಒಂದೆಡೆ ಕೆಲಸಂದರ್ಭ ಎಲ್ಲಾ ಕಡೆ 'ಬರೆ' ಅಥವಾ ಸುಟ್ಟಿಗೆ ಹಾಕುತ್ತಾರೆ. ಕಾದ ಬಳೆ ಚೂರು ಮಗುವಿನ ಶರೀರದ ಭಾಗಕ್ಕೆ ಸೋಕಿದ ತಕ್ಷಣ ಚಟ್ಟೆಂದು ಸದ್ದಾದರೆ ಮಗುವಿಗೆ ಆದದ್ದು ಮಂದವೆಂದೇ ತಿಳಿಯುತ್ತಾರೆ.

**ತಲೆನೋವು :**

ಒತ್ತಲೆ (ಒಂದೇಕಡೆ) ನೋವಿಗೆ ಮತ್ತೊಂದು ಬಗೆಯ ಔಷಧಿಯನ್ನೂ ಹಾಕುವುದುಂಟು. ತುಂಬೆಸೊಪ್ಪು ತಂದು ಅದರ ಜೊತೆಗೆ ಒಂದು ಚೂರು ಸುಣ್ಣ, ಒಂದಳ್ಳು ತಿನ್ನುವ ಉಪ್ಪು ಹಾಕಿ ಚೆನ್ನಾಗಿ ಹಿಸುಕಬೇಕು. ಹಸುವಿನ ಬೆಣ್ಣೆಯನ್ನು ಕನಕಿಸಿಕೊಂಡು(ಕಾಯಿಸಿಕೊಂಡು) ಅದಕ್ಕೆ ಚೆನ್ನಾಗಿ ಹಿಸುಕಿರುವ ಈ ಮೂರು ಪದಾರ್ಥಗಳ ರಸವನ್ನು ಹಿಂಡಿ ಮತ್ತೆ ಬಿಸಿ ಮಾಡಿ ಬಲಗಡೆ ತಲೆನೋವಿದ್ದರೆ ಎಡಗಡೆಯ ಮೂಗಿಗೂ ಎಡಗಡೆ ತಲೆ ನೋವಿದ್ದರೆ ಬಲಗಡೆಯ ಮೂಗಿಗೂ ಬಿಡಬೇಕು. ಬೆಳಗ್ಗೆ ಎಂಟು ಗಂಟೆಯ ಒಳಗೆ ಬಿಡಬೇಕು. ಹೀಗೆ ಮೂರು ದಿನ ಬಿಟ್ಟರೆ ಒತ್ತಲೆ ನೋವು ವಾಸಿಯಾಗುತ್ತದೆ.

**ದಾಟು :**

ತೊಡೆಯಲ್ಲಿ ಒಡೆತ(ನೋವು) ಕಾಣಿಸುವುದು, ನಿಃಶಕ್ತಿ ಕಾಣಿಸುತ್ತದೆ. ಏಳು ಜಾತಿಯ ಹಸಿರು ಔಷಧಿಗಳನ್ನು ಹೊಂದಿಸಿಕೊಳ್ಳಬೇಕು. ಬಿಳಿವರುದಾಳೆ, ಕರಿವರುದಾಳೆ, ಹಿರಿಮದ್ದುನ್ ಬೇರು, ದಾಟುನ್ ಬೇರು, ಇತ್ಯಾದಿ ಏಳು ಜಾತಿಯ ಬೇರುಗಳನ್ನು ಮಿಶ್ರಣಮಾಡಿ ನುಣ್ಣಗೆ ಅರೆದು ಔಷಧಿ ತಯಾರು ಮಾಡಿಕೊಳ್ಳಬೇಕು. ಕೋಳಿ ಮೊಟ್ಟೆ, ಕುಡಿಕೆ, ವಿಭೂತಿಗಟ್ಟಿ, ಇಷ್ಟನ್ನು ತೆಗೆದುಕೊಂಡು ಹೋಗಿ ಅರಿಶಿನ ಕುಂಕುಮ ಹಚ್ಚಿ, ಗಂಧದಕಡ್ಡಿ ಹಚ್ಚಿ ಪೂಜೆ ಮಾಡಿ ತಡೆ ಹೊಡೆದರೆ ಎಂತಹ ನೋವಿದ್ದರು ಹೋಗುತ್ತದೆ. ಜಾಸ್ತಿಯಿದ್ದರೆ ಮಂಡಿಯ ಬಳಿಗೆ ಬಂದು ನಿಂತುಬಿಡುತ್ತದೆ. ಕೊನೆಯಲ್ಲಿ ಏಳು ತಡೆಗಳನ್ನು ಹೊಡೆಸಿ, ಒಂಬತ್ತನೇ ತಡೆ ಹೊಡೆದರೆ ಪೂರ್ಣ ಗುಣವಾಗುತ್ತದೆ.

**ಕಾಮಾಲೆ ಅಥವಾ ಅರಿಸಿಣಕೆಂಜೋಳಿ :**

ಯಮಮಾಕ್ಷಿ, ಮಾಮೇರಿ, ಕೊಕ್ಕುಮುಳು, ನರ್‌ದಾರಿ, ದೇವರು ತುಳಸಿ, ನಾಯಿ ತುಳಸಿ ಇವಿಷ್ಟನ್ನು ಸೇರಿಸಿ ಮುಖಕ್ಕೆ ಹಚ್ಚುವುದು. ಸಪ್ಪೆ ಊಟ ಮಾಡಬೇಕು. ನಾಲ್ಕರಿಂದ ಇಪ್ಪತ್ತು ದಿವಸಗಳು ಅಥವಾ ಖಾಯಿಲೆ ವಾಸಿ ಆಗುವವರೆಗೆ ಹೆಚ್ಚೆಂದರೆ ಒಂದು ತಿಂಗಳು ಹೀಗೆ ಮಾಡಬೇಕು. ಕಾಮಾಲೆ ರೋಗ ಎಂದರೆ ಮಣ್ಣು ತಿನ್ನುವುದು, ಕೈಕಾಲು ಸಣ್ಣ ಆಗುವುದು, ಕಣ್ಣು ಅರಿಸಿನದ ಬಣ್ಣ ಬರುವುದು, ಸುಸ್ತು, ಸಂಕಟ, ಊಟ ಸೇರುವುದಿಲ್ಲ. ಈ ರೋಗವನ್ನೆ ಕಾಮಾಲೆ ಅಥವಾ ಅರಿಸಿಣಕೆಂಜೋಳಿ ರೋಗ ಎನ್ನತ್ತಾರೆ.

**ಅರುವು :**

ಮುಖ ಮುಸುಡಿಯೆಲ್ಲಾ ಊದಿಕೊಳ್ಳುತ್ತದೆ. ಕೀವು ತುಂಬಿದಂತೆ ಬಿಳಿಚಿಕೊಂಡಿರುತ್ತದೆ. ಕಣ್ಣು ಕಾಣುವುದಿಲ್ಲ. ನಾಲ್ಕು ನಿಂಬೆಹಣ್ಣುಗಳು, ನಾಲ್ಕು ವಿಭೂತಿ ಗಟ್ಟಿಗಳು, ನಾಲ್ಕು ಮಣ್ಣಿನ ಕುಡಿಕೆ, ಮೂರು ಕೂಳು ಬೇಲದಕಾಯಿ, ಅರಿಸಿನ, ಕುಂಕುಮ, ಊದುಕಡ್ಡಿ, ಕರ್ಪೂರ, ಇತ್ಯಾದಿಗಳನ್ನು ತರಿಸಿ, ಮೂರುದಾರಿ ಕೂಡುವ ದಾರಿಯಲ್ಲಿ ತಡೆ ಹೊಡೆದು ವಾಸಿ ಮಾಡುತ್ತಾರೆ. ಅದರೊಟ್ಟಿಗೆ ಒಂಬತ್ತು ಜಾತಿಯ ಗಿಡಮೂಲಿಕೆ, ಹಸಿರು ಸೊಪ್ಪುಗಳನ್ನು ಬಳಸಿ ಔಷಧಿ ತಯಾರು ಮಾಡಿ ಮೈಯೆಲ್ಲಾ ಹಚ್ಚಿದರೆ ಒಂದು ವಾರದೊಳಗೆ ವಾಸಿಯಾಗುತ್ತದೆಂದು ಹೇಳುತ್ತಾರೆ.

**ಹೆಂಗಸರಿಗೆ ಎದೆಬಾವು ಬಂದರೆ :**

ಬಾಣಂತಿ ಹೆಂಗಸಿಗೆ ಎದೆ ಬಾವು ಎಂಬ ರೋಗ ಬಂದರೆ ಹಾಲು ಬರುವ ಬದಲು ಎದೆಯ ತೊಟ್ಟಿನಿಂದ ರಕ್ತ ಬರಲು ಪ್ರಾರಂಭವಾಗುತ್ತದೆಯಂತೆ, ಹುಣ್ಣು ಕೂಡ ಆಗಿರುತ್ತದೆ. ಬಹಳ ಬಾಧೆ ಕೊಡುತ್ತದೆಯಂತೆ. ಅದು ಒಡೆದು ಹೋಗುವವರೆಗೆ ಬಹಳ ತೊಂದರೆಕೊಡುವುದಷ್ಟೆ ಅಲ್ಲ ಜ್ವರ, ತಲೆಸಿಡಿತ ಇತ್ಯಾದಿಗಳೂ ಬರಿತ್ತದೆಯಂತೆ. ಆಗ ಚುಜ್ಜಲಿ ಮರದ ಮೇಲೆ ಬೆಳೆದ "ಮರಣಬೆ"ಯನ್ನು ತಂದು ನೀರಿನಲ್ಲಿ ತೇದು(ಅರೆದು)

ಹಚ್ಚಿದರೆ ಹುಣ್ಣು ಒಡೆದುಹೋಗಿ, ಗಾಯವು ವಾಸಿಯಾಗಿ, ರಕ್ತ ಬರುವುದು ನಿಂತುಹೋಗಿ ಸರಿಯಾಗಿ ಹಾಲು ಬರುತ್ತದೆಯಂತೆ. ಮೇಕೆ, ಹಸುಗಳಿಗೆ, ಎಮ್ಮೆಗಳಿಗೆ ಎದೆಬಾವು ಕಾಣಿಸಿಕೊಂಡರೂ ಸಹ ಇದೇ ಔಷಧಿಯನ್ನು ಮಾಡಬಹುದು.

**ಹೆಂಗಸರಿಗೆ ಬಟ್ಟೆ ಹೆಚ್ಚು ಹೋಗುವುದು :**

ಬೇಕಾದ ಸಾಮಾನುಗಳು : ಕಾಡಳ್ಳಿ ಚೆಕ್ಕೆ, ಕರಿಜೀರಿಗೆ, ರಸಬಾಳೇಹಣ್ಣು, ಕಲ್ಲುಸಕ್ಕರೆ, ಹಸುವಿನ ತುಪ್ಪ ನಿಗದಿತ ಪ್ರಮಾಣದಲ್ಲಿರಬೇಕು. ಕಾಡಳ್ಳಿಪಟ್ಟೆ(ಚೆಕ್ಕೆ)ಯನ್ನು ಚೆನ್ನಾಗಿ ಜಜ್ಜಿ ಒಂದು ಹೊಸ ಮಡಿಕೆಗೆ ಹಾಕಬೇಕು. ರಸಬಾಳೆಹಣ್ಣನ್ನು ಸಿಪ್ಪೆಸಹಿತ ಚೂರು ಚೂರು ಮಾಡಿ ಅದರೊಟ್ಟಿಗೆ ಸೇರಿಸಬೇಕು. ಕಲ್ಲುಸಕ್ಕರೆ ಮತ್ತು ಕರಿ ಜೀರಿಗೆಗಳನ್ನು ಪುಡಿಮಾಡಿ ಮಿಶ್ರ ಮಾಡಬೇಕು. ಹಸುವಿನ ತುಪ್ಪವನ್ನು ಅದರ ಮೇಲೆ ಹಾಕಿ ಒಂದು ಚಮಚದಿಂದ ಕಲಸಿ ಮಡಿಬಟ್ಟೆಯೊಂದರಿಂದ ಆ ಮಡಿಕೆಯ ಬಾಯಿಯನ್ನು ಮುಚ್ಚಿ ಭದ್ರವಾಗಿ ಕಟ್ಟಿ ಇಟ್ಟುಕೊಂಡು ಪ್ರತೀ ದಿನ ಬೆಳಗ್ಗೆ ಸಾಯಂಕಾಲ ಒಂದೊಂದು ಚಮಚ ತಿನ್ನಬೇಕು. ಒಂದು ವಾರ ಅಥವಾ ಹದಿನೈದು ದಿವಸ ಉಪಯೋಗಿಸಿದರೆ ಈ ಖಾಯಿಲೆಯನ್ನು ಸಂಪೂರ್ಣವಾಗಿ ಗುಣಪಡಿಸಬಹುದು.

**ಜ್ವರ, ನೆಗಡಿ, ಶೀತ :**

ತುಳಸಿ (ಕಪ್ಪು ಅಥವಾ ಬಿಳಿ) ಒಂದು ಹಿಡಿ, ನಾಗದಾಳೆ(ನರ್ವೀಸ) ಎರಡು ಚುಟಿಕೆ, ದೊಡ್ಡಪತ್ರೆ ಹತ್ತು ಎಲೆಗಳು, ಅರಿಸಿಣ ೩-೪ ಚೂರು, ೧೦ ಕರಿಮೆಣಸಿನಕಾಳು – ಇವೆಲ್ಲವನ್ನು ಸೃರಿಸಿ ನುಣ್ಣಗೆ ಕಲ್ಲಿನ ಮೇಲೆ ಅರೆದು ಖಾಲಿ ಹೊಟ್ಟೆಯಲ್ಲಿ (ಆಹಾರ ಸೇವಿಸುವ ಮುನ್ನ) ಅದರ ರಸವನ್ನು ಮೂರು ದಿನ ಸೇವಿಸಿದರೆ ಜ್ವರ, ನೆಗಡಿ ಮತ್ತು ಶೀತಗಳು ವಾಸಿಯಾಗುತ್ತವೆ. ಶೀತ ಮತ್ತು ಗಂಟಲು ನೋವುಗಳಿದ್ದರೆ ಶುಂಠಿ, ಕರಿಮೆಣಸು, ಬೆಲ್ಲ ಮತ್ತು ತುಳಸಿ ಎಲೆಗಳನ್ನು ಅರೆದು ಅದರ ರಸವನ್ನು ಮೂರು ದಿವಸ ಕುಡಿದರೆ ಗುಣವಾಗುತ್ತದೆ.

**ಚಳಿ–ಜ್ವರ :**

ಗಜ್ಜುಗದ ಚಿಗುರೆಲೆ, ಜೀರಿಗೆಗಳನ್ನು ಅರೆದು ರಸ ತೆಗೆದು ಖಾಲಿ ಹೊಟ್ಟೆಗೆ ಬೆಳಗಿನ ಹೊತ್ತು ಸೇವಿಸಿದರೆ ೩-೪ ದಿನಗಳಲ್ಲಿ ಗುಣವಾಗುತ್ತದೆ. ಹಾಗೆಯೇ ಸೀತಾಳೆ(ದಡಾರ) ಅಥವಾ ಅಮ್ಮ ಬಂದಿದ್ದರೆ ಕಹಿಬೇವಿನ ಸೊಪ್ಪು ಮತ್ತು ಅರಿಸಿಣಗಳನ್ನು ಮಿಶ್ರಮಾಡಿ ಅರೆದು ಮೈಗೆಲ್ಲ ಹಚ್ಚಿ ಬಿಸಿನೀರು ಸ್ನಾನ ಮಾಡಿಸಬೇಕು. ದಿನ ಬಿಟ್ಟು ದಿನ ಹಾಗೆ ಮಾಡಿದರೆ ಅಮ್ಮ ಅಥವಾ ಸೀತಾಳೆ ವಾಸಿಮಾಡಬಹುದೆನ್ನುತ್ತಾರೆ. ಹಾಗೆಯೇ ಊರ ಹೊರಗಿನ ಬೇವಿನ ಮರದಡಿಯಲ್ಲಿ ಕರಿ ಅನ್ನ, ಕೆಂಪು(ಕುಂಕುಮದ)ಅನ್ನ, ಅರಿಸಿಣದ ಅನ್ನಗಳ ಉಂಡೆಗಳನ್ನಿಟ್ಟು ಪೂಜೆ ಮಾಡಿ ಅಮ್ಮನನ್ನು ಸಾಗಹಾಕುವ ಆಚರಣೆಯನ್ನೂ ಮಾಡುತ್ತಾರೆ. ಈ ಆಚರಣೆಯಲ್ಲಿ ಅಕ್ಕಪಕ್ಕದ ಒಕ್ಕಲಿಗರ ಪ್ರಭಾವವಿರುವುದನ್ನು ಗಮನಿಸಬಹುದು.

### ಹೊಟ್ಟೆ ಉಬ್ಬರಿಸಿಕೊಳ್ಳುವುದು (ಗ್ಯಾಸ್ಟ್ರಿಕ್) :

ಹೊಟ್ಟೆ ಉಬ್ಬರಿಸಿಕೊಳ್ಳುವ (ಗ್ಯಾಸ್ಟ್ರಿಕ್) ರೋಗಕ್ಕೂ ಇರುಳಿಗರು ಔಷಧಿ ನೀಡಬಲ್ಲರು. ಒಂದು ಸೇರು ನೀರು ಇವಿಷ್ಟು ಬೇಕಾದ ಪದಾರ್ಥಗಳು ತಯಾರಿಸುವ ವಿಧಾನ: ಮೆಂತ್ಯ, ನೆಲ್ಲಿಕಾಯಿ ಮತ್ತು ಬೆಲ್ಲ ಅಥವಾ ಸಕ್ಕರೆಗಳನ್ನು ನೀರಿನಲ್ಲಿ ಕುದಿಸಿ ತಣ್ಣಗಾದ ಮೇಲೆ ಉಪ್ಪಿನಕಾಯಿಯ ಮಡಕೆಯಲ್ಲಿ ಹಾಕಿ ಸ್ವಚ್ಛವಾದ ಬಟ್ಟೆಯಿಂದ ಮಡಕೆಯ ಬಾಯಿಯನ್ನು ಮುಚ್ಚಿ ದಾರದಿಂದ ಕಟ್ಟಿ, ಎಂಟು ದಿನಗಳ ಕಾಲ ಇಡಬೇಕು. ನಂತರ ಮಡಿಬಟ್ಟೆಯಿಂದ ಸೋಸಿ(ಬಸಿದು) ಸೀಸೆಯಲ್ಲಿ ಸಂಗ್ರಹಿಸಬೇಕು. ಪ್ರತಿದಿನ ಬೆಳಗ್ಗೆ ಖಾಲಿ ಹೊಟ್ಟೆಗೆ ಅರ್ಧ ಲೋಟದಂತೆ ಹದಿನೈದು ದಿವಸಗಳು ಸೇವಿಸಿದರೆ ಹೊಟ್ಟೆ ಉಬ್ಬರಿಸಿಕೊಳ್ಳುವುದು ಅರ್ಥಾತ್ ಗ್ಯಾಸ್ಟ್ರಿಕ್ ವಾಸಿಯಾಗುತ್ತದೆ. ಹುಳಿ ಮತ್ತು ಖಾರ ಹೆಚ್ಚಾಗಿ ತಿನ್ನಕೂಡದು.

### ಗಾಯ, ಹುಣ್ಣು, ಕೀಲುನೋವು, ಮೂಲವ್ಯಾಧಿ, ಚರ್ಮರೋಗ ಇತ್ಯಾದಿಗಳಿಗೆ

ಬೇಕಾದ ವಸ್ತುಗಳು : ಮೂರು ಸೇರು ಬೇವಿನ ಎಲೆ, ಎರಡು ಸೇರು ಬಿಳಿ ಪಾರಿವಾಳದ ಎಲೆ, ಮೂರು ಸೇರು ನುಗ್ಗೆಸೊಪ್ಪು, ಒಂದು ನೂರು ವೀಳ್ಯದೆಲೆ, ಒಂದು ಸೇರು ಹೊಂಗೆಚಕ್ಕೆ, ಒಂದು ಸೇರು ಲೋಳೆಸರ/ಲೋಕಸರ, ಒಂದು ಸೇರು ಸಾಂಬಾರ್(ಸಣ್ಣ) ಈರುಳ್ಳಿ ಮತ್ತು ಒಂದೂವರೆ ಸೇರು ಸತ್ವರಿ(ಒಂದು ಬಗೆಯ ಗಿಡಮೂಲಿಕೆ) ಬೇರು. ತಯಾರಿಸುವ ವಿಧಾನ : ಮೇಲೆ ಹೆಸರಿಸಿರುವ ಎಲ್ಲ ವಸ್ತುಗಳನ್ನೂ ಅರೆದು/ಜಜ್ಜಿ ಒಂದು ಬಕೆಟ್ ಅಕ್ಕಿ ತೊಳೆದ ನೀರಿನಲ್ಲಿ ನೆನೆಹಾಕಿ ಹಿಂಡಿದ ರಸವನ್ನು ಪಾತ್ರೆಯಲ್ಲಿ ಹಾಕಿ ನೀರು ಸಾಕಷ್ಟು ಕಡಿಮೆ ಆಗುವವರೆಗೆ ಚೆನ್ನಾಗಿ ಕುದಿಸಿ ಮೇಲೆ ತೇಲುವ ಎಣ್ಣೆಯ (ತೈಲದ) ಅಂಶವನ್ನು ಬಸಿದು ಸೀಸೆ/ಮಡಕೆಗಳಲ್ಲಿ ಶೇಖರಿಸಿ ಗಾಯ, ಹುಣ್ಣು, ಮೂಲವ್ಯಾಧಿ, ಕೀಲುನೋವು, ಚರ್ಮರೋಗಗಳಿಗೆ, ರೋಗಪೀಡಿತ ಜಾಗಗಳಿಗೆ ಲೇಪಿಸಿದರೆ ಗುಣಮುಖವಾಗುತ್ತದೆ. ತಯಾರಿಸುವ ವಿಧಾನ, ಬಳಸುವ ವಸ್ತುಗಳ ಪ್ರಮಾಣದಲ್ಲಿ ತುಂಬಾ ಜಾಗರೂಕತೆಯನ್ನು ವಹಿಸಬೇಕು.

## ಕೆಲವು ಔಷಧಿಯುಕ್ತ ಗಿಡಮೂಲಿಕೆಗಳ ಉಪಯೋಗ

### ಕಾಡು ಮೆಣಸಿನ ಗಿಡದ ಬೇರು :

ಹೊಟ್ಟೆ ನೋವಿಗೆ ದಿವ್ಯೌಷಧಿ. ಅಂಟುವಾಳದ ಕಾಯಿ, ಗಂಟುಸೀಗೆಕಾಯಿ ಮತ್ತು ಅಂಚಿಗೆಡ್ಡೆಗಳು ಗಂಟಲುನೋವು ಅಥವಾ ಮೆಟರೆಗಟ್ಟು ಬಂದಿದ್ದರೆ ಅದಕ್ಕೆ ಒಳ್ಳೆಯ ಔಷಧಿಗಳಾಗಬಲ್ಲವು.

**ಈಶ್ವರಿ ಬೇರು :**

ಬಡಗದ್ದ ಮತ್ತು ಗಂಟಲು ನೋವಿಗೆ ಒಳ್ಳೆಯ ಔಷಧಿ. ಕಾಡುಬೆಕ್ಕಿನ ಪುನುಗನ್ನು ಅರಿಶಿನ ಹಚ್ಚಿ ಇಟ್ಟುಕೊಂಡರೆ ಕಣ್ಣಿನ ಖಾಯಿಲೆಯಾದ ಅರುಸ್ಡಿ (ಅರ್ಸ್ದಿ)ಗೆ ಒಳ್ಳೆಯ ಔಷಧಿಯಾಗುತ್ತದೆ.

**ತೊಳಚಿಮಾರಿಗೆಡ್ಡೆ :**

ಇದರ ಎಲೆಗಳನ್ನು ಕಿತ್ತುಕೊಂಡು ನೊಣದ ಜಾತಿಯ ತೊಳಚಿಯ ಜೊತೆಯಲ್ಲಿ ಮುದುರಿಡಿದುಕೊಂಡರೆ ತೊಳಚಿಗಳು ಸಾಯುತ್ತವೆ. ಹಸುಗಳು ಇರುವ ಕೊಟ್ಟಿಗೆಯಲ್ಲಿ ಗೆಡ್ಡೆಯ ಹೊಗೆ ಹಾಕಿದರೆ ಯಾವುದೇ ಕ್ರಿಮಿ-ಕೀಟಗಳು ಬರುವುದಿಲ್ಲ ಬಂದರೆ ನಾಶವಾಗುತ್ತವೆ.

**ಏನುಮಾರಿಗೆಡ್ಡೆ :**

ತಲೆಯಲ್ಲಿ ಬರುವ ಹೇನುಗಳನ್ನು ನಾಶಮಾಡಲು ಸಹಾಯಕಾರಿಯಾಗುತ್ತದೆ.

**ಮಂಡಲದ ಹಾವಿನ ಗೆಡ್ಡೆ :**

ಮಂಡಲದಹಾವು ಕಡಿದರೆ ಈ ಗೆಡ್ಡೆಯನ್ನು ತಂದು ಅರೆದು ಕಡಿದ ಜಾಗಕ್ಕೆ ಹಾಕಿದರೆ ವಾಸಿಯಾಗುತ್ತದೆ.

**ಹುಚ್ಚು ಮೆಗಟೆ ಗೆಡ್ಡೆ :**

ಹಸುವಿಗೆ ಮತಗಾ(ದೊಡ್ಡನಾಯಿ, ಸೀಳುನಾಯಿ ಅಥವಾ ಹುಲು) ಕಡಿದರೆ ಇದನ್ನು ಬೇಯಿಸಿ ಶಾಖ ಕೊಟ್ಟರೆ ವಾಸಿಯಾಗುತ್ತದೆಯಂತೆ.

**ರಜಮಂಡಲದ ಮರದ ಹಾಲು :**

ಅದರದೇ ಮುಳ್ಳನ್ನು ಕಿತ್ತು ಅದೇ ಮರದ ಬುಡಕ್ಕೆ ಚುಚ್ಚಿದರೆ ಹಾಲು ಬರುತ್ತದೆ. ಗಾಯಗಳಿಗೆ ಆ ಹಾಲು ಹಚ್ಚಿದರೆ ವಾಸಿಯಾಗುತ್ತದೆ. ಹಾಗೂ ಮನುಷ್ಯನ ಜೀವಕ್ಕೆ ಉಷ್ಣವಾದಾಗ ಅದರ ಚಕ್ಕೆಯನ್ನು ಒಣಗಿಸಿ ಪುಡಿ ಮಾಡಿ ಹಾಲಿನಲ್ಲಿ ಕುಡಿಸಿದರೆ ಉಷ್ಣ ಕಡಿಮೆಯಾಗುತ್ತದೆಯಂತೆ.

**ಮಾಗಳಿ ಬೇರು ಮತ್ತು ನೆಲ್ಲಿಕಾಯಿ :**

ತಿನ್ನಲು, ಉಪ್ಪಿನಕಾಯಿ ಹಾಕಲು ಬಹಳ ಒಳ್ಳೆಯದು.

**ಬಾವುನ ಮರದ ಚೆಕ್ಕೆ :**

ಕರುಗಳಿಗೆ ಬರುವ ಖಾಯಿಲೆಗಳಿಗೆ ಒಳ್ಳೆಯ ಔಷಧಿ.

**ಮಗ್ಗೆರೆಕಾಯಿ :**

ಹಸುಗಳಿಗೆ ಬರುವ ವಿವಿಧ ಬಗೆಯ ಸೆಲೆಗಳಿಗೆ ಒಳ್ಳೆಯ ಔಷಧಿ. ಮಕ್ಕಳ ಉಚ್ಛೆಯಲ್ಲಿ ಏಳು ಕಾಯಿಗಳನ್ನು ಜಜ್ಜಿ ಪುಡಿ ಮಾಡಿ, ಕಲಸಿ ಕುಡಿಸಿದರೆ ಹೋಗಿಬಿಡುತ್ತದೆಯಂತೆ.

**ಇಂಗ್ಲೀಕನ ಚೆಕ್ಕೆ :**

ಚೆನ್ನಾಗಿ ಪುಡಿಮಾಡಿ ಮರಳು ಮಿಶ್ರಣಮಾಡಿ ಮಡುಗಳಿಗೆ ಎರಚಿದರೆ ಮೀನುಗಳು ಸೊಕ್ಕಿ ತೇಲುತ್ತವೆ. (ಸಾಯುವುದಿಲ್ಲ, ಮೂರ್ಛೆ ಹೋಗಿರುತ್ತವೆ.) ಆ ಮೂರ್ಛಾವಸ್ಥೆಯಲ್ಲಿರುವ ಮೀನುಗಳನ್ನು ಹಿಡಿದು ಆಹಾರಕ್ಕೆ ಬಳಸುತ್ತಾರೆ.

**ಕರಪಾಲದ ಚೆಕ್ಕೆ :**

ಉಳುಕು ಮತ್ತು ನೋವುಗಳಿಗೆ ದಿವ್ಯೌಷಧಿ. ಚೆನ್ನಾಗಿ ಪುಡಿಮಾಡಿ ಬಿಸಿನೀರಿನಲ್ಲಿ ಮಳ್ಳಿಸಿ (ಕುದಿಸಿ) ಹಾಕಿದರೆ ಉಳುಕು ಅಥವಾ ಹಳೆಯ ನೋವುಗಳು ಉಪಶಮನವಾಗುತ್ತವೆ.

**ತಪಾಲದ ಚೆಕ್ಕೆ ಮತ್ತು ಕೆಮ್ಮಣ್ಣು :**

ಇವುಗಳ ಮಿಶ್ರಣಕ್ಕೆ ನೀರನ್ನು ಸೇರಿಸಿ ಚೆನ್ನಾಗಿ ಕುದಿಸಿ ಗಟ್ಟಿಯಾದ ಮೇಲೆ ಉಳುಕಿರುವ ಕೀಲುಗಳಿಗೆ ಬಿದಿರು ದೆಬ್ಬೆಗಳನ್ನಿಟ್ಟು ಬಟ್ಟೆಗೆ ಸೇರಿಸಿ ಬಿಗಿದು ಕಟ್ಟಿದರೆ ವಾಸಿಯಾಗುತ್ತದೆ. ಹಸು, ಕೋಳಿ, ಎಮ್ಮೆ ಮತ್ತು ಮನುಷ್ಯರಿಗೆ ಎಲ್ಲರಿಗೂ ಈ ಚಿಕಿತ್ಸೆಯನ್ನು ಮಾಡಬಹುದು.

**ಕೋಳಿಕಾಲು ಸೊಪ್ಪು :**

ಒತ್ತಲೆನೋವಿಗೆ ಒಳ್ಳೆಯ ಔಷಧ, ಮೆಣಸು, ಬೆಳ್ಳುಳ್ಳಿ, ಉಪ್ಪು ಚೆನ್ನಾಗಿ ಹಿಸುಕಿ (ಇಚುಕಿ) ಕಿವಿಗೆ ಬಿಟ್ಟರೆ ಒತ್ತಲೆನೋವಿನಿಂದ ಮುಕ್ತಿ ಪಡೆಯಬಹುದು. ಹಾಗೆಯೇ ಪಿತ್ತವಾಗಿದ್ದರೂ ಇದು ಒಳ್ಳೆಯ ಔಷಧಿ. ವಾಯು ಹಿಡಿದವರು ಅಂದರೆ ಕೀಲುಗಳು ಹಿಡಿದುಕೊಂಡು ನಡೆದಾಡುವುದು ಕಷ್ಟವಾಗಿರುತ್ತದೆ. ಅಂಥವರು ಕೋಳಿಕಾಲು ಸೊಪ್ಪಿನ ಮಸೊಪ್ಪು ಮಾಡಿ ಊಟ ಮಾಡಿದರೆ ವಾಸಿಯಾಗುತ್ತದೆ ಎನ್ನುತ್ತಾರೆ.

**ಚಪ್ಪರ ಬದನೇ ಸೊಪ್ಪು :**

ಉಗುರು ಕಣ್ಣಿನಲ್ಲಿ ಆಗುವ ಅರಪ ಎಂಬ ಕೀವು ತುಂಬಿಕೊಂಡು ಬಹಳ ಬಾಧೆ ಕೊಡುವ ರೋಗಕ್ಕೆ ಒಳ್ಳೆಯ ಔಷಧ. ಒಂದಿಷ್ಟು ಸೊಪ್ಪು, ಅರಿಸಿನ, ಹಸುವಿನ ಬೆಣ್ಣೆ ಇಷ್ಟನ್ನೂ ಚೆನ್ನಾಗಿ ಅರೆದು ಅರಪ ಆಗಿರುವ ಭಾಗಕ್ಕೆ ಕಟ್ಟಿಬಿಡುವುದು. ವಾಸಿಯಾಗುವ ತನಕ ಪ್ರತೀ ದಿನ ಸ್ವಚ್ಛಗೊಳಿಸಿ ಬದಲಾಯಿಸುತ್ತಿರಬೇಕು.

**ದತ್ತೂರಿ ಗಿಡದ ಹಾಲು ಮತ್ತು ಕಾಯಿ :**

ಕುರುವಾಗಿದ್ದರೆ ದತ್ತೂರಿ ಕಾಯಿಯನ್ನು ಸುಟ್ಟು ಒಳಗಿರುವ ದುದ್ದೆ(ತಿರುಳು)ಯನ್ನು ಕುರುವಿನ ಮೇಲೆ ಕಟ್ಟಿದರೆ, ಕುರು ಒಡೆದು ನಂತರ ಮಾಯುತ್ತದೆ.(ವಾಸಿಯಾಗುತ್ತದೆ).

**ಹೊಂಗೆಪಟ್ಟೆ(ಚೆಕ್ಕೆ), ನೇರಳೆ ಪಟ್ಟೆ(ಚೆಕ್ಕೆ) :**

ಎರಡನ್ನೂ ಸೇರಿಸಿ ಚೆನ್ನಾಗಿ ಜಜ್ಜಿ ಬರೀ (ಖಾಲಿ) ಹೊಟ್ಟೆಯಲ್ಲಿ ಕುಡಿದರೆ ಹೊಟ್ಟೆ ಕಳತ (ಭೇದಿ) ಗುಣವಾಗುತ್ತದೆ.

ಮೇಲ್ಕಂಡ ಎಲ್ಲಾ ಉತ್ಪಾದನಾ ಸಾಮಗ್ರಿಗಳು ಇರುಳಗರ ಜೀವನ ನಿರ್ವಹಣೆಗೆ ಅನುವು ಮಾಡಿ ಕೊಟ್ಟಿದೆ.

## ಹಕ್ಕಿಪಿಕ್ಕಿಗಳಲ್ಲಿ ಉತ್ಪಾದನಾ ಚಟುವಟಿಕೆಗಳು :

**ಬೇಟೆ :**

ಪ್ರಾಣಿ ಅಥವಾ ಪಕ್ಷಿಯ ಬೇಟೆಗಳಲ್ಲಿ ಹಕ್ಕಿಪಿಕ್ಕಿಯರು ಎತ್ತಿದ ಕೈ. 'ಸಿಕ್ಕರೆ ಶಿಕಾರಿ... ಎಂಬ ಗಾದೆಯನ್ನು ಅವರು ಸುಳ್ಳು ಮಾಡುತ್ತಿರುತ್ತಾರೆ. ಅವರು ಎಷ್ಟು ಒಳ್ಳೆಯ ಗುರಿಯನ್ನು ಹೊಂದಿರುತ್ತಾರೆಂದರೆ, ಬೇಟೆಗೆ ಬಲಿಯಾಗ ಬೇಕಿರುವ ಯಾವುದೇ ಜೀವಿಯೂ ಅಷ್ಟು ಸುಲಭವಾಗಿ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಏಕೆಂದರೆ ಹಕ್ಕಿಪಿಕ್ಕಿಯರು ಪ್ರಾಣಿ, ಪಕ್ಷಿಗಳಿಗಿಂತ ಸೂಕ್ಷ್ಮವಾದ ಮನಸ್ಸಿನವರು. ಒಂದು ಹಕ್ಕಿ ಮರದ ಮೇಲೆ ಕುಳಿತಿದೆಯೆಂದು ತಿಳಿದರೆ ಅದನ್ನು ಯಾವ ರೀತಿ ಹೊಡಯುವುದರಿಂದ ನನಗೆ ದಕ್ಕುತ್ತದೆಂಬುದನ್ನು ಒಬ್ಬ ಬೇಟೆಗಾರ ತಕ್ಷಣವೇ ಆಲೋಚಿಸುತ್ತಾನೆ ಮತ್ತು ಅಷ್ಟೇ ಬೇಗ ಕ್ರಿಯಾಶೀಲನಾಗುತ್ತಾನೆ. ಬೇಟೆಯ ಟೆಕ್ನಿಕ್‌ಗಳನ್ನು ಅವರು ಸುಲಭವಾಗಿ ಯಾರಿಗೂ ಹೇಳಲು ಇಷ್ಟಪಡುವುದಿಲ್ಲ. ಅಲ್ಲದೆ ಒಬ್ಬ ಮನುಷ್ಯನ ಬಗ್ಗೆ ನಂಬಿಕೆ ಬರದಿದ್ದರೆ ಮಾತನ್ನೇ ಆಡುವುದಿಲ್ಲ. ಅವರು ತಮ್ಮ ಜನದೊಂದಿಗೆ ಅಷ್ಟೆಲ್ಲ ಜೋರಾಗಿ ಮಾತನಾಡುತ್ತಾರಾದರೂ ಬೇಟೆಯ ಸಮಯದಲ್ಲಿ ಬಹಳ ಮೌನಿಗಳಾಗಿರುತ್ತಾರೆ. ಕೈಲಿ ಪ್ರಾಣಿ ಇಲ್ಲವೆ ಪಕ್ಷಿ ಹಿಡಿಯುವ ಬೇಟೆಯ ಸಾಮಗ್ರಿ ಇರುತ್ತದೆ, ಕಾಲುಗಳಿಗೆ ಚಪ್ಪಲಿ ಹಾಕುವುದಿಲ್ಲ. ಕಾಲು, ಕೈ, ಕಣ್ಣುಗಳನ್ನು ಕಾಡಿನ ಗಿಡ, ಮುಳ್ಳುಗಳಿಂದ ರಕ್ಷಿಸಿಕೊಳ್ಳಬೇಕಾಗುತ್ತದೆ. ಅವರ ಬೇಟೆಯನ್ನು ಮೂರು ವಿಭಾಗ ಮಾಡಬಹುದು.

೧. ಹಕ್ಕಿಗಳ ಬೇಟೆ

೨. ಪ್ರಾಣಿಗಳ ಬೇಟೆ

೩. ಜಲಜೀವಿಗಳ ಬೇಟೆ

## ಹಕ್ಕಿಗಳ ಬೇಟೆ :

ಹಕ್ಕಿಗಳನ್ನು ಹಿಡಿಯುವುದರಿಂದಲೇ ಅವರಿಗೆ 'ಹಕ್ಕಿಪಿಕ್ಕಿ' ಎಂಬ ವೃತ್ತಿನಾಮವೇ ಸಮುದಾಯ, ಜಾತಿಯ ಹೆಸರನ್ನು ಪಡೆದುಕೊಂಡಿದೆ. ಹಕ್ಕಿಗಳನ್ನು ಹಿಡಿಯುವುದರಲ್ಲಿ ಇವರನ್ನು ಮೀರಿಸುವವರು ಯಾರು ಇಲ್ಲ. ಕಾರಣ ಇವರು ಹಕ್ಕಿಗಳಿಗಿಂತ ಬುದ್ಧಿವಂತರು. ಸಾಮಾನ್ಯವಾಗಿ ಹಕ್ಕಿಗಳ ಬೇಟೆಯನ್ನು ಗಂಡಸರು ಮಾತ್ರ ಮಾಡುತ್ತಾರೆ. ಇವರ ಬೇಟೆ ವ್ಯಾಪಾರಕ್ಕಾಗಿ ಆಗಿದ್ದರೆ ಬಳಸುವ ಬೇಟೆಯ ಉಪಕರಣಗಳು ಬೇರೆಯಾಗಿರುತ್ತವೆ. ತಮ್ಮ ಊಟಕ್ಕೆ ಮಾತ್ರವಾಗಿದ್ದರೆ ಉಪಕರಣ ಬೇರೆಯಾಗಿರುತ್ತದೆ. ಇವರು ಬಹಳ ಒಳ್ಳೆಯ ಗುರಿಕಾರರು. ಒಮ್ಮೆ ಒಂದು ಹಕ್ಕಿಗೆ ಗುರಿ ಇಟ್ಟರೆ ಮುಗಿಯಿತು ಅದರ ಕತೆ. ಗಂಡಸರು, ಹುಡುಗರು ಚಾಟ್‌ಬಿಲ್ ಹಿಡಿದು ಹೋದರೆ ಒಂದೆರಡು ಗಂಟೆಗಳಲ್ಲಿ ಒಂದು ಚೀಲದಷ್ಟು ಬಗೆಬಗೆಯ ಹಕ್ಕಿಗಳನ್ನು ಹೊಡೆದು ತರುತ್ತಾರೆ. ಮಾರಾಟಕ್ಕಾಗಿ ಬೇಕಾದಾಗ ಹಕ್ಕಿಗಳನ್ನು ಜೀವಂತ ಹಿಡಿದು ತರುತ್ತಾರೆ. ಕುರುಚಲು ಕಾಡಿನಲ್ಲಿಯೇ ಅವರ ಹಕ್ಕಿಗಳ ಬೇಟೆ ಹೆಚ್ಚು. ಅಭಯಾರಣ್ಯದಲ್ಲಿ ಹೇಗೆ ಬೇಟೆಯಾಡಬೇಕು ಮತ್ತು ಯಾವ ಕಾಲಮಾನದಲ್ಲಿ ಯಾವ ಯಾವ ಪಕ್ಷಿಗಳು ಹೇಗೆ ಬದುಕುತ್ತವೆ; ಅವುಗಳ ಜೀವನ ಪದ್ಧತಿ ಹೇಗೆ ಎಂಬ ಪಕ್ಷಿ ಜೀವಶಾಸ್ತ್ರದ ಅರಿವು ಅವರಿಗಿರುತ್ತದೆ. ಮೊಟ್ಟೆಯ ಕಾಲದಲ್ಲಿ, ಬೆದೆಯ ಕಾಲದಲ್ಲಿ ಹೇಗೇಗಿರುತ್ತವೆ ಎಂಬ ಎಲ್ಲ ಅಂಶಗಳನ್ನು ಬಲ್ಲವರಾಗಿರುತ್ತಾರೆ. ಅವರು ಬೇಟೆಗೆ ಯಾರದೇ ಸಹಾಯವನ್ನೂ ಪಡೆಯುವುದಿಲ್ಲ. ಒಬ್ಬೊಬ್ಬರೆ ಬೇಟೆಯಾಡುತ್ತಾರೆ. ಹಕ್ಕಿಗಳ ಬೇಟೆಗೆ ಅಗತ್ಯವಾಗಿ ಬೇಕಾಗಿರುವುದು ತುಂಬಾ ತಾಳ್ಮೆ ಮತ್ತು ಸ್ವಬುದ್ಧಿ. ಸ್ವಲ್ಪ ಹೆಚ್ಚು ಕಡಿಮೆಯಾದರೂ ಬೇಟೆ ಹಾಳಾಗುವ ಸಾಧ್ಯತೆಗಳೇ ಹೆಚ್ಚಾಗಿರುತ್ತವೆ. ಅವರು ಹಕ್ಕಿ ಹಿಡಿಯಲು ಉಪಕರಣ, ಶಬ್ಧ ಮತ್ತು ಹಸುಗಳನ್ನು ಅವಶ್ಯಕವಾಗಿ ಬಳಸುತ್ತಾರೆ. ಒಟ್ಟಿಗೆ ಇಲ್ಲವೆ ಕೆಲವನ್ನಾದರೂ ಬಳಸಬಹುದು.

ಮೊದಲನೆಯ ತಂತ್ರವೆಂದರೆ, ಎತ್ತು ಅಥವಾ ಹಸುವನ್ನು ಉಪಯೋಗಿಸಿ ಹಕ್ಕಿಗಳನ್ನು ಹಿಡಿಯುವುದು. ಇದಕ್ಕಾಗಿಯೇ ಪ್ರಾಣಿಯನ್ನು ಚೆನ್ನಾಗಿ ಪಳಗಿಸಿರುತ್ತಾರೆ. ಅದರ ಕತ್ತಿಗೆ ಒಂದು ಹಗ್ಗವನ್ನು ಕಟ್ಟಿರುತ್ತಾರೆ. ಅದನ್ನು ಬೇಟೆಗಾರ ಹೇಗೆ ಎಳೆಯುವುದು ಬಿಡುವುದು ಮಾಡುತ್ತಾನೆ ಮತ್ತು ಕೈಯಿಂದ ಅದರ ಮೈಯ್ಯನ್ನು ಹೇಗೆ ಮಿಸುಕುತ್ತಾನೆ ಹಾಗೆಲ್ಲ ಅದು ಮುಂದುವರಿಯುತ್ತದೆ. ಇಲ್ಲವೆ ನಿಲ್ಲುತ್ತದೆ. ಬೇಟೆಗಾರ ಬರಿಮೈಲಿ ಒಂದು ಕಚ್ಚೆಯನ್ನು ಹಾಕಿರುತ್ತಾನೆ. ಮತ್ತು ತಲೆಗೆ ಒಂದು ಚಪ್ಪಟೆಯಾಕಾರದ ಬಟ್ಟೆ ಮತ್ತು ಕಡ್ಡಿಗಳಿಂದ ಮಧ್ಯೆ ಉಬ್ಬಿಸುವ ಒಂದು ಅಗಲ ಟೋಪಿ ಹಾಕಿರುತ್ತಾನೆ. ಬೇಟೆಗೆ ಮೊದಲು ದಾದಾಜಿ ಹೆಸರು ಹೇಳಿ ಟೋಪಿ ಹಾಕಿ ಬೇಟೆಗೆ ತೊಡಗುತ್ತಾನೆ. ಇದರಿಂದ ಹಕ್ಕಿಗಳಿಗೆ ಮನುಷ್ಯನ ತಲೆ ಕಾಣುವುದಿಲ್ಲ. ಅಲ್ಲದೆ ಅವನನ್ನು ಗಮನಿಸುವುದೂ ಇಲ್ಲ. ಅಪಶಕುನಗಳಾದರೆ ದಿಕ್ಕನ್ನು ಬದಲಿಸುವುದುಂಟು. ಹಸುವಿನ ಜೊತೆ ಹೋಗ ಹೋಗುತ್ತಲೇ ಹಕ್ಕಿಗಳು ಕಂಡರೆ ಹೆಗಲಿನಲ್ಲಿರುವ ಉರುಲನ್ನಾಗಲಿ. ತಕ್ಷಣವೇ ಹಾಕಿಬಿಡುತ್ತಾರೆ. ಬರೀ ಪ್ರಾಣಿಯನ್ನಷ್ಟೇ ಗಮನಿಸುತ್ತಿದ್ದ ಹಕ್ಕಿ ತನಗೆ ಹಾಕಿರುವ ಉರುಲನ್ನು ಗಮನಿಸುವುದಿಲ್ಲ. ಇಲ್ಲವೆ ಹಸುವಿನ ಹಿಂದೆ ಇದ್ದ ಬೇಟೆಗಾರ

ಹಕ್ಕಿಯನ್ನು ಬಲೆ, ಮರಾಸಿ ಕಡೆ ಓಡಿಸುವ ಸಾಧ್ಯತೆಯೂ ಇರುತ್ತದೆ. ಕೆಲವು ಬಾರಿ ಅವುಗಳ ಪಕ್ಕದಲ್ಲೆ ಇದ್ದೂ ಕೈಯಲ್ಲೆ ಹಕ್ಕಿಗಳನ್ನು ಹಿಡಿದು ಕಾಲು ಕಟ್ಟುವುದುಂಟು.

ಎರಡನೆಯ ರೀತಿಯೆಂದರೆ, ಶಬ್ಧದ ಮೂಲಕ ಹಕ್ಕಿಗಳನ್ನು ಹಿಡಿಯುವುದು. ಖಂದಾರು ಇಲ್ಲವೆ ಕಾಲು ಉರುಲನ್ನು ಒಂದು ಕಡೆ ಹೂಡಿ ಗಿಡದ ಮರೆಯಲ್ಲಿ ಇಲ್ಲವೆ ಪೊದೆಯ ಮರೆಯಲ್ಲಿ ಬೆನ್ನು ಮಾಡಿ ತನ್ನ ಉಪಕರಣ ನೋಡುತ್ತ, ತಲೆ ಕಾಣದಂತೆ ಚರ್ಮದ, ಬಟ್ಟೆಯ ಉದ್ದನೆ ಟೋಪಿ ಹಾಕಿ ಆಯಾ ಹಕ್ಕಿಗಳ ರಿತಿ ತಾನು ಒಯ್ದಿರುವ ವೀಳದೆಲೆಯಿಂದ, ಇಲ್ಲವೆ ಇತೆರ ಹಸಿರು ಎಲೆಗಳಿಂದ ಶಬ್ಧ ಮಾಡುವುದು, ನವಿಲು, ಕಾಡುಕೋಳಿಗಳು, ಗೌಜ ಹಕ್ಕಿಗಳ ರೀತಿ ಕೂಗುವುದರಿಂದ ಹಕ್ಕಿಗಳು ತಮ್ಮ ಸಂಗಾತಿಗಳು ಕೂಗುತ್ತಿವೆ ಎಂದು ತಿಳಿದು ಓಡಿ ಹಾರಿಬರುತ್ತವೆ. ಬಂದು ಬೇಟೆಗೆ ಬಲಿಯಾಗುತ್ತವೆ. ಬೇಟೆಗಳಲ್ಲಿ ಕಾಡುಕೋಳಿ ಬೇಟೆ ತುಂಬಾ ಕಷ್ಟವೆಂದು ಹೇಳುತ್ತಾರೆ. ಕಾಡಿನಲ್ಲಿ ಕೋಳಿ ಹಾರಿಬಿಟ್ಟರೆ, ಕಷ್ಟ ಆಗುತ್ತದೆ. ಅದರ ಕೂಗಿನವರೆಗೂ ಓಡಬೇಕಾಗುತ್ತದೆ. ಆ ಕೂಗು ಕೇಳಿ ಹೋಗದಿದ್ದರೆ ಬೇರೆ ಸಂದರ್ಭದಲ್ಲಿ ಅದರ ಬಳಿಗೆ ಓಡಲಾಗುವುದಿಲ್ಲ. ಏಕೆಂದರೆ, ಅದು ಎಲ್ಲಿರುತ್ತದೆಂಬುದನ್ನು ತಿಳಿಯುವುದೇ ಕಷ್ಟವಾಗುತ್ತದೆ. ಅದು ಕೂಗಿ ಸುಮ್ಮನಾಗುವ ಹೊತ್ತಿಗೆ ಓಡಿ ಹೋಗಿ ಬಲೆ ಹಾಕಿ ಅರುಗು ಆಗಬೇಕಾಗುತ್ತದೆ.

ಹಕ್ಕಿಪಿಕ್ಕಿಯರ ಮುಖ್ಯವಾದ ಬೇಟೆಯ ಮೂಲವೆಂದರೆ ಗೌಜಹಕ್ಕಿಗಳು. ಇವು ಅವರಿಗೆ ಉತ್ತಮ ಆದಾಯವನ್ನು ತಮದುಕೊಡುತ್ತವೆ. ಇವು ಹಿಂಡು ಹಿಂಡುಗಟ್ಟಲೆ ಬದುಕುವುದರಿಂದ ಹಿಂಡುಗಟ್ಟಲೆ ಬಲಿಯಾಗುತ್ತವೆ. ಅಲ್ಲದೆ ಹದ್ದುಗಳನ್ನು ಸಹ ಅವು ಕುಳಿತುಕೊಳ್ಳುವ ಜಾಗಕ್ಕೆ ಸರಿಯಾಗಿ ಕಾಲು ಉರುಲು ಹಾಕಿ ಹಿಡಿಯುತ್ತಾರೆ.

**ಪ್ರಾಣಿಗಳ ಬೇಟೆ :**

ಹಕ್ಕಿಪಿಕ್ಕಿಯರು ತಮ್ಮ ಆಹಾರಕ್ಕೆ ಅನುಕೂಲವಾಗುವಂಥ ಮತ್ತು ಚರ್ಮದಿಂದ ಹಣ ಸಿಗುವಂಥ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಅವರ ಮುಖ್ಯ ಪ್ರಾಣಿಗಳೆಂದರೆ ನರಿ ಮತ್ತು ಹಂದಿಗಳು. ಸಾಮಾನ್ಯವಾಗಿ ಈಗ ಅವರಿಗೆ ಸಿಗುವ ಎರಡು ಪ್ರಮುಖ ಪ್ರಾಣಿಗಳೆಂದರೆ ಇವೇ. ಅಲ್ಲದೆ ಮೊಲಗಳನ್ನು ರಾತ್ರಿ ಹೊತ್ತು ಕೈಬಲೆ ಮತ್ತು ಬ್ಯಾಟರಿಗಳ ಸಹಾಯದಿಂದ ಹಿಡಿಯುತ್ತಾರೆ. ಬ್ಯಾಟರಿಯ ಬೆಳಕನ್ನು ನೋಡುತ್ತ ಮೊಲ, ಜಿಂಕೆ ಮುಂತಾದ ಪ್ರಾಣಿಗಳು ಅತ್ತಿತ್ತ ಹೋಗದೆ ನಿಂತು ಬಿಡುತ್ತವೆ. ಆಗ ಕೈಬಲೆಯನ್ನು ದಬ್ಬಾಕುತ್ತಾರೆ.

**ಜಲಜೀವಿಗಳ ಬೇಟೆ :**

ನೀರಿನಲ್ಲಿರುವ ಹಕ್ಕಿಗಳಿಂದಿಡಿದು ಮೀನು, ಮೊಸಳೆ, ಆಮೆ, ಏಡಿಗಳವರೆಗೆ ಬಗೆಬಗೆಯ ಜೀವಿಗಳನ್ನು ಹಕ್ಕಿಪಿಕ್ಕಿಯರು ಬೇಟೆಯಾಡುತ್ತಾರೆ. (ಹೆಚ್ಚಿನ ವಿವರಗಳಿಗೆ ನೋಡಿ-ಆಹಾರ ಪದ್ಧತಿಯಲ್ಲಿ ಹಕ್ಕಿಪಿಕ್ಕಿಯರು ತಿನ್ನುವ ಎಲ್ಲಾ ಬಗೆಯ ಮಾಂಸಾಹಾರ ಬಹುತೇಕ ಬೇಟೆಯಾಡಿಯೇ ತಿನ್ನುತ್ತಾರೆ)

## ಬೇಟೆಗೆ ಬಳಸುವ ಉಪಕರಣಗಳು

### ದಂಗ್ ದರಾನಿ ಮರಾಶಿ (ಕಾಲು ಉರುಲು) :

ಇದರಲ್ಲಿ ಕಬ್ಬಿಣದ ಮೊಳೆಗಳು, ಟಂಗ್‌ಸ್ಟನ್ ವೈರಿನ ಕೊಕ್ಕೆಗಳು ಇರುತ್ತವೆ. ಇವು ಸರಗುಣಿಕೆಯೋಪಾದಿಯಲ್ಲಿರುವುದರಿಂದ ಪ್ರಾಣಿ, ಪಕ್ಷಿಗಳ ಕಾಲು ಸಿಕ್ಕಿ ಸ್ವಲ್ಪ ಎಳೆದರೂ ಸಾಕು ಬಿಗಿಯಾಗಿ ಬಂಧಿಸಿಬಿಡುತ್ತವೆ. ಬಹಳಷ್ಟು ಗುಣಿಕೆ ಇರುವುದನ್ನು ಪಕ್ಷಿ ಪ್ರಾಣಿಗಳಿಗೂ ಎರಡು ಇರುವುದನ್ನು ಮುಂಗಸಿ ಹಿಡಿಯಲೂ ಬಳಸುತ್ತಾರೆ. ನೆಲದ ಮೇಲೆ, ಮರದ ಟೊಂಗೆ ಮೇಲೆ, ಹಕ್ಕಿಗಳು ಓಡಾಡುವ ಕಡೆಗೆಲ್ಲ ಇಟ್ಟಿರುತ್ತಾರೆ. ಇದರಿಂದ ನರಿ, ಹದ್ದು, ನವಿಲು, ನೀರು ಕೊಕ್ಕರೆ, ಮೊಲ, ಹಾರುವ ಮತ್ತು ನೆಲದ ಮೇಲೆ ಓಡಾಡುವ ಪ್ರಾಣಿ ಪಕ್ಷಿಗಳ ಬೇಟೆಗಾಗಿ ಇದನ್ನು ಬಳಸುತ್ತಾರೆ. ಜಿಂಕೆ ಸಹ ಇದಕ್ಕೆ ಬೀಳುತ್ತವೆ. ಇದನ್ನು ಹಕ್ಕಿಪಿಕ್ಕಿಯರೇ ಮಾಡುತ್ತಾರೆ. ಇದರ ತಯಾರಿಗೆ ಖರ್ಚು ಕಡಿಮೆ.

### ಖಂದಾರು (ಗೌಜ ಹಕ್ಕಿ ಹಿಡಿಯುವ ಬಲೆ) :

ಇದನ್ನೂ ಸಹ ಅವರೇ ಮಾಡಿಕೊಳ್ಳುತ್ತಾರೆ. ಒಂದು ಪೆಟ್ಟಿಗೆಯ ರಿತಿ ಇದನ್ನು ಮಡಿಸಿ ಕಟ್ಟಿಕೊಂಡು ಹೆಗಲಿಗೆ ಹಾಕಿಕೊಂಡಿರುತ್ತಾರೆ. ಇದರಲ್ಲಿರುವ ಸಾಮಗ್ರಿಗಳೆಂದರೆ,

* ಶೇಲಿ – ಕೂದಲಿಂದ ಮಾಡಿದ ದಾರ

* ಖೂಟು – ಬಿದಿರಿನ ಕಡ್ಡಿ ಉದ್ದಕ್ಕೂ ಜಾಯಿಂಟ್ಸ್ ಮಧ್ಯೆ ಇರುತ್ತವೆ.

* ಖಾಡಿ – ಅಡ್ಡ ಇರುವ ಬಿದಿರಿನ ಕಡ್ಡಿ

* ಪಾಂದ್ – ನೈಲಾನ್ ದಾರ. ಬೇಟೆಯ ಕೊರಳು ಹಿಡಿಯಲು

* ಟಾಟಿ – ಕಡ್ಡಿಗಳ ಮುಚ್ಚುವ ಬಾಗಿಲು

ಇದರ ರಚನೆಗೆ ಮುಖ್ಯವಾಗಿ ಬೇಕಾಗಿರುವ ಸಾಮಗ್ರಿಗಳೆಂದರೆ, ಬಿದಿರು ಕಡ್ಡಿಗಳು ಮತ್ತು ಟಂಗೂಸ್‌ನ ನೈಲಾನ್ ದಾರ. ಒಂದೊಂದು ಬಿದಿರು ಕಡ್ಡಿ ೨ ಅಡಿಯಷ್ಟು ಉದ್ದ ಇರುತ್ತದೆ. ಒಂದು ಖೂಟ್‌ಗೆ ೧೦ ಮನೆಗಳಿರುತ್ತವೆ. ಇದರೊಳಗೆ ೫ ಮನೆಗಳು ಒಟ್ಟಿಗೆ ೨೫೦೦ ಮನೆಗಳಿರುತ್ತವೆ. ಹಕ್ಕಿಪಿಕ್ಕಿಯರು ಖೂಟನ್ನು ಎರಡು ಮಡಿಕೆಗಳಿಗೆ ಒಂದರಂತೆ ಲೆಕ್ಕ ಹಾಕುತ್ತಾರೆ. ನೈಲಾನ್ ದಾರಕ್ಕೆ ಸರಗುಣಿಕೆ ಇರುತ್ತದೆ. ಇದನ್ನು ಒಟ್ಟು ಮಾಡಿ ಒಂದು ಪೆಟ್ಟಿಗೆಯಂತೆ ಮಾಡಿ ದಾರದಿಂದ ಕಟ್ಟುತ್ತಾರೆ. ಪ್ರತಿಯೊಂದು ಖೂಟನ್ನು ಮನೆಗಳನ್ನಾಗಿ ಮಾಡಿ ಪ್ರತಿಯೊಂದು ಮನೆಯನ್ನೂ ಮನುಷ್ಯರ ಕೂದಲು ಸೇರಿಸಿ ಹೊಸೆದ ದಾರದಿಂದ ಕಟ್ಟಿದ ಎರಡೆಳೆಯ ದಾರದ ಮಧ್ಯದಲ್ಲಿ ನೈಲಾನ್ ಸರಗುಣಿಕೆಯನ್ನು ಕಾಣದಂತೆ ಸಿಗಿಸಿರುತ್ತಾರೆ. ಅಲ್ಲದೆ ಇದು ಹಕ್ಕಿಯ ಕತ್ತು ಒಳಗೆ ಹೋಗುವಂತೆ ಅನುಕೂಲವಾಗಿರುತ್ತದೆ. ಖಂದಾರು ಇರುವ ಕಡೆ

ಹಕ್ಕಿಗಳನ್ನು ಓಡಿಸಿಕೊಂಡು ಬರುವುದರಿಂದ, ಆ ಹಕ್ಕಿ ತನ್ನ ಚೆಂಡನ್ನು ಮುಂದೆ ಮಾಡಿಕೊಂಡು ಓಡಿ ಬರುತ್ತಿರುವಾಗ ಅದರ ಕುತ್ತಿಗೆ ಸರಿಗುಣಿಕೆಗೆ ಬಿಗಿದುಬಿಡುತ್ತದೆ. ಈ ಉಪಕರಣವನ್ನು ತಾವೇ ಚಾಕುವಿನಿಂದ ಹೆರೆದ ಕಡ್ಡಿಗಳಿಂದ ರಂಧ್ರ ಮಾಡಿ ಒಂದಕ್ಕೊಂದನ್ನು ಸಿಗಿಸಿ ತಯಾರುಮಾಡುತ್ತಾರೆ. ಇದರ ಅಳತೆ ಎರಡು ಬಗೆಯಲ್ಲಿ ಇರುತ್ತದೆ. ಕಾಡುಕೋಳಿ ಹಿಡಿಸುವುದಾದರೆ, ೧೨ ಅಂಗುಲ ಎತ್ತರ ೧೧/೨ ಅಡಿ ಅಗಲ ಮತ್ತು ೩೫ ರಿಂದ ೪೦ ಅಡಿ ಉದ್ದ ಇದ್ದು ಒಟ್ಟು ೨೦ ಗೂಟಗಳನ್ನು ಒಳಗೊಂಡಿರುತ್ತದೆ. ಪುರಲೆ ಹಕ್ಕಿಬಲೆಯಾದರೆ ೧೧/೨ ಅಡಿ ಎತ್ತರ, ೪ ಬೆರಳಷ್ಟು ಅಗಲ, ೧೪ ಅಡಿ ಉದ್ದವಿದ್ದು ೯ ಗೂಟಗಳನ್ನು ಒಳಗೊಂಡಿರುತ್ತದೆ.

ಇವು ಯಾವುದೇ ಹಕ್ಕಿಪಿಕ್ಕಿಯ ಗಂಡಸರು ಹೊಂದಿರುವ ಸಾಮಾನ್ಯವಾದ ಉಪಕರಣಗಳು. ಇವು ಅವರ ಅಲೆಮಾರಿ ಬದುಕಿನೊಂದಿಗೆ ಅನಿವಾರ್ಯವಾಗಿರುತ್ತವೆ. ಇವು ಹಗುರ ಮತ್ತು ಸಾಗಾಣಿಕೆಗೆ ಅನುಕೂಲವೂ ಮತ್ತು ಅಡಕವೂ ಆಗಿರುತ್ತದೆ. ಸೂಜಿ, ದಬ್ಬಳ, ಪಿನ್ನು, ಕಸ್ತೂರಿ, ಗೋರಂಜನ, ಕರಿಮಣಿ, ಹಾಲಮಣಿ, ನವುಲತುಪ್ಪ, ಉಡಿನತುಪ್ಪ, ರುದ್ರಾಕ್ಷಿ, ಸಣ್ಣರುದ್ರಾಕ್ಷಿ ಮುಂತಾದ ಸಾಮಗ್ರಿಗಳನ್ನು ಮಾರಾಟಮಾಡುತ್ತಾರೆ. ಕಸ್ತೂರಿ ಎಂಬುದು ಗಂಡಸರು ಬೇಟೆ ಮಾಡಿದ ಸಂದರ್ಭದಲ್ಲಿ ಕಸ್ತೂರಿ ಮೃಗದಿಂದ ತರುವುದು. ಇದು ನೇಪಾಳದ ಕಡೆ ಸಾಗುತ್ತದೆ. ಜೇನುತುಪ್ಪ, ಹುಲಿಉಗುರು, ಹದ್ದಿನ ಉಗುರು, ಹುಲಿಹಲ್ಲು, ಐದುಮುಖದ (ಪಂಚಮುಖ) ರುದ್ರಾಕ್ಷಿ, ಏಕಮುಖಿ ರುದ್ರಾಕ್ಷಿ ಇವು ಸಹ ನೇಪಾಳದ ಕಡೆ ಸಿಗುವ ಒಂದು ಬಗೆಯ ತೆಂಗಿನಕಾಯಿಯಲ್ಲಿ ಸಾಗುತ್ತವೆ. ಕಸ್ತೂರಿ ನೀರಿಗೆ ಹಾಕಿದರೆ, ದಾರದಂತೆ ಬಿಟ್ಟುಕೊಳ್ಳುತ್ತದೆ. ಇದು ಸುವಾಸನೆಯಿಂದ ಕೂಡಿರುತ್ತದೆ. ಹುಲಿಯ ಮೀಸೆ, ಸಣ್ಣ ಹುಲಿಯ ಉಗುರು, ಹುಲಿಯ ಚರ್ಬಿ ಹೆಂಗಸರು ತಯಾರಿಸುವ ಚೌಲಿ, ಅಲ್ಲದೆ ಅವರು ಮಕ್ಕಳಿಗಾಗಿ ಪೀಪಿ, ಪಿನ್ನು, ಏರ್‌ಪಿನ್ನ ಇವುಗಳನ್ನು ಕೊಂಡು ತಂದು ಮಾರಾಟಮಾಡುತ್ತಾರೆ. ಚೌಲಿಗಳನ್ನು ಡಜನ್‌ಗಟ್ಟಲೆ ಪಟ್ಟಣದ ಅಂಗಡಿಗಳಿಗೂ ಮಾರಾಟಮಾಡುತ್ತಾರೆ. ಒಂದಕ್ಕೆ ೩ ರೂಪಾಯಿನಿಂದ ೭ ರೂಪಾಯಿಯವರೆಗೆ ಹಣ ದೊರೆಯುತ್ತದೆ. ರುದ್ರಾಕ್ಷಿಗಳನ್ನು ೧ ಮುಖದಿಂದ ೨೧ ಮುಖದವುಗಳವರೆಗೆ ತಯಾರಿಸುತ್ತಾರೆ. ತ್ರಿಮೂರ್ತಿ–ಮೂರುಮುಖದ್ದು ಮತ್ತು ಗೌರಿಶಂಕರ–ಎರಡು ಮುಖದ್ದು. ಇವುಗಳಿಗೆ ಬಹಳ ಬೇಡಿಕೆ ಇದೆಯೆಂದು ಹೇಳುತ್ತಾರೆ. ರುದ್ರಾಕ್ಷಿಗಳನ್ನು ಮಥುರಾದಲ್ಲೂ, ಸಾಲಿಗ್ರಾಮಗಳನ್ನು ಹರಿದ್ವಾರದಲ್ಲೂ, ಬಲಮುರಿ ಶಂಖಗಳನ್ನು ಸಮುದ್ರದ ತೀರದಲ್ಲೂ ಸಂಗ್ರಹಿಸುತ್ತಾರೆ.

ಹಕ್ಕಿಪಿಕ್ಕಿಯರು ತಾವು ಕಡಿಮೆ ಬೆಲೆಯನ್ನು ಕೊಟ್ಟು ಸಾಮಗ್ರಿಗಳನ್ನು ಕೊಂಡು ಅವುಗಳನ್ನು ಹೊತ್ತುಕೊಂಡು ಅಡ್ಡಾಡುತ್ತ, ಅಧಿಕ ಬೆಲೆಗೆ ಮಾರಾಟಮಾಡಿ ಲಾಭವನ್ನು ಗಳಿಸುತ್ತಾರೆ.

**ನಾಗಮಣಿ :**

ಇದು ನೇಪಾಳದ ಕಡೆ ದೊರೆಯುವ ಒಂದು ಮರದ ಹೂವು. ಈ ಹೂವಿನಲ್ಲಿ ಸಾವಿರಾರು ತಲೆಗಳು ಒಟ್ಟಿಗೇ ಇದ್ದು ನಾಗರ ಹಾವಿನ ಹೆಡೆಯನ್ನು ಹೋಲುವಂತಿರುವುದರಿಂದ ಇದಕ್ಕೆ ನಾಗಮಣಿ ಎಂದು ಕರೆಯುತ್ತಾರೆ. ಇದಕ್ಕೆ ನಾಗರಹಾವಿನ ರೀತಿಯಲ್ಲೆ ಗಳಿಗೆ, ಹೆಡೆಯ ತುದಿ ಎಲ್ಲವೂ ಇರುತ್ತವೆ.

**ಹದ್ದಿನ ಚರ್ಮ:**

ಹಕ್ಕಿಪಿಕ್ಕಿಯರು ತಾವು ಬೇಟೆಯಾಡುವ ಹಕ್ಕಿಗಳಲ್ಲಿ ಹದ್ದು ಸಹ ಒಂದು. ಇದರ ಒಂದು ಚರ್ಮಕ್ಕೆ ೪೦ ರಿಂದ ೬೦ ರೂಪಾಯಿ ಆದಾಯವಿದೆ. ಇದರಿಂದ ಬಾಂಬೆಯಂಥ ಪಟ್ಟಣಗಳಲ್ಲಿ ಮುಖಕ್ಕೆ ಪೌಡರ್ ಹಚ್ಚಿಕೊಳ್ಳುವ ಬೆಂಡು, ಸಣ್ಣ ಮಕ್ಕಳ ಅಂಗಿ, ಟೋಪಿ ಮುಂತಾದವುಗಳನ್ನು ತಯಾರಿಸುತ್ತಾರೆ. ಎಂ ಜಿ.ಆರ್. ಹಾಕುತ್ತಿದ್ದ ಟೋಪಿ ಹದ್ದಿನ ಚರ್ಮದ್ದೆಂದು ಈ ಜನ ಹೇಳುತ್ತಾರೆ.

**ಬವಾಳಿ:**

ಗೋವಾ ಪಣಜಿ ಕಡೆ ಸಿಗುವ ಬವಾಳಿ ಗಿಡದ ಬೀಜಗಳನ್ನು ತಂದು ಚೆನ್ನಾಗಿ ಬೇಯಿಸಿ ಒಂದು ಚೀಲದಲ್ಲಿ ಹಾಕಿಕೊಂಡು ಕುಟ್ಟಿ ಬೀಜಗಳನ್ನೆಲ್ಲ ಬೇರ್ಪಡಿಸಿಕೊಂಡು, ಇದರಲ್ಲಿರುವ ಸ್ವಾಭಾವಿಕ ರಂಧ್ರಗಳಿಗೆ ತೆಳುವಾದ ತಾಮ್ರದ ತಂತಿಯನ್ನು ಸೇರಿಸಿ ಗೊಲೆ ಹಾಕಿ ಚಿಕ್ಕ ಕಟಿಂಗ್‌ಪ್ಲೇಯರಿನಿಂದ ನುಲಿದು ನುಲಿದು ಸರಗಳನ್ನು ಮಾಡುತ್ತಾರೆ. ಹಲವಾರು ಎಳೆಗಳ ಸರಗಳನ್ನೂ ಮಾಡಿ ಪುಣ್ಯಕ್ಷೇತ್ರಗಳಲ್ಲಿ ಸಗಟು ಮಾರಾಟ ಮಾಡುತ್ತಾರೆ.

**ಸ್ಫಟಿಕದ ಸರ:**

ರೆಡಿಮೇಡ್ ಹರಳುಗಳನ್ನು ಕೊಂಡುತಂದು ಅವುಗಳನ್ನು ಸರಮಾಡಿ ಮಾರಾಟ ಮಾಡುತ್ತಾರೆ. ಇದು ಸಹ ಅಧಿಕ ಆದಾಯವನ್ನು ತರುವಂಥ ಕೆಲಸವಾಗಿದೆ.

**ದಬ್ಬಳ ತಯಾರಿಕೆ:**

ಪಟ್ಟಣಗಳಲ್ಲಿನ ಗುಜರಿಗಳಿಂದ ಗಟ್ಟಿ ತಂತಿ ತಂದು ಅದರಿಂದ ದಬ್ಬಳಗಳನ್ನು ತಯಾರಿಸುತ್ತಾರೆ. ಅಡಿಗೆ, ಸುತ್ತಿಗೆ, ಆಟ್, ಬಟ್ಟು, ಬ್ಲೇಡು ಮುಂತಾದ ಸಾಮಗ್ರಿಗಳನ್ನು ಬಳಸಿ ದಬ್ಬಳಗಳನ್ನು ಮಾಡುತ್ತಾರೆ. ಮೂಟೆ ಹೊಲಿಯಲು ಮತ್ತು ದನಗಳಿಗೆ ಮೂಗುದಾಣ ಹಾಕಲು ದೊಟ್ಟ ದಬ್ಬಣಗಳನ್ನು ಸಹ ತಯಾರಿಸುತ್ತಾರೆ. ಶಿವಮೊಗ್ಗ ಕಡೆಯ ಹಕ್ಕಿಪಿಕ್ಕಿಯರು ಸುಮಾರು ೨೦೦ ರಿಂದ ೩೦೦ ದಬ್ಬಣಗಳನ್ನು ಮಾಡಿಕೊಂಡು ಅರಸೀಕೆರೆ, ತಿಪಟೂರು ಕಡೆಗೆ ಬಂದು ತೆಂಗಿನಕಾಯಿ ಮಂಡಿಗಳಿಗೆ ನೇರವಾಗಿ ಮಾರಾಟ ಮಾಡುತ್ತಾರೆ. ಒಂದಕ್ಕೆ ಕನಿಷ್ಟ ೪ ರೂಪಾಯಿಗಳು ಸಿಗುತ್ತವೆ. ಒಬ್ಬ ಗಂಡಸು

ಒಂದು ದಿನಕ್ಕೆ ೪೦-೬೦ ದಬ್ಬಳಗಳನ್ನು ಮಾಡುತ್ತಾನೆ. ಸಣ್ಣದಬ್ಬಳಗಳಾದರೆ ೧೦೦ ತನಕ ತಯಾರಿಸುತ್ತಾರೆ.

**ರುದ್ರಾಕ್ಷಿ ತಯಾರಿಕೆ:**

ನೇಪಾಳದ ಕಡೆಯ ತೆಂಗಿನಕಾಯಿ ಗಜರ್‌ಪಟ್ಟು ಆಯಿಯಿಂದ ರುದ್ರಾಕ್ಷಿಗಳನ್ನು ಹಕ್ಕಪಿಕ್ಕಿಯರೇ ತಯಾರಿಸುತ್ತಾರೆ. ಈ ಆಯಿಯ ಮೇಲೆ ಓಂ ಎನ್ನುವ ಅಕ್ಷರವನ್ನೂ, ಲಿಂಗದ ತಲೆಯನ್ನೂ ತ್ರಿಶೂಲ ಮತ್ತು ಅದಕ್ಕೆ ನಾಗರಹಾವು ಸುತ್ತಿಕೊಂಡಿರುವ ಚಿತ್ರಗಳನ್ನು ಚಿಕ್ಕ ಉಳಿಯನ್ನು ಬಳಸಿ ಕೈಯಿಂದಲೆ ಕೊರೆದು ತಯಾರಿಸುತ್ತಾರೆ. ಈ ಕಾಯಿ ದುಂಡು ಅಡಿಕೆಯ ರೀತಿ ಇರುತ್ತದೆ. ಇದು ಒಣ ಕೊಬ್ಬರಿಗಿಂತ ಸ್ವಲ್ಪ ಗಟ್ಟಿಗಿರುತ್ತದೆ. ಹಸಿಯಿದ್ದಾಗಲೆ ಇಂಥ ಚಿತ್ರಗಳನ್ನು ಬಿಡಿಸುತ್ತಾರೆ. ಇಣಗಿದ ಮೇಲೆ ಅಡಿಕೆಯಷ್ಟೆ ಗಟ್ಟಿಯಾಗುತ್ತದೆ. ಇದು ಶಿವಭಕ್ತರಿಗೆ ಪ್ರಿಯವಾದ ರುದ್ರಾಕ್ಷಿ. ಇದು ನೂರಾರು ರೂಪಾಯಿಗೆ ಮಾರಾಟವಾಗುತ್ತದೆ. ಅಲ್ಲದೆ ಇತರ ರುದ್ರಾಕ್ಷಿಗಳೂ ಸಹ ಹಕ್ಕಪಿಕ್ಕಿಯರಿಗೆ ಒಳ್ಳೆಯ ಆದಾಯ ತರುವ ಸಾಮಗ್ರಿಗಳಾಗಿವೆ.

**ಕಾಡುಕೋಳಿ ಜುಟ್ಟು ಅಥವಾ ಕಲರ್ ಜುಟ್ಟು:**

ಹಕ್ಕಿಪಿಕ್ಕಿಯರು ಬೇಟೆಯಾಡುವ ಹಲವು ಪಕ್ಷಿಗಳಲ್ಲಿ ಕಾಡುಕೋಳಿಯೂ ಒಂದು. ಇದು ಸಾಮಾನ್ಯವಾಗಿ ಓಡಿ ಹೋಗುವ ಪಕ್ಷಿ. ಇದರ ಕುತ್ತಿಗೆಯ ಮೇಲೆ ಪುಕ್ಕಗಳ ಗುಚ್ಚವೊಂದಿರುತ್ತದೆ. ಇದು ಸಹಜವಾಗಿಯೆ ಹಿಡಿಯಾಗಿರುವುದರಿಂದ ನೋಡಲು ಒಟ್ಟಿಗೆ ಮತ್ತು ಸುಂದರವಾಗಿ ಕಾಣುತ್ತದೆ. ಇದಕ್ಕೆ ಬಾಂಬೆಯಲ್ಲಿ ೧೫೦ ರೂಪಾಯಿಗಳಿಂದ ೨೦೦ ರೂಪಾಯಿಗಳಷ್ಟು ಹಣ ದೊರೆಯುತ್ತದೆ. ಇದನ್ನು ಪ್ರಮುಖವಾಗಿ ಮಿಲಿಟರಿಗಳಲ್ಲಿ ಬಳಸುತ್ತಾರೆ. ಗಂಡು ಎದೆಗೂ, ಹೆಣ್ಣು ಹಣೆಗೂ ಧರಿಸುತ್ತಾರೆ. ಇದರ ಇನ್ನೊಂದು ವಿಶೇಷ ಬೆಳಕನ್ನು ಬಿಡುತ್ತ, ವಜ್ರಗಳಿಂದ ಮೀನುಗಳನ್ನು ಆಕರ್ಷಿಸುತ್ತದಂತೆ. ಇಂಥ ಮೀನುಗಳಿಂದ ಹತ್ತಾರು ಸಾವಿರ ರೂಪಾಯಿಗಳ ಆದಾಯ ಇರುವುದರಿಂದ ಕಲರ್ ಜುಟ್ಟಿಗೆ ಇಷ್ಟೊಂದು ಬೆಲೆ ಎನ್ನುತ್ತಾರೆ ಹಕ್ಕಿಪಿಕ್ಕಿ ವ್ಯಾಪಾರಿಗಳು.

ಹೀಗೆ ಬಗೆಬಗೆಯ ಸಾಮಗ್ರಿಗಳನ್ನುಳ್ಳ ಹೆಗಲಿನ ಚೀಲವೊಂದನ್ನು ಹಿಡಿದು ಸುತ್ತುವ ಹಕ್ಕಿಪಿಕ್ಕಿ ವ್ಯಾಪಾರಿಗಳು ಮಣಿ, ಸರ ಮುಂತಾದ ಸಾಮಗ್ರಿಗಳನ್ನು ದಿಲ್ಲಿ, ಮಥುರಾದಿಂದ ಸಗಟಾಗಿ ಕೊಂಡು ತಂದು ಹಾರಗಳನ್ನು ತಯಾರಿಸಿ ಧರ್ಮಸ್ಥಳ, ಕೊಲ್ಲೂರು, ಗೋಕರ್ಣ, ತಿರುಮಲೈ, ತಿರುಪತಿ, ಮಂತ್ರಾಲಯ ಮುಂತಾದ ಧಾರ್ಮಿಕ ಸ್ಥಳಗಳಲ್ಲಿ ರುದ್ರಾಕ್ಷಿ, ಹವಳಸರ, ತುಳಸಿಸರ, ಮೊಹಿಂದ್ ರುದ್ರಾಕ್ಷಿ, ಶಂಖ, ಬಜರ್ ಬೊಟ್, ಉಂಗುರಕ್ಕೆ ಬೇಕಾದ ಬಗೆಬಗೆಯ ಕಲ್ಲುಗಳು, ಮಾಣಿಕ, ಮೋತಿಗಳನ್ನು ರಾಜಾಸ್ಥಾನದ ಕಲ್ಲುಗಳನ್ನು ಮಾರಾಟಮಾಡುತ್ತಾರೆ. ಶ್ರೀಮಂತರು ಅಥವಾ ಅಕ್ಕಸಾಲಿಗರಿಗೆ ಮಾರಾಟ ಮಾಡುತ್ತಾರೆ. ಇಲ್ವೇ ಅವರೇ ಇವರನ್ನು ಹುಡುಕಿಕೊಂಡು ಹೋಗುತ್ತಾರೆ. ಪುಷ್ಪರಾಜ್, ಪನ್ನ, ವಜ್ರ, ನೀಲಂ ಇವು ಮುಸ್ಲಿಂ ಜನರಿಂದ ಹೆಚ್ಚು ಮಾರಾಟವಾಗುತ್ತವೆ.

**ಹಕ್ಕಿಪಿಕ್ಕಿಗಳ ಗಿಡಮೂಲಿಕೆ ಔಷಧಿ ಉತ್ಪನ್ನಗಳು ಮತ್ತು ವೈದ್ಯಪದ್ಧತಿ**

ಹಕ್ಕಿಪಿಕ್ಕಿಯರು ತಾವು ಮಾಡುವ ವೈದ್ಯಕ್ಕೆ ವ್ಯಾಪಾರದ ಸಂಬಂಧ ಅನಿವಾರ್ಯವಾಗಿದೆ. ಅದು ಅವರ ಆರ್ಥಿಕತೆಯನ್ನು ಅವಲಂಬಿಸಿರುತ್ತದಲ್ಲದೆ, ತಮ್ಮ ಜನಾಂಗದವರಿಗೂ ಮುಕ್ತವೆ ಹಂಚಿಕೆಯಾಗುತ್ತದೆ. ಅವರ ವ್ಯಾಪಾರ ಜೀವನದ ಮುಖ್ಯವಾದ ಅಂಗವನ್ನು ವೈದ್ಯ ಪದ್ಧತಿ ಎಂದರೆ ತಪ್ಪಾಗದು. ನಮ್ಮ ಸಮಾಜದ ನೆಲೆನಿಂತ ಜನರಿಗೆ ಅರಿವಿಲ್ಲದ ಎಷ್ಟೋ ಔಷಧಿಗಳನ್ನು ಇವರು ಹಂಚುತ್ತಾರೆ. ಮನುಷ್ಯ ಶರೀರದ ಪ್ರತಿಯೊಂದು ಅಂಗಕ್ಕೂ ಬರುವ ಖಾಯಿಲೆಗೆ ಇವರು ಔಷಧಿಯನ್ನು ಮಾಡುತ್ತಾರೆ. ಇದು ಬಹುತೇಕ ಅವರ ಬುಡಕಟ್ಟಿಗೆ ಬಳಕೆಯಾಗುತ್ತದೆ. ಮತ್ತು ವ್ಯಾಪಾರದ ಪ್ರಮುಖ ಸಾಧನವೂ ಆಗಿದೆ.

**ತಲೆಮದ್ದು ಉಷಾರು ಮಾಡುವುದು :**

ಕೆರೆಯಲ್ಲಿನ ಕೆಂಪು ಸೀಗಡಿಯನ್ನು ತಂದು ಅದರಿಂದ ರಸ ತೆಗೆದು ಕುಡಿಸಿ ಲಿಂಬೆಹಣ್ಣನ್ನು ನೆತ್ತಿಗೆ ಹಾಕಿ ಉಜ್ಜಿ ಅದನ್ನು ಕುಡಿಸಿ ನಂತರ ಮಜ್ಜಿಗೆ ಕುಡಿಸಬೇಕು. ತಣ್ಣೀರನ್ನು ತಲೆಮೇಲೆ ಹಾಕಬೇಕು. ಏಳು ಮಡಕೆಗಳಿಂದ ಬೇಗ ಬೇಗನೆ ನೀರನ್ನು ಒಂದೇ ಸಮನೆ ಸುರಿಯಬೇಕು.

**ಬಾಣಂತಿ ರೋಗಕ್ಕೆ :**

ಇದಕ್ಕೆ ಅಳೊಸನ್ನಿ ಮೂಕಸನ್ನಿ ಎಂದೂ ಕರೆಯುತ್ತಾರೆ. ತಲೆಗೆ ಸಗಣಿಯಿಂದ ಇಲ್ಲವೆ ಅರಿಶಿಣದಿಂದ ಗುಂಡಿಯನ್ನು ಮಾಡಿ ಹಿಂದಿನಿಂದ ಚೆನ್ನಾಗಿ ಕಾಯಿಸಿದ ಹಂದಿತುಪ್ಪವನ್ನು ಸುರಿಯುತ್ತಾರೆ. 'ಅಪ್ಪೊ ಸತ್ತೆ' ಅಂದ್ರೆ ಅದು ಹೋಯಿತು ಎಂಬ ನಂಬಿಕೆಯಿದೆ. ತಲೆಯೆಲ್ಲ ತುಪ್ಪದ ಬಿಸಿಗೆ ಗಾಯವಾಗಿ ಮುಂದೆ ವಾಸಿಯಾಗುತ್ತದೆ. ಅಂತೂ ಸನ್ನಿ ಹೋಗುವುದೆಂಬ ನಂಬಿಕೆ ಪ್ರಬಲವಾಗಿದೆ.

**ನಾಯಿ ಕಚ್ಚಿದರೆ** ಯಾರ ಮನೆಯ ನಾಯಿ ಕಚ್ಚಿರುತ್ತದೆಯೋ ಅವರ ಮನೆಯಿಂದಲೇ ನೀರು ಕುಡಿಯಬೇಕು ಮತ್ತು ಕಚ್ಚಿದ ಗಾಯಕ್ಕೆ ಸುಣ್ಣ ಹಚ್ಚಬೇಕು.

**ತಲೆನೋವು** ಬಂದರೆ ಎರಡು ರಟ್ಟೆಗಳನ್ನೂ ಕಟ್ಟಿ ಬಿಳಿ ಈರುಳ್ಳಿ ಕತ್ತರಿಸಿ ಅಡ್ಡಲಾಗಿ ಮೂಗಿಗೆ ಒಂದೈದು ಮಿನಿಟ್ಟು ವಾಸನೆಯನ್ನು ಏರಿಸುವುದು. ಲವಂಗದ ಎಣ್ಣೆ ಮತ್ತು ಕಾಡಬೆಳ್ಳುಳ್ಳಿಯಿಂದ ಭಟ್ಟಿ ಇಳಿಸಿದ ಎಣ್ಣೆಯನ್ನು ಸಹ ಹಚ್ಚುತ್ತಾರೆ.

**ಶೀತ** ಮಕ್ಕಳಿಗೆ ಶೀತವಾದರೆ ಬೆಳ್ಳುಳ್ಳಿಯನ್ನು ಕೊರಳಿಗೆ ಆಗುವಷ್ಟನ್ನು ದಾರಕ್ಕೆ ಪೋಣಿಸಿ ಕಟ್ಟುತ್ತಾರೆ. ಅದು ಒಣಗಿ ಹೋಗುವ ಹೊತ್ತಿಗೆ ಶೀತ ಸರಿಯಾಗುತ್ತದೆ.

**ಹೊಟ್ಟೆನೋವು** ದೊಡ್ಡವರೊಗೇನಾದರೂ ಬಂದರೆ, ಕೈರಟ್ಟೆ, ತೊಡೆಗಳನ್ನು ಬಿಗಿಯಾಗಿ ಕಟ್ಟಿ ಮುಖ ಹಾಕಿ ತಲೆದಿಂಬು ಅಥವಾ ಸಿಂಬೆ ಹಾಕಿ ಮಲಗಿದರೆ ಸರಿಯಾಗುತ್ತದೆ.

**ದೃಷ್ಟಿಯಾದರೆ** ಗಟ್ಟಿಯಾದ ಎಲೆಕಳ್ಳಿ ತುಂಡುಗಳನ್ನು ದಾರದಲ್ಲಿ ಪೋಣಿಸಿ ಕಟ್ಟುವುದಲ್ಲದೆ ಪಕ್ಕೆಗಳಿಗೆ ಅದರ ಹಾಲನ್ನು ಹಚ್ಚುತ್ತಾರೆ.

**ಕಾಲಿಗೆ ಮುಳ್ಳು ಚುಚ್ಚಿದರೆ** ಗೇರು ಬೀಜದ ಎಣ್ಣೆಯನ್ನು ಬಿಡುತ್ತಾರೆ. ಇದರಿಂದ ನೋವು ಹೋಗುತ್ತದಂತೆ.

**ಭೇದಿ** ಆದರೆ ಕುರುಬು (ಎಳೆಯದು) ತೆಂಗಿನ ಗುಳ್ಳನ್ನು ಜಜ್ಜಿ ದನ ಇಲ್ಲವೆ ಕುರಿಯ ಹಾಲನ್ನು ಹಾಕಿ ಆ ರಸವನ್ನು ಕುಡಿಯಬೇಕು.

**ಚರ್ಮರೋಗ** ಬಂದರೆ ಗೇರು ಬೀಜದ ಹಾಲನ್ನು ಹಚ್ಚಬೇಕು.

**ಹಲ್ಲುನೋವಿಗೆ** ಎರಡು ಮೂರು ಲವಂಗ ತೆಗೆದುಕೊಂಡು ಪುಡಿ ಮಾಡಿ ನೋವು ಎಲ್ಲಿ ಆಗುತ್ತದೆಯೊ ಅಲ್ಲಿ ಇಟ್ಟು ಅರ್ಧಗಂಟೆ ನೀರು ಉಗಿಯದೆ ಇರಬೇಕು. ಅಥವಾ ಪಪ್ಪಾಯಿ ಕಾಯಿಯ ಹಾಲನ್ನು ನೋವು ಇರುವ ಕಡೆ ಇಡಬೇಕು.

**ಬಿಳಿ ಮುಟ್ಟಾದರೆ** ಬಿಳಿ ದಾಸವಾಳದ ಕುಡಿ ಅಥವಾ ಹೂ, ಕುಡಿಮಾಕಾಯಿ, ಚೆಕ್ಕೆ, ಗಸಗಸೆ, ಕೆಂಪುಸಕ್ಕರೆ, ಕಸ್ತೂರಿ, ಬಾದಾಮಿಕಾಯಿ ಪಪ್ಪು ಜೀರಿಗೆ ಇವಿಷ್ಟನ್ನು ಕೂಡಿಸಿ ಪುಡಿ ಮಾಡಿ ಎಳನೀರಿನಲ್ಲಿ ರಾತ್ರಿಯಿಡೀ ಇಟ್ಟು ಬೆಳಗ್ಗೆ ಹಾಳು ಹೊಟ್ಟೆಗೆ ಕೊಡಬೇಕು. ಇದರಿಂದ ಶರೀರ ತಂಪಾಗಿರುತ್ತದೆ. ಇದು ಕೀಲುನೋವು, ಮಬ್ಬು, ಪಿತ್ತ, ಸಂದು ಮುಂತಾದ ಖಾಯಿಲೆಗಳಿಗೂ ನಿವಾರಣವಿದ್ದಂತೆ.

**ಹೆರಿಗೆ ನೋವಿಗೆ** ಹಡೆಯಲಿರುವ ಹೆಂಗಸಿಗೆ ಕೊತ್ತಂಬರಿ ಜೀರಿಗೆ ಹುರಿದು ಪುಡಿಮಾಡಿ ಕಸಾಯಮಾಡಿ ಕುಡಿಸುತ್ತಾರೆ. ಕಾಫಿಯಲ್ಲಿ ಮೂರು, ನಾಲ್ಕು ಬಾರಿ ಹಾಲು ಹಾಕದೆ ಕೊಟ್ಟರೆ ಬೇಗ ಹೆರಿಗೆಯಾಗುತ್ತದೆ.

**ತಲೆಕೂದಲು ಇಲ್ಲದಿದ್ದರೆ** ಪತ್ತಮಂಡೆ ಕಾಯಿಯನ್ನು ಕೊಬ್ಬರಿ ಎಣ್ಣೆಯಲ್ಲಿ ನೆನೆಹಾಕಿ ಒಂದುವಾರ ಹಚ್ಚಿದರೆ ಬೊಕ್ಕತಲೆಯಲ್ಲೂ ಪುನಃಕೂದಲು ಹುಟ್ಟುತ್ತವಂತೆ. ಕೂದಲು ಬೆಳೆಯೊ ಎಣ್ಣೆಗೆ 'ಖಾಟೀ ಚಾಣ್' ಎನ್ನುತ್ತಾರೆ. ಇದರಲ್ಲಿ ಕರಡಿ ಚರ್ಬಿಯನ್ನು ಹಾಕಿರುತ್ತಾರೆ.

**ವಾಯಿ** ಬಂದರೆ ನವಿಲಿನ ಎಣ್ಣೆ, ಉಡದ ಎಣ್ಣೆ, ಮೊಸಳೆ ಎಣ್ಣೆ ಇವಿಷ್ಟನ್ನೂ ನಿಂಬೆ ಹುಳಿ ಜೊತೆ ಹಚ್ಚಬೇಕು.

**ಲಕ್ವಾ** ಆದರೆ ಪಾರಿವಾಳ, ಕೆಂಬೂತದ ರಕ್ತ ತೆಗೆದು ಲಕ್ವಾ ಹೊಡೆದ ಭಾಗಕ್ಕೆ ಹಚ್ಚಬೇಕು. ಅವುಗಳ ಮಾಂಸವನ್ನು ವಾಸನೆ ಹೋಗದಂತೆ ಮಾಡಿ ಬೇಯಿಸಿ ತಿನ್ನಬೇಕು.

**ಕಿವಿಸೋರಿತ್ತಿದ್ದರೆ** ಇಂಕ್ರ ಉಪ್ಪಿನ ಹಳ್ಳನ್ನು ಎದೆಹಾಲಿನೊಂದಿಗೆ ಸೇರಿಸಿ ಕಿವಿಯಲ್ಲಿ ಬಿಟ್ಟರೆ ವಾಸಿಯಾಗುತ್ತದೆ.

**ಮೂಲವ್ಯಾಧಿ** ಇದರಲ್ಲಿ ಮೂರುವಿಧ. ಅ)ಕಡಿತ ಮೂಲವ್ಯಾಧಿ ಆ)ಮೊಳಕೆ ಮೂಲವ್ಯಾಧಿ ಇ)ರಕ್ತ ಮೂಲವ್ಯಾಧಿ. ಇವುಗಳಿಗೆ ಕಾಡುಚಿಪ್ಪಂದಿಯ ಚಿಪ್ಪನ್ನು ಸುಟ್ಟು ಅದನ್ನು ಪುಡಿಮಾಡಿ ಹಚ್ಚಬೇಕು. ನೀರಲ್ಲಿ ಹಾಕಿ ಕುಡಿಯಲಿಕ್ಕೂ ಕೊಡಬಹುದು. ಇನ್ನೊಂದು ವಿಧಾನವೆಂದರೆ ಮಣ್ಣಿನ ಚಿಲುಮೆಯ ಮುಂಭಾಗವನ್ನು ಬೆರಣಿಯಲ್ಲಿ ಕೆಂಪಗೆ ಕಾಯಿಸಿ ಒಕ್ಕಳದ ಮೇಲೆ ಅದೇ ನೇರಕ್ಕೆ ಎಮ್ಮೆಗೆ (ಬೆನ್ನಿನ ಮೂಳೆ) ಎರಡು ಮೂರು ಬಾರಿ ಅದರ ಬರೆಯನ್ನು ಶೀಲು ಮಾಡಿದ ರೀತಿ ಮಾಡಿಬಿಡುತ್ತಾರೆ. ಅಂಗಾತ, ಮಕಾಡೆ (ಮುಖಡಿ) ಮಲಗಿಸಿ ಬಿಡುತ್ತಾರೆ. ಉಸಿರು ಎಳೆದುಕೊಳ್ಳುವಾಗ 'ಗೂದೆ' ಕೂಡ ಒಳಗೆ ಹೋಗುತ್ತದಂತೆ. ಇದರಿಂದ ಜೀವನಪೂರ್ತಿ ಮತ್ತೆ ಮೂಲವ್ಯಾಧಿ ಬರುವುದಿಲ್ಲವಂತೆ.

**ಮೂರ್ಚೆರೋಗ** ಬಂದರೆ, ಕೈಯಿಂದ ತೆಗೆದ ಬೇವಿನ ಎಣ್ಣೆ, ಗೋರಂಜನ ಎರಡನ್ನೂ ಮಿಶ್ರಮಾಡಿ ೨೧ ದಿವಸ ಎರಡೊತ್ತೂ ಕೊಟ್ಟರೆ ಜನ್ಮಾಂತರ ಮತ್ತೆ ಈ ರೋಗ

ಬರುವುದಿಲ್ಲ. ಈ ಅವಧಿಯಲ್ಲಿ ವರ್ಷಗಟ್ಟಲೆ ಹಸಿಕೊಬ್ಬರಿ, ಎಣ್ಣೆ, ಬದನೆಕಾಯಿ ಮುಂತಾದ ಶಲದಿ ಪದಾರ್ಥಗಳನ್ನು ತಿನ್ನಲು ಕೊಡಬಾರದು.

**ಹೊಟ್ಟೆನೋವಿಗೆ** ನೇಪಾಳಿ ಬೀಜವನ್ನು ಕುಟ್ಟಿ ನೀರು ಅಥವಾ ಕಾಫಿಯಲ್ಲಿ ಸೇರಿಸಿ ಕುಡಿಸಿದರೆ ವಾಸಿ ಆಗುತ್ತದೆ.

**ಇಸುಬು, ತದ್ದಿಗೆ, ಗಜಕರ್ನವಾದರೆ** ಗೇರು ಎಣ್ಣೆಯನ್ನು ಹಚ್ಚಬೇಕು.

**ದಮ್ಮಿಗೆ** ಹುಲಿಮಾಂಸ, ಶಂಖುವಿನಲ್ಲಿರುವ ಮಾಂಸ ತಿಂದರೆ ಹೋಗುತ್ತದೆ. ದೊಡ್ಡವರಿಗೆ ದಮ್ಮು ಕೆಮ್ಮಿಗೆ 'ಜಾಡಪಾಮೊ' ಎಂಬ ಗಿಡಮೂಲಿಕೆಯನ್ನು ಕೊಡುತ್ತಾರೆ.

**ಮೊಡವೆ** ಆದರೆ ಪುನಗಿನ ಬೆಕ್ಕಿನ ಗಡ್ಡೆ ಅಥವಾ ಅದರ ಎಣ್ಣೆ, ಕೊಬರಿ ಎಣ್ಣೆ ಜೊತೆ ಸೇರಿಸಿ ಹಚ್ಚಿದರೆ ಹೋಗುತ್ತದೆ.

**ಬ್ಲಡ್ ಪ್ರಜರ್** ರುದ್ರಾಕ್ಷಿ ಪುಡಿ ಮಾಡಿ ನೀರಿನ ಜೊತೆ ಸೇರಿಸಿ ಕುಡಿಯಬೇಕು. ಇದರಿಂದ ಎದೆಯ ದುಗುಡ ಕಡಿಮೆಯಾಗುತ್ತದೆ.

**ಗೊಡ್ಡುಬಿದ್ದರೆ** ಹೆಂಗಸರಿಗೆ ಮಕ್ಕಳಾಗದೆ ಗೊಡ್ಡು ಬಿದ್ದರೆ (ಬಂಜೆಯಾದರೆ ಒಂದು ಹಸಿರು ಔಷಧಿಯನ್ನು ಬಳಸಲಾಗುವುದು. ಪಚೇಲಿ ಸೊಪ್ಪು ತಂದು ಅರೆದು ಗುಳಿಗೆ ಮಾಡಿ ನುಂಗಿಸಿ ಗೊಡ್ಡು ಕಾಫಿ (ಬರಗಾಪಿ = ಹಾಲುಹಾಕದೇ ಮಾಡಿದ (ಕಾಫಿ)ಯನ್ನು ಕುಡಿಸಬೇಕು. ಇದರಿಂದ ಮಕ್ಕಳಫಲ ನಿಲ್ಲುತ್ತದೆ. ಅಲ್ಲದೆ ತಿಂಗಳ ತಿಂಗಳ ಹಟ್ಟಿಕಡೆ ಆಗುತ್ತದೆ (ಮುಟ್ಟು).

ಮಕ್ಕಳ ಫಲ ಬೇಕಾದವರಿಗೆ ಹಕ್ಕಿಪಿಕ್ಕಿಯರು 'ಮಹದೇವ್ ಪಿಂಡ ಕಾಯಿ'ಯನ್ನು ಜನರಿಗೆ ಕೊಡುತ್ತಾರೆ. ಈ ಕಾಯಿಗಳನ್ನು ಎಷ್ಟನ್ನು ತಿನ್ನುತ್ತಾರೊ ಅಷ್ಟು ಮಕ್ಕಳಾಗುತ್ತವೆಂದು ಹೇಳುತ್ತಾರೆ. ಇದರಲ್ಲಿ 'ಶಂಭು' ಮತ್ತು 'ಗೌರಪಾರ್ವತ' ಎಂಬ ಗಂಡು-ಹೆಣ್ಣು ಬೀಜಗಳಿರುತ್ತವೆ. ಮುಟ್ಟಾದ ಮೂರು ದಿವಸಕ್ಕೆ ಒಂದನೇ ನೀರು ಹೊಯ್ಕೊಂಡು ಸ್ವಾಮಿ ಹೆಸರು ಹೇಳಿ ಬಾಳೆಹಣ್ಣಿನ ಜೊತೆ ಈ ಬೀಜವನ್ನು ನುಂಗಿದರೆ, ಅದೇ ಮುಟ್ಟಿಗೆ ಫಲ ನಿಲ್ಲುತ್ತದೆ. ಹಕ್ಕಿಪಿಕ್ಕಿಯರು ಇದಕ್ಕೊಂದು ಕತೆಯನ್ನೂ ಹೇಳುತ್ತಾರೆ. ಹಿಂದೆ ಸೀತಮ್ಮ ಮಕ್ಕಳಿಲ್ಲದ್ದಕ್ಕೆ, ಅಳುತ್ತಾ ಕೂತಿದ್ದಳಂತೆ. ಆಗ ರಾಮದೇವರು ಮಹದೇವ್‌ಕಾಯಿ ಕಿತ್ತು ತಂದು ಕೊಟ್ಟನಂತೆ, ಎರಡು 'ಶಂಭು' ಬೀಜಗಳನ್ನು ನುಂಗಿದ್ದರಿಂದ ಲವಕುಶರು ಹುಟ್ಟಿದರಂತೆ.

ಈ ಬೀಜಗಳನ್ನು ರಸಬಾಳೆ ಹಣ್ಣಿನೊಳಗೆ ಇಟ್ಟು ನುಂಗಬೇಕು. ಆಮೇಲೆ ಬಾಳೆ ಹಣ್ಣಿನ ಸಿಪ್ಪೆಯನ್ನೂ ನುಂಗಬೇಕು. ಸಿಪ್ಪೆಯನ್ನು ಎಎಯಬಾರದು. ಅಕಸ್ಮಾತು ನಾಯಿ, ನರಿ ಏನಾದರೂ ತಿಂದುಬಿಟ್ಟರೆ ಫಲ ಆಕಡೆ ಹೀಗಿ ಬಿಡುತ್ತದಂತೆ.

**ಅಬಾರಷನ್ನಿಗೆ:**

ಇದಕ್ಕೆ ಸಹ ಹಸಿರು ಔಷಧಿಯನ್ನು ಮಾಡುತ್ತಾರೆ. ಬಿದಿರು ಸೊಪ್ಪನ್ನು ಅರೆದು ಬೇಯಿಸಿ, ಹಾಲು, ಹಿಂಗು, ಫನೆಬೆಲ್ಲ (ತಟ್ಟೆ ಬೆಲ್ಲ), ಸೊಂಟಿ, ಎಳ್ಳು ಇವುಗಳನ್ನು ಹೊಳ್ಳಲ್ಲಿ ಹಾಕಿ ಅರೆಯಬೇಕು. ಒಂದು ಪಾತ್ರೆಯಲ್ಲಿ ಹಾಕಿ ಇವೆಲ್ಲವನ್ನೂ ಪಾಯಸದ ರೀತಿ

ಬೇಯಿಸಿ ಮೂರು ದಿವಸ ಕುಡಿಯಬೇಕು. ಎರಡು, ಮೂರು ತಿಂಗಳ ಫಲವಾಗಿದ್ದರೂ ಮುಟ್ಟಾಗಿ ಹೋಗಿಬಿಡುತ್ತದೆ.

**ತಲೆಮದ್ದು ಮಾಡುವುದು:**

ಮಳಕಪೂರ, ಮಳಮಾತಂಗಿ, ಇವು ಮೂರನ್ನೂ ಅರೆದು ಬೆಣ್ಣೆಯಲ್ಲಿ ಕಾಯಿಸಿ, ಹಿಂಗಿಸಿ, ಗಟ್ಟಿಯಾಗಿ ಗುಳಿಗೆ ರೀತಿ ಮಾಡಿ ಸಿಹಿ, ಚಹಾದೊಳಗೆ, ಹುಗ್ಗಿ ಒಳಗೆ, ಬೆಲ್ಲದೊಳಗೆ ಕೊಡಬೇಕು. ಹೀಗೆ ಕೊಟ್ಟರೆ ಅದನ್ನು ಸೇವಿಸಿದವರಿಗೆ ತಲೆಮದ್ದು ಹಿಡಿಯುತ್ತದೆ. ಸಾಮಾನ್ಯವಾಗಿ ಹುಡುಗಿಯರಿಗೆ ತಲೆಮದ್ದು ಇರುವಾಗ ಹುಡುಗಿ ಹೆಜ್ಜೆ ತುಳಿದ ಮಣ್ಣು, ಹುಡುಗಿಯ ಬಲಗಾಲಿನ ಕೊಳೆ, ಎರಡು ಹಸಿರು ಗಿಡಗಳು, ಅರ್ಧತಲೆಕಾಯಿನ ಬೀಜ, ಅಡಿಕೆಯನ್ನು ವಂದ ಮಾಡುವ ಜಾಗದಲ್ಲಿ ಇಡುವುದು. ಈ ರೀತಿ ಸಂಗ್ರಹಿಸಿದ ಸಾಮಗ್ರಿಗಳಿಂದಲೇ ಅವರಿಗೆ ಮದ್ದು ಮಾಡಬಹುದೆಂದು ಹಕ್ಕಿಪಿಕ್ಕಿಯರು ಹೇಳುತ್ತಾರೆ.

**ಮಂಗ್ಯಾನಿ ಬಾಜಿ (ನುಗ್ಗೆ ಸೊಪ್ಪು) :**

ಇದು ಕೈಮುಸ್ಕ ಕೊಟ್ಟಿದ್ದರೆ, (ಇಕ್‌ಮದ್ದು) ಅದನ್ನು ಪರೀಕ್ಷೆ ಮಾಡಲು ಮದ್ದು ತಿಂದಿರುವ ವ್ಯಕ್ತಿ ಮುಂಜಾನೆ ಎದ್ದು ನೀರು ಮುಟ್ಟದೆ ಈ ಸೊಪ್ಪಿನ ರಸವನ್ನು ಹಿಂಡಿದಾಗ ಅದು ಗಟ್ಟಿಯಾಗಿ ಬಿಟ್ಟರೆ ಹೊಟ್ಟೆಯಲ್ಲಿ ಮದ್ದಿದೆ ಎಂದು ತಿಳಿಯುತ್ತಾರೆ. ಇಲ್ಲದಿದ್ದರೆ ಈ ರಸ ನೀರಾಗಿ ಹರಿಯುತ್ತದೆ. ಆಗ ಮದ್ದಿಲ್ಲ ಎಂದು ನಿರ್ಧರಿಸುತ್ತಾರೆ.

**ಚಂದ್ರಪ್ರಭಗುಳಿಗೆ :**

ಸೈಯಿಂದುವಾ, ದಣಾ, ಸೋರಣ, ದೇವದಾರ್, ಸಜ್ಜಿಕಾರ್, ಯವಕಾರ್, ಈಖಂಡ, ತಮಾಲಪತ್ರ, ಖಜೂರ, ಅತೀಷ ಮುಂತಾದ ಒಟ್ಟು ೨೧ ಸಾಮಗ್ರಿ ಸೇರಿಸಿ ಗುಳಿಗೆ ತಯಾರು ಮಾಡುತ್ತಾರೆ. ಇದಕ್ಕೆ ಬೇಕಾದ ಪುಡಿಗಳು ಬೊಂಬಾಯಿಯ ಅಮರಸಿಂಗ ಎಂಬುವರ ಅಂಗಡಿಯಲ್ಲಿ ಸಿಗುತ್ತವಂತೆ. ಈ ಗುಳಿಗೆ ಉಷ್ಣಕ್ಕೆ ಒಳ್ಳೆಯ ಔಷಧಿ. ಹಾಗೆಯೇ ಬಿಳಿಪು, ಕೆಂಪುಮುಟ್ಟು ಹೋಗುತ್ತಾ ಇದ್ದವರಿಗೂ ಉಪಯುಕ್ತ. ನಾಮರ್ಧರಿಗೆ ಮರ್ಧನ ಶಕ್ತಿಯನ್ನು ತಂದುಕೊಡುತ್ತದಂತೆ.

**ರತನ್‌ಪುರಸ್ :**

ಇದು ರತನ್‌ಪುರಸ್ ಎಂಬ ಗಿಡದ ಸೊಪ್ಪು. ಇದನ್ನು ಒಣಗಿಸಿ ಪುಡಿ ಮಾಡುತ್ತಾರೆ. ಇದನ್ನು ನೀರಿಗೆ ಹಾಕಿದರೆ ಬೆಂಡೆಕಾಯಿಯ ಲೋಳೆಯ ರೀತಿ ಬರುತ್ತದೆ. ಇದು ಪುರುಷರ ವೀರ್ಯ ನೀರಿನ ಹಾಗೆ ಹೋಗುತ್ತಿದ್ದರೆ ತಡೆದು ಗಟ್ಟಿಯಾಗುವಂತೆ ಮಾಡುತ್ತದಂತೆ.

**ಮದನ್‌ಮಸ್ತು :**

ಇದು ಮೀನಿನ ಬೆನ್ನಿನ ಮೇಲೆ ಇರುತ್ತದಂತೆ. ಇದನ್ನು ಕಡಲೆ ಹಿಟ್ಟನ್ನು ಸಸವರಿ ತೆಗೆಯುತ್ತಾರಂತೆ. ಅಲ್ಲಿನ ಜಿಡ್ಡೆಲ್ಲ ಕಡಲೆ ಹಿಟ್ಟಿಗೆ ಅಂಟಿಕೊಂಡಿರುತ್ತದೆ. ಇದೇ ಮದನಮಸ್ತು. ಇದನ್ನು ಗುಳಿಗೆಯ ರೀತಿ ಮಾಡುತ್ತಾರೆ. ಇದು ಉಷ್ಣಕ್ಕೆ ಮತ್ತು

ಕಮುಜೂರಿಗೆ (ಪುರುಷರ ಜನನೇಂದ್ರಿಯ ಸ್ಟ್ರಾಂಗ್ ಆಗಲು) ಉಪಯುಕ್ತವಾದುದು. ಇದನ್ನು ತಣ್ಣನೆಯಹಾಲಿಗೆ ಹಾಕಿ ಗುಳಿಗೆಯನ್ನು ಕರಗಿಸಿ ಹಾಲು ಕುಡಿಯಬೇಕು. ಇದನ್ನು ಸರಿಯಾಗಿ ಏಳು ದಿನಗಳ ತನಕ ತಪ್ಪದೆ ಸೇವಿಸಬೇಕು.

**ಮಸಾಜ್ ಆಯಿಲ್ :**

ಇದು ಸಾಂಡ್ರ ಎಂಬ ಸರೀಸೃಪದ ಚರ್ಮಿಯಿಂದ ತಯಾರಿಸಿದ ಎಣ್ಣೆ. ಇದಕ್ಕೆ ಕಲ್ಲಮು (ಕಲ್ಲಿನ ಬೆವರು)ನ್ನು ಸೇರಿಸಿರುತ್ತಾರೆ. ಈ ಸಾಂಡ್ರ ಮತ್ತು ಕಲ್ಲಮು ಎರಡೂ ನೇಪಾಳದ ಕಡೆಯಿಂದ ಹಕ್ಕಿಪಿಕ್ಕಿಯರು ಸಂಗ್ರಹಿಸಿ ತರುತ್ತಾರೆ. ಸಾಂಡ್ರವನ್ನು ಸುಮಾರು ಮನೆಗಳಲ್ಲಿ ಸಾಕುತ್ತಾರೆ. ಇದಕ್ಕೆ ಗಾಳಿ ಉಡ ಎಂದೂ ಹೇಳುತ್ತಾರೆ. ಇದು ಕೇವಲ ಗಾಳಿ ಕುಡಿದೇ ಬದುಕುತ್ತದೆ. ಓತಿಕ್ಯಾತನ ರೀತಿ ಇರುತ್ತದೆ. ಬಾಲ ಮೊಸಳೆ ರೀತಿ ಇರುತ್ತದೆ. ಬೆರಳು ಕಪ್ಪೆಯ ರೀತಿ, ಮುಂಗಾಲು ಮನುಷ್ಯನ ರೀತಿ, ಹೊಟ್ಟೆ ಉಡದ ರೀತಿ, ನಾಲಗೆ ಸೀಳಾಗಿರದೆ ಮನುಷ್ಯನ ನಾಲಗೆಯಂತಿರುತ್ತದೆ. ಇದರ ವಿಶೇಷವೆಂದರೆ ಬಹಳ ಜೋರಾಗಿ ನೆಲದ ಮೇಲೆ ಓಡಿಹೋಗುತ್ತದೆ. ಅಷ್ಟೇ ಅಲ್ಲ ಭೂಮಿಯ ಸುಮಾರು ೯, ೧೦ ಅಡಿ ಕೆಳಗಡೆ ಇರುತ್ತದೆ. ಇದರ ಚರ್ಬಿಯನ್ನು ಸಾಸಿವೆ ಎಣ್ಣೆ ಜೊತೆಯಲ್ಲಿ ಕುದಿಸುತ್ತಾರೆ. ಇದರಿಂದ ಬಂದ ಎಣ್ಣೆಯನ್ನು ಇಂಜಕ್ಷನ್ ಬಾಟಲಿಯಲ್ಲಿ ತುಂಬಿಡುತ್ತಾರೆ. ಇದು ಮುಖ್ಯವಾಗಿ ಗಂಡಸರ ಸಾಮಾನಿನಲ್ಲಿ ಶಕ್ತಿ ಇಲ್ಲದಿದ್ದಾಗ ಇದನ್ನು ಸವರಿದರೆ ಶಕ್ತಿ ಬರುತ್ತದಂತೆ ಮತ್ತು ಧಾತು ನಿಲ್ಲುತ್ತದಂತೆ. ಯಾವುದೇ ತರಹದ ಖಾಯಿಲೆಗಳಿಗೂ ಇದು ಉಪಯುಕ್ತವಂತೆ. ವಾಯಿಗೆ ಕೂಡ ಉಪಯುಕ್ತ. ರಂಡಿ ಭಿಮಾರ್(ಸೂಳೆಯರ ರೋಗ)ಗೂ ಉಪಯುಕ್ತವಾದ ಔಷಧಿಯಾಗಿ ಹಕ್ಕಿಪಿಕ್ಕಿಯರು ಇದನ್ನು ಮಾರಾಟ ಮಾಡುತ್ತಾರೆ.

**ಪುನಗಿನ ಚಟ್ಟು :**

ಬಟ್ಟೆಗಳನ್ನು ನುಶಿ ಅಥವಾ ಇನ್ನಾವುದೇ ಹುಳುಗಳು ತಿನ್ನದಿರಲೆಂದು ಪುನುಗಿನ ಬೆಕ್ಕಿನ ಚರ್ಮಿಯ ಒಣಗಿದ ಭಾಗವನ್ನು ಸಹ ಮಾರಾಟ ಮಾಡುತ್ತಾರೆ. ಮುಂತಾದ ವೈದ್ಯಕೀಯ ಸಾಮಗ್ರಿಗಳನ್ನು ತಯಾರುಮಾಡುವುದು ಮತ್ತು ಮಾರಾಟ ಮಾಡುವುದು ಹಕ್ಕಿಪಿಕ್ಕಿಯರ ಪ್ರಮುಖ ಕೈಗಾರಿಕೆ ಮತ್ತು ವ್ಯಾಪಾರಿ ಸಾಮಗ್ರಿಗಳಾಗಿವೆ. ಅವರು ಬಹುತೇಕ ಆದಾಯವನ್ನು ಇವುಗಳಿಂದ ಸಂಪಾದಿಸುತ್ತಾರೆ. ಪ್ರತೊಯೊಬ್ಬ ಹಕ್ಕಿಪಿಕ್ಕಿಯೂ ತನ್ನ ಮಾರಾಟದ ಸಾಮಗ್ರಿಗಳ ಜೊತೆಯಲ್ಲಿ ಈ ಬಗೆಯ ವಸ್ತುಗಳನ್ನು ಕಡ್ಡಾಯವಾಗಿ ಇಟ್ಟುಕೊಂಡಿರುತ್ತಾರೆ. ಗಿರಾಕಿಗಳನ್ನು ಹಕ್ಕಿಪಿಕ್ಕಿಯರು ಆಕರ್ಷಿಸುವುದೇ ಈ ವೈದ್ಯಕೀಯ ಸಾಮಗ್ರಿಗಳ ಮೂಲಕ. ನಂತರ ಇವುಗಳಲ್ಲಿ ನಂಬಿಕೆ ಬಂದ ಮೇಲೆ ಅಥವಾ ಬರದಿದ್ದರೂ ಇವೆಲ್ಲವುಗಳ ನಂತರ ಗಿರಾಕಿಗೆ ಲಿಂಗು, ಸಾಲಿಗ್ರಾಮ ಬಗೆಬಗೆಯ ಹರಳುಗಳು, ಹುಲಿಉಗುರು ಮುಂತಾದ, ಬೆಲೆಬಾಳುವ ವಸ್ತುಗಳನ್ನು ತೋರಿಸುತ್ತಾರೆ. ಒಬ್ಬ ಗಿರಾಕಿ ಕಡೇಪಕ್ಷ ಒಂದಾದರೂ ಸಾಮಗ್ರಿಯನ್ನು ಕೊಳ್ಳುವಂತೆ ಮಾಡುವುದು ಹಕ್ಕಿಪಿಕ್ಕಿಯರು ಹೊಂದಿರುವ ಬಗೆಬಗೆಯ ಸಾಮಗ್ರಿಗಳೇ ಕಾರಣ. ಸಾಮಗ್ರಿಗಳ ವಿವಿಧತೆ ಮತ್ತು ಅಪರೂಪದ ಸ್ಥಿತಿಗತಿ ಗಿರಾಕಿಗೆ ಸಾಮಗ್ರಿಯನ್ನು ಕೊಳ್ಳುವಂತೆ ಮಾಡುತ್ತದಲ್ಲದೆ. ಇದಕ್ಕಾಗಿ ಹಕ್ಕಿಪಿಕ್ಕಿಯ ವ್ಯಾಪಾರಿ ಬಳಸುವ ಭಾಷೆ, ಆತ ಮಾಡುವ ವಸ್ತು ವಿಶ್ಲೇಷಣೆ ಒಂದು ಬಗೆಯಲ್ಲಿ ಮೋಹಕವಾಗಿಯೆ ಇರುತ್ತದೆ.

ಗೌತಮಪುರದ ವಿಜಯ ಹೇಳುತ್ತಾನೆ; ಕೊಲ್ಲಾಪುರದಲ್ಲಿ ನಾನು ಮಾರಿದ ಸಾಮಗ್ರಿಯನ್ನು ಡೂಪ್ಲಿಕೇಟ್ ಎಂದು ಪತ್ರಿಕೆಯಲ್ಲಿ ಜಾಹಿರಾತು ಮಾಡಿದರು. ಅದರಿಂದ ನನಗೆ ಅನುಕೂಲವೇ ಆಯಿತು. ಏಕೆಂದರೆ ನಾನು ಮಾರಾಟ ಮಾಡಿದ್ದು ನಕಲಿ ಸಾಮಗ್ರಿಯಲ್ಲ. ಒಮ್ಮೆ ಕಾರವಾರದಲ್ಲಿ ಪೋಲಿಸರು ನನ್ನನ್ನು ಹಿಡಿದು ಮೂರು ದಿವಸ ಊಟಕ್ಕೆ ಇಲ್ಲದೆ ಒಣಗಿಸಿದರು. ನಂತರ ಎಸ್‌ಐ ಬಂದು ನನಗೆ ಪ್ರಶ್ನೆ ಕೇಳಿದರು. ಬಜರ್‌ಬೋಟನ್ನು ನೇಪಾಳದ ತೆಂಗಿನಕಾಯಿ ಎಂದು ಸುಳ್ಳು ಹೇಳುತ್ತೀಯಾ ಎಂದು ನನಗೆ ಹೊಡೆಯಲು ಬಂದರು. ಆಗ ನಾನು ಆ ಕಾಯಿಯನ್ನು ಹೋಳು ಮಾಡಿ ತೋರಿಸಿದ ಮೇಲೆ ಅದರೊಳಗೆ ಮೂರು ಕಣ್ಣು, ಜುಟ್ಟು, ಕೊಬರಿ ಚೂರು ಎಲ್ಲಾ ಇತ್ತು. ಇದನ್ನು ತಿಳಿದು ಅವರೇ ನನ್ನ ಪರವಾಗಿ ನ್ಯೂಸ್ ಮಾಡಿ ನನ್ನನ್ನು ಕೈಬಿಟ್ಟರು. ಒಂದು ಜೊತೆ ಹುಲಿ ಉಗುರನ್ನು ಕೊಂಡ ಬರೋಡಾದ ಒಬ್ಬ ವಕೀಲರ ಹೆಂಡತಿ ೩೫ ಸಾವಿರ ದುಡ್ಡು ಖರ್ಚುಮಾಡಿ ಬಂಗಾರದ ಸರಮಾಡಿಸಿ ಹಾಕಿಕೊಂಡು ಅದರ ಪೋಟೊ ತೆಗೆಸಿಕೊಟ್ಟಿದ್ದಾರೆ. ಹುಲಿಉಗುರಿಗೆ ಬಂಗಾರದ ಗ್ಯಾಪ್‌ಗೆ ವಜ್ರದ ಹರಳನ್ನೂ ಕೂರಿಸಿಕೊಳ್ಳುತ್ತಾರೆ. ಬಂಗಾರದ ಚೈನನ್ನೂ ಹಾಕುತ್ತಾರೆ. ನಾವು ಮಾರುವ ಜೇನುತುಪ್ಪವನ್ನು ಉತ್ತರ ಭಾರತದಲ್ಲಿ ಯಾರೂ ಅನುಮಾನಿಸುವುದಿಲ್ಲ. ಬೆಳಿಗ್ಗೆ ಜಾಗಿಂಗ್ ಮಾಡುವವರು, ಪಾವ್‌ರೋಟಿಗೆ, ಬ್ರೆಡ್‌ಗೆ ಸೇರಿಸಿ ತಿನ್ನಲು ಬಳಸುತ್ತಾರೆ. ನಮ್ಮ ಜೇನುತುಪ್ಪದಿಂದ ಕೆಮ್ಮು ದಮ್ಮಿಗೆ ಔಷಧಿಯನ್ನಾಗಿ ಬಳಸುತ್ತಾರೆ. ಅವರು ಒಮ್ಮೆ ಕೊಂಡರೆ ಪದೇ ಪದೇ ಕೊಳ್ಳುತ್ತಲೇ ಇರುತ್ತಾರೆ. ಆದರೆ ಕರ್ನಾಟಕದಲ್ಲಿ ನಮ್ಮನ್ನು ಬಹಳ ಗುಮಾನಿಯಿಂದ ನೋಡುತ್ತಾರೆ. ಅವಮಾನ ಮಾಡುತ್ತಾರೆ. ಆದ್ದರಿಂದ ನಾನು ಬಹುವಾಗಿ ಉತ್ತರಭಾರತದಲ್ಲೆ ವ್ಯಾಪಾರ ಮಾಡುತ್ತೇನೆ ಎಂದು ಹೇಳುತ್ತಾನೆ.

ಹಕ್ಕಿಪಿಕ್ಕಿಯರು ಹೆಚ್ಚು ಬಂಡವಾಳ ಹೂಡಿ ಏನನ್ನೂ ಮಾಡುವುದಿಲ್ಲ. ಅಲ್ಲದೆ ಯಾವ ಕಾಲಕ್ಕೂ ಬೆಲೆಬಾಳುವ ವಸ್ತುಗಳನ್ನು,ಅದರಲ್ಲೂ ಅಪರೂಪದ ವಸ್ತುಗಳನ್ನು ಮಾರಾಟ ಮಾಡುವುದರಿಂದ ಅವರಿಗೆ ನಿತ್ಯವೂ ವ್ಯಾಪಾರವಾಗುತ್ತದೆಂದು ಹೇಳಲಾಗುವುದಿಲ್ಲ. ವ್ಯಾಪಾರ ಆದರೆ ಆಗಬಹುದು. ಇಲ್ಲದಿದ್ದರೆ ಇಲ್ಲ. ಆದ್ದರಿಂದ ಅವರಲ್ಲಿ ಬಹುತೇಕರು ವಿವಿಧ ಬಗೆಯ ಕಸುಬುಗಳಲ್ಲಿ ತೊಡಗುವುದು ಕಂಡುಬರುತ್ತದೆ.

ಹಕ್ಕಿಪಿಕ್ಕಿಯವರ ಉತ್ಪಾದನಾ ಸಾಮಗ್ರಿಗಳು ಜೀವನ ನಿರ್ವಹಣೆ ಅನುವು ಮಾಡಿಕೊಟ್ಟಿರುವುದನ್ನು ಕಾಣಬಹುದು.

## ಬುಡಕಟ್ಟು ಸಮುದಾಯದ ಆರ್ಥಿಕತೆ ಹಾಗೂ ಆಧುನಿಕತೆ

ಮಾನವ ಜೀವನಾವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಂಪನ್ಮೂಲಗಳು, ತಂತ್ರಜ್ಞಾನ ಮತ್ತು ದುಡಿಮೆಯನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವುದನ್ನು ಆರ್ಥಿಕ ವ್ಯವಸ್ಥೆ ಎಂದು ಕರೆಯಬಹುದು. ಈ ಕಾರ್ಯವನ್ನು ವ್ಯವಸ್ಥಿತವಾಗಿ ನಿರ್ವಹಿಸುವುದು ಆರ್ಥಿಕ ಸಂಸ್ಥೆ ಎನಿಸಿಕೊಳ್ಳುತ್ತದೆ. ಆರ್ಥಿಕ ನಡವಳಿಕೆಯ ಉತ್ಪಾದನೆ, ಸರಬರಾಜು ಮತ್ತು ಬಳಕೆಯನ್ನು ಒಳಗೊಂಡಿರುತ್ತದೆ. ಆಗ್ಬನ್ ಮತ್ತು ನಿಮ್ಕಾಪ್ ಪ್ರಕಾರ ಆರ್ಥಿಕ

ಸಂಸ್ಥೆ ಎಂದರೆ ಗಳಿಸುವ ಮತ್ತು ವೆಚ್ಚ ಮಾಡುವ ಒಂದು ವ್ಯವಸ್ಥೆಯಾಗಿದೆ. ಆರ್ಥಿಕ ಸಂಸ್ಥೆ ಪ್ರಮುಖವಾಗಿ ಈ ಕೆಳಗಿನ ಲಕ್ಷಣಗಳನ್ನು ಒಳಗೊಂಡಿರುತ್ತದೆ.

* ಮಾನವ ಮತ್ತು ಅವನ ಆರ್ಥಿಕ ಅವಶ್ಯಕತೆಗಳು.

* ಉತ್ಪಾದನೆ, ಸರಬರಾಜು ಮತ್ತು ಬಳಕೆ ಪ್ರಕ್ರಿಯೆನ್ನೊಳಗೊಂಡಿರುತ್ತದೆ.
* ಈ ಪ್ರಕ್ರಿಯೆಗಳ ನೀತಿ ನಿಯಮ ಮತ್ತು ಪ್ರಮಾಣಕಗಳಗೊಂಡಿರುತ್ತದೆ.
* ಪರಸ್ಪರ ಪ್ರಕ್ರಿಯೆ ಮತ್ತು ಸಾಮಾಜಿಕ ಸಂಬಂಧಗಳು ಸಹಮತ ಮತ್ತು ಸ್ಪರ್ಧೆಯನ್ನೊಳಗೊಂಡಿದೆ.
* ಶ್ರಮವಿಭಜನೆ ಮತ್ತು ಭಿನ್ನತೆಯನ್ನೊಳಗೊಂಡಿರುತ್ತದೆ.
* ಸಾಮೂಹಿಕ ಹಿತದೃಷ್ಟಿಯ ಸ್ಫೂರ್ತಿ.
* ಸಾಮಾನ್ಯ ಗುರಿ.
* ವ್ಯವಸ್ಥೆ.

ಮಾನವ ಶಾಸ್ತ್ರಜ್ಞರು ಈ ಆರ್ಥಿಕ ಸಂಸ್ಥೆಗಳನ್ನು ಪ್ರಮುಖವಾಗಿ ಈ ಕೆಳಕಂಡ ವಿಭಾಗಗಳನ್ನು ಮಾಡಿದ್ದಾರೆ :

* ಬೇಟೆ ಮತ್ತು ಆಹಾರ ಸಂಗ್ರಹಣಾ ಮಾದರಿ.
* ಪ್ರಾಣಿ ಸಾಕಾಣೆ ಮಾದರಿ.
* ತೋಟಗಾರಿಕೆ ಮಾದರಿ.
* ವ್ಯವಸಾಯ (ಗುಡಿಕೈಗಾರಿಕೆ ಇಲ್ಲದೆ ಅಥವಾ ಸಹಿತ) ಮಾದರಿ.
* ಕಾರ್ಖಾನೆಗಳಲ್ಲಿ ಉತ್ಪಾದನೆ ಮಾದರಿ.

ಪ್ರಾಚೀನ ಸಮಾಜಗಳಲ್ಲಿ ಅಂದರೆ ಪ್ರಮುಖವಾಗಿ ಬುಡಕಟ್ಟು ಸಮುದಾಯಗಳಲ್ಲಿ ಬೇಟೆ ಮತ್ತು ಆಹಾರ ಸಂಗ್ರಹಣಾ ಮಾದರಿಯ ಆರ್ಥಿಕ ಚಟುವಟಿಕೆಗಳು ಕಂಡುಬರುತ್ತದೆ. ಆಧುನಿಕತೆಯ ಈ ಸಂದರ್ಭದಲ್ಲಿ ಇಂತಹ ಸಮಾಜಗಳು ವಿರಳವಾಗಿ ಕಂಡುಬರುತ್ತದೆ.

ಉತ್ತರ ಅಮೇರಿಕ, ಆಫ್ರಿಕಾ ಕಲಹರಿ ಮರುಭೂಮಿಯ ಪಿಗ್ಮಿಗಳು ಬೇಟೆ ಮತ್ತು ಆಹಾರ ಸಂಗ್ರಹಣೆಯನ್ನು ತಮ್ಮ ಮುಖ್ಯ ಜೀವನಾಧಾರವಾಗಿಸಿಕೊಂಡಿರುವುದು ಇಂದಿಗೂ ಅಲ್ಲಲ್ಲಿ ಕಂಡುಬರುತ್ತಿದೆ. ಕರ್ನಾಟಕದ ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ತಮ್ಮ ಜೀವನೋಪಾಯಕ್ಕಾಗಿ ಈ ಮಾದರಿಯ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿದ್ದಾರೆ. ಇಂತಹ ಸಮಾಜದಲ್ಲಿನ ಆರ್ಥಿಕ ವ್ಯವಸ್ಥೆಯು ವ್ಯಾಪಾರ ಅಥವಾ ಲಾಭದ ಉದ್ದೇಶವನ್ನು ಹೊಂದಿರುವುದಿಲ್ಲ ಇಲ್ಲಿ ಮುಖ್ಯವಾಗಿ ಕಂಡುಬುರುವುದು ಸಹಕಾರ ಮತ್ತು ಸಾಂಘಿಕ ಹಿತಾಸಕ್ತಿಗಳು. ಇದು ಈ ಸಮುದಾಯದ ಮುಖ್ಯ ಲಕ್ಷಣವಾಗಿದೆ. ಇಲ್ಲಿ ಉತ್ಪಾದನೆ ಮಾಡುವ ಸಮೂಹವೇ ಬಳಕೆಯನ್ನು ಸಹ ಮಾಡುವ ಸಮೂಹವಾಗಿರುತ್ತದೆ. ಇಂತಹ ಸಮೂಹಗಳು ಗಾತ್ರದಲ್ಲಿ

ಸಣ್ಣದಾಗಿದ್ದು ಅಲೆಮಾರಿ ಜೀವನಕ್ರಮವನ್ನು ಹೊಂದಿರುತ್ತದೆ. ಇಂತಹ ಸಂದರ್ಭದಲ್ಲಿ ವ್ಯಕ್ತಿಯ ಆಸ್ತಿ ಎಂಬುದು ಇದ್ದರೂ ಅದು ಅತ್ಯಂತ ಗೌಣವಾಗಿರುತ್ತದೆ.

ಪ್ರಕೃತಿಯನ್ನು ತಮ್ಮ ಅವಶ್ಯಕತೆಗಳಿಗನುಗುಣವಾಗಿ ಬಳಸಿಕೊಳ್ಳುವುದೇ ಪ್ರಾಣಿ ಸಾಕಾಣೆಯ ಮೂಲ ತಂತ್ರ. ಪ್ರಾಣಿಗಳ ಮಾಂಸ, ಚರ್ಮ ಮತ್ತು ದುಡಿಮೆ ಈ ಮಾದರಿಯ ಆರ್ಥಿಕ ವ್ಯವಸ್ಥೆಯನ್ನು ಹೊಂದಿರುವ ಸಮುದಾಯಗಳ ಜೀವನಾಧಾರ.

ಮಾನವ ವಿಕಾಸದ ಇತಿಹಾಸದಲ್ಲಿ ಅತ್ಯಂತ ಪ್ರಮುಖ ಹಂತವಾಗಿದೆ. ಈ ಮಾದರಿಯ ಆರ್ಥಿಕ ವ್ಯವಸ್ಥೆಯಿರುವ, ಸಮಾಜದಲ್ಲಿರುವ ಜನರು ಒಂದು ಕಡೆ ಸ್ಥಿರವಾಗಿ ನೆಲೆ ನಿಲ್ಲುವಂತಾಯಿತು. ಆಹಾರವು ರೀತಿಯ ತಂತ್ರ ಕೌಶಲ್ಯಗಳು ಅಭಿವೃದ್ಧಿಗೊಂಡವು. ವೃತ್ತಿ ಸಂಘಟನೆಗಳು ವೈಯಕ್ತಿಕ ಆಸ್ತಿಯ ಕಲ್ಪನೆ ಮತ್ತು ಸಂಕೀರ್ಣ ಮಾದರಿಯ ಸ್ತರವಿನ್ಯಾಸಗಳು ಈ ಹಂತದಲ್ಲಿ ರೂಪುಗೊಳ್ಳತೊಡಗಿದವು.

ಭಾರತದಲ್ಲಿ ಸುಮಾರು ಐವತ್ತು ಮಿಲಿಯನ್‌ಗಿಂತಲೂ ಹೆಚ್ಚು ಸುಮಾರು ೪೫೦-೫೦೦ ರೀತಿಯ ಬುಡಕಟ್ಟು ಸಮುದಾಯದವರು ವಾಸಿಸುತ್ತಿದ್ದಾರೆ. ಇವರು ಮುಖ್ಯವಾಗಿ ಮಿಶ್ರ ಆರ್ಥಿಕ ಪದ್ಧತಿಯನ್ನು ಅನುಸರಿಸುವವರಾಗಿದ್ದಾರೆ. ಸಾಮಾನ್ಯವಾಗಿ ವ್ಯವಸಾಯವು ಎಲ್ಲಾ ಬುಡಕಟ್ಟುಗಳ ಮೂಲಭೂತ ಕಾರ್ಯವಾಗಿದೆ. ಭಾರತದ ಬುಡಕಟ್ಟುಗಳನ್ನು ಸರಳವಾದ ಬೇಟೆ ಮತ್ತು ಆಹಾರ ಸಂಗ್ರಹಕರೆಂದು ಕರೆಯಲಾಗುವುದಿಲ್ಲ ವ್ಯವಸಾಯದ ಜೊತೆ ಜೊತೆಗೆ ಪ್ರಾಣಿ ಸಾಕಾಣೆ ಅನೇಕ ರೀತಿಯ ವೃತ್ತಿಯ ಕಸುಬುಗಳನ್ನು ಬಲ್ಲವರಾಗಿದ್ದಾರೆ.

ಪ್ರಾಚೀನ ಕಾಲದಲ್ಲಿ ಸ್ಥಳಾಂತರ ವ್ಯವಸಾಯವು ಹೆಚ್ಚಾಗಿ ಉಷ್ಣವಲಯ ಮತ್ತು ಉಪ ಉಷ್ಣವಲಯಗಳಲ್ಲಿ ಕಂಡುಬರುತ್ತದೆ. ಈ ರೀತಿಯ ವ್ಯವಸಾಯವನ್ನು ಅನೇಕ ರೀತಿಯ ಬುಡಕಟ್ಟುಗಳಲ್ಲಿ ನಾನಾ ಹೆಸರುಗಳಿಂದ ಕರೆಯುತ್ತಾರೆ.

ಮಿಶ್ರ ಮಾದರಿಯ ಬುಡಕಟ್ಟು ಆರ್ಥಿಕ ಪದ್ಧತಿಗೆ ಇರುಳಿಗ ಹಾಗೂ ಹಕ್ಕಿಪಿಕ್ಕಿಗಳು ಅತ್ಯುತ್ತಮ ಉದಾಹರಣೆಯಾಗಿದ್ದಾರೆ. ಇವರು ಮುಖ್ಯವಾಗಿ ವ್ಯವಸಾಯವನ್ನು ಅವಲಂಬಿಸಿರುತ್ತಾರೆ. ಅನೇಕ ವೇಳೆ ಬೇಟೆಯನ್ನು ಸಾಮೂಹಿಕವಾಗಿ ಕೈಗೊಳ್ಳುತ್ತಾರೆ. ಇವರು ಅತ್ಯುತ್ತಮ ಕುಶಲ ಕರ್ಮಿಗಳು ಎನಿಸಿದ್ದಾರೆ. ಹಕ್ಕಿಪಿಕ್ಕಿ ಸಮುದಾಯದ ಹೆಂಗಸರು ಅಲಂಕಾರ ಕೆಲಸಗಳಲ್ಲಿ ಪರಿಣಿತಿ ಪಡೆದಿದ್ದು ಆರ್ಥಿಕ ವಿಷಯದಲ್ಲಿ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿದ್ದಾರೆ. ಬುಟ್ಟಿಗಳನ್ನು ನೇಯುವುದು, ಹಗ್ಗ ಹೆಣೆಯುವುದು ಮುಂತಾದವು ಇವೆ ಸರ್ವೇ ಸಾಮಾನ್ಯ ಕಾರ್ಯಗಳು. ಇರುಳಿಗರು ಹೊಲ ಹೂಳುವ ಕಾರ್ಯವನ್ನು ಸಾಮೂಹಿಕವಾಗಿ ಕೈಗೊಳ್ಳುತ್ತಾರೆ. ಮೂಲಭೂತವಾಗಿ ಇಂದಿನ ಸಂದರ್ಭದಲ್ಲಿ ಅರಣ್ಯದಿಂದ ಪರಕೀಯ ಪ್ರಜ್ಞೆ ಎದುರುಗೊಳ್ಳುವಂತಹ ಬುಡಕಟ್ಟು ಸಮುದಾಯಗಳು ಉತ್ಪಾದನಾ ಚಟುವಟಿಕೆಗಳಿಂದ ಅತಂತ್ರ ಸ್ಥಿತಿಯಲ್ಲಿರುವಾಗ ಅರೆ ಉದ್ಯೋಗಗಳೇ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ.

ಆಧುನಿಕತೆ, ಔದ್ಯೋಗಿಕರಣ ಮತ್ತು ವಾಣಿಜ್ಯ ಬೆಳೆಗಳ ಪ್ರವಾಹದಲ್ಲಿ ಬುಡಕಟ್ಟು ಜನರ ಸಂಸ್ಕೃತಿ ಅದರ ಮುಗ್ದತೆಗಿದ್ದ ಮಾದಕತೆ ಅದರ ನೈಸರ್ಗಿಕ ಸಹಜ, ಕೃಷಿ ಮೂಲ ಜೀವನಕ್ಕಾಗಿ ಬೆಳೆಯುತ್ತಿದ್ದ ರಾಗಿ, ನವಣೆ, ಸಜ್ಜೆ ಎಲ್ಲವೂ ಕೊಚ್ಚಿ ಹೋಗುತ್ತಿದೆ. ಹಣ ಸಂಪಾದಿಸುವ ಭರದಲ್ಲಿ ಎಣ್ಣೆ ಕಾಳುಗಳು, ಏಲಕ್ಕಿ, ಅಡಿಕೆ, ವೆನಿಲ್ಲಾ, ಶುಂಠಿ, ಅರಿಶಿನ ಮುಂತಾದ ಬೆಳೆಗಳು ಆಹಾರ ಧಾನ್ಯಗಳು ಬೆಳೆಗಳನ್ನು ಅಲಂಕರಿಸುತ್ತಿವೆ. ಬುಡಕಟ್ಟು ಸಮುದಾಯದ ವ್ಯವಸ್ಥೆಯ ಪದ್ಧತಿಯಲ್ಲಿ ಈ ರೀತಿಯ ಬೆಳೆಯು ಅವರನ್ನು ಅವಲಂಬಿಸಿರುವುದನ್ನು ಕಾಣಬಹುದು.

ಭಾರತೀಯ ಸಮಾಜ ಯಾವುದೇ ಒಂದು ನಿಶ್ಚಿತವಾದ ಭೂಪ್ರದೇಶವನ್ನು ತನ್ನದು ಅಥವಾ ನಮ್ಮದು ಎಂದುಕೊಂಡು ಒಂದು ಕಡೆ ನೆಲೆ ನಿಂತು ತನ್ನದೇ ಆದ ಆರ್ಥಿಕತೆಯನ್ನು ರೂಢಿಸಿಕೊಂಡು ಅನೇಕ ಬುಡಕಟ್ಟುಗಳು ಜೀವನವನ್ನು ಸಾಗಿಸುತ್ತಿದ್ದಾರೆ.

ಆದಿ ಮಾನವನ ಜೀವನದಲ್ಲಿ ಆಹಾರವೇ ಸಂಪತ್ತು. ಬರುಬರುತ್ತಾ ಆಹಾರ ಸಂಪಾದಿಸಲು ಬೇಕಾದ ಹತಾರಗಳು ಸಂಪತ್ತೆನಿಸಿದವು. ಅವುಗಳ ದೊಡ್ಡ ಸಂಗ್ರಹ ಇಟ್ಟು ಕೊಂಡವನು ಇತರರನ್ನು ಆಳಲು ಪ್ರಾರಂಭಿಸಿ ಒಡೆಯನಾದ ಕಾಲಕ್ರಮದಲ್ಲಿ ಪಶುಗಳು ಗುಲಾಮರು ಮನುಷ್ಯನ ಸಂಪತ್ತೆನಿಸಿದವು.

ಭಾರತದ ಆರ್ಥಿಕ ವ್ಯವಸ್ಥೆಯು ಮಿಶ್ರಜಾತಿಗಳ ಆರ್ಥಿಕ ಪದ್ಧತಿಗೆ ಒಳಪಟ್ಟಿದೆ. ಆದರೆ ಈ ಮಿಶ್ರ ಜಾತಿಗಳ ಉತ್ಪಾದನಾ ಸಾಮರ್ಥ್ಯ ಮಾತ್ರ ಅನನ್ಯವಾದುದು. ಉತ್ಪಾದಿಸುವವರಿಗೆ ಜಾತಿಯ ಶಾಪವಿದೆಯಾದರೂ ಅವರ ಉತ್ಪಾದನಾ ತಂತ್ರಜ್ಞಾನಕ್ಕೆ ಜಾತಿಯ ಮಿತಿ ಇಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಎಲ್ಲಾ ತಳಸಮುದಾಯಗಳ ಬಹುರೂಪಿ ಆರ್ಥಿಕ ಸಾಮರ್ಥ್ಯವನ್ನು. ಅಗಾಧವಾದ ಆರ್ಥಿಕ ಸಾಮರ್ಥ್ಯವು ಕುಗ್ಗಿರುವುದು ಜಾತಿಶ್ರೇಣಿಯ ಯಾಜಮಾನ್ಯದಿಂದ.

ಈ ಬುಡಕಟ್ಟಿನವರು ತೀರಾ ಆರ್ಥಿಕ ಸಂಕಷ್ಟಗಳಿಗೆ ಒಳಗಾಗಿದ್ದಾರೆ. ಇವರಲ್ಲಿ ಕುಲಕಸುಬಾದ ಬಿದಿರಿನಿಂದ ಬುಟ್ಟಿ, ಮೊರ, ಚಾಪೆ, ತೊಟ್ಟಿಲು ಹೀಗೆ ಅನೇಕ ಬಗೆ ಬಗೆಯ ದಿನಬಳಕೆಯ ವಸ್ತುಗಳನ್ನು ತಯಾರಿಸಿ, ಬಂದ ಅಲ್ಪ ಆದಾಯದಿಂದ ಕುಟುಂಬವನ್ನು ಹಣಕಾಸಿನ ಆದಾರಗಳ ಮೇಲೆ ನಿರ್ವಹಿಸುವ ಹೊಣೆಯನ್ನು ಕಷ್ಟಕಾರ್ಪಣ್ಯಗಳ ನಡುವೆಯು ನಡೆಸಿಕೊಂಡು ಹೋಗುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಯುಗ ಪ್ರಾರಂಭವಾದ ನಂತರ ಇವರ ಕುಲಕಸುಬಿಗೆ ಕುತ್ತು ಬಂದೊದಗಿದೆ ಎಂಬ ಅಂಶವನ್ನು ಮನಗಾಣುವುದು ಅಷ್ಟೇ ಸೂಕ್ತವಾಗಿದೆ. ಈ ಹಿನ್ನೆಲೆಯಿಂದಾಗಿ ಆರ್ಥಿಕತೆಯಲ್ಲಿ ಸದೃಢವಾಗಿ ಜೀವನ ನಡೆಸಲು ಶಕ್ತರಾಗಿಲ್ಲ ಎಂಬುದನ್ನು ಇಲ್ಲಿ ತಿಳಿಯಬಹುದಾಗಿದೆ.

ಈ ಸಮುದಾಯದವರಲ್ಲಿ ಕೆಲವರು ಆನೆಗಳನ್ನು ನಿಯಂತ್ರಿಸುವ ಮಾವುತರಾಗಿದ್ದಾರೆ. ಇನ್ನು ಕೆಲವರು ಅರಣ್ಯ ಇಲಾಖೆಯಲ್ಲಿ ದಿನಗೂಲಿ ನೌಕರರಾಗಿದ್ದು

ಸೇವೆ ಸಲ್ಲಿಸುತ್ತಿರುವುದು ಸಂತೋಷಕರವಾಗಿದ್ದರೂ, ಕುಡಿತದ ವ್ಯಸನಕ್ಕೆ ಬಲಿಯಾಗಿ ಕುಟುಂಬದ ನಿರ್ವಹಣೆಗೆ ಸಾಕಷ್ಟು ಹಣ ನೀಡದಿರುವುದು ಕುಟುಂಬದ ಆರ್ಥಿಕ ಹಿನ್ನೆಡೆತೆಗೆ ಮತ್ತೊಂದು ಬಗೆಯ ಕಾರಣವಾಗಿದೆ.

ಹಣಕಾಸಿಗೆ ಸಂಬಂಧಿಸಿದಂತೆ ಮಹಿಳೆಯರು ಸಹ ಕುಲಕಸುಬಿನಿಂದ ಬಂದ ಆದಾಯವನ್ನು ಕುಟುಂಬ ನಿರ್ವಹಣೆಗೆ ನಿಯೋಜಿಸುತ್ತಾ, ಕೂಡಿಡುವ ಸಂಪ್ರದಾಯ ಇವರಲ್ಲಿಲ್ಲ. ಹೀಗೆ ಉಳಿತಾಯದ ಪದ್ಧತಿಯಂತೂ ಇವರಲಿಲ್ಲದಿರುವುದು ವಿಷಾಧಕರ ಸಂಗತಿಯೆನ್ನಬಹುದು.

ಇರುಳಿಗರು ಹಿಂದಿನಿಂದಲೂ ಕಾಡಂಚಿನಲ್ಲಿದ್ದು ಜೀವನ ಸಾಗಿಸುತ್ತಿದ್ದಾರೆ. ಇವರ ಕಸುಬುಗಳು ಜೇನು ಕೊಯ್ಯುವುದು, ಗೆಡ್ಡೆಗೆಣಸು ಸಂಗ್ರಹಿಸಿ ಜೀವನ ಮಾಡುವುದಾಗಿತ್ತು. ಬೇಸಾಯ ಎನ್ನುವುದು ಅವರ ಕನಸಿನ ಮಾತಾಗಿತ್ತು. ಅವರಲ್ಲಿ ಕೂಡಿ ಇಡುವ ಕ್ರಮ ಗೊತ್ತಿರಲಿಲ್ಲ. ಹಣ ಸಂಗ್ರಹಿಸಿ ಜಮಿನುಕೊಳ್ಳುವ ಆಸೆ ಅವರಿಗೆ ಇರಲಿಲ್ಲ. ಏಕೆಂದರೆ ಕಾಡೇ ಅವರ ಜೀವಾಳವಾಗಿತ್ತು. ಕಾಡನ್ನೇ ನಂಬಿ ಬದುಕುತ್ತಿದ್ದರು.

ಭೌತಿಕ ಹಾಗೂ ಸಾಮಾಜಿಕ ಸಂಕೀರ್ಣತೆಗಳಿಂದ ಕೂಡಿದ ಬುಡಕಟ್ಟು ಸಮುದಾಯದ ಸಾಮಾಜಿಕ ವ್ಯವಸ್ಥೆಯಲ್ಲಿ ಬೇರು ಬಿಟ್ಟಂತಹ ಆರ್ಥಿಕ ಚೌಕಟ್ಟಿಗೆ ಸೇರ್ಪಡೆಗೊಂಡವು. ೧೯೪೦ರ ದಶಕಗಳಲ್ಲಿಯೂ ಸಹ ಹಣ ಚಲಾವಣೆಯ ಏಕಮಾನಗಳು ಅನೇಕ ಬುಡಕಟ್ಟಿನವರಿಗೆ ಅಸ್ಪಷ್ಟ ತಿಳುವಳಿಕೆಯಾಗಿದ್ದವು. ಅವರ ಮುಗ್ಧತೆ ಮತ್ತು ಸತ್ಯಸಂಧತೆಯಿಂದಾಗಿ ಅನುಮಾನವಿಲ್ಲದೆ ಹೊರಗಿನ ವ್ಯವಹಾರಗಳಿಗೆ ಬಲಿಯಾದರು. ಇಂದು ಅನೇಕ ಬುಡಕಟ್ಟಿನ ಸಮಾಜದಲ್ಲಿರುವ ಕೇಡಿನ ಪದ್ಧತಿಯೆಂದರೆ ಉಪಕೃತ್ಯತೆ. ಮುಂದುವರಿದ ಸಮುದಾಯದ ಆರ್ಥಿಕ ನಿರ್ವಹಣೆಯೊಂದಿಗೆ ಬುಡಕಟ್ಟಿನ ನಿರ್ವಹಣೆಯು ಸಹ ಬೆರೆತದ್ದರಿಂದ ಈ ಉಪಕೃತ್ಯತೆ ಉದಯವಾಯಿತು. ಬುಡಕಟ್ಟಿನ ಆದಿಕಾಲದ ಹೊಟ್ಟೆಪಾಡಿನ ಸ್ಥಿತಿಯ ರೈತ ಬೆಳೆನಾಶ ಅಥವಾ ತಾನು ಸಂಗ್ರಹಿಸಿಟ್ಟು ಕೊಂಡದ್ದಕ್ಕಿಂತ ಹೆಚ್ಚಿನ ಮೌಲ್ಯದ ಸಾಮಾನುಗಳನ್ನು ಕೊಂಡುಕೊಳ್ಳಲಾಗದ ಸ್ಥಿತಿಯಿಂದಾಗಿ ತಾನು ಹೊರಗಿನ ಮೂಲಗಳಿಂದ ಪಡೆಯಬೇಕಾದ ಅವಕಾಶಗಳಿಂದ ವಂಚಿತನಾದ. ಗುಡ್ಡದ ಮೂಲೆಗಳಲ್ಲಿ ನೆಲೆಸಿದ್ದ ಇರುಳಿಗರು ಹಣವನ್ನಾಗಲಿ, ಧಾನ್ಯವನ್ನಾಗಲಿ ತಮ್ಮ ಬೆಳೆ ನಾಶವಾಗಿ ಇಡೀ ವರ್ಷಕ್ಕೆ ಸಾಕಾಗುವಷ್ಟು ಸಾಲವಾಗಿ ಪಡೆಯುತ್ತಿರಲಿಲ್ಲ. ಆದರೆ ಆಹಾರದ ಅವಶ್ಯಕತೆಗಾಗಿ ಕಾಡಿನಲ್ಲಿರುವ ಕಂದಮೂಲ ಮತ್ತು ಅರಣ್ಯ ಸಸ್ಯಗಳನ್ನು ಸಂಗ್ರಹಿಸಿ ಜೀವನ ನೆಡೆಸುತ್ತಿದ್ದರು.

ಯಾವುದೇ ಸಮುದಾಯದ ಅಧ್ಯಯನಕ್ಕೆ ಆಯಾ ಜನರ ಆರ್ಥಿಕ ಮಟ್ಟದ ಅರಿವು ಅವಶ್ಯಕವಾಗುತ್ತದೆ. ಇರುಳಿಗ ಹಾಗೂ ಹಕ್ಕಿಪಿಕ್ಕಿ ಬುಡಕಟ್ಟು ಕಾಲೋನಿಗಳನ್ನು ಹಾಗೂ ದೊಡ್ಡಿಯನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಪ್ರತಿಯೊಂದು ಇರುಳಿಗ ಹಾಗೂ ಹಕ್ಕಿಪಿಕ್ಕಿಯವರ ಕಾಲೋನಿಯಲ್ಲಿರುವ ಬುಡಕಟ್ಟು ಸಮುದಾಯದ ಶಿಕ್ಷಣ ಹಾಗೂ ಭೂ ಹಿಡುವಳಿ ಆದಾಯ ಇತ್ಯಾದಿ ವಿಚಾರಗಳನ್ನು ಕ್ಷೇತ್ರಕಾರ್ಯ ಮೂಲಕ

ಸಂಗ್ರಹಿಸಲಾಗಿದ್ದು ಬುಡಕಟ್ಟು ಸಮುದಾಯಗಳಿಗಾಗಿ ಸರ್ಕಾರ ಆರ್ಥಿಕ ಚೈತನ್ಯದ ಬಗ್ಗೆ ಅನೇಕ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ ಅವುಗಳ ಅನುಷ್ಠಾನವನ್ನು ಈ ಜನರಿಗೆ ಹಿತಕರವಾಗುವಂತೆ ಕಾರ್ಯ ಪ್ರವೃತ್ತವಾಗಿದೆ. ಭಾರತ ಸರ್ಕಾರವು ಉಪಯೋಜನೆಗಳ ಕೆಲವು ಮತ್ತು ಮಹತ್ವವನ್ನು ಒಪ್ಪಿ ಅವುಗಳ ಯೋಜನೆಗಳಡಿಯಲ್ಲಿ ಹಲವು ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ನಿರಂತರ ಪ್ರಯತ್ನ ನಡೆಸುತ್ತಲೇ ಇದೆ. ಸ್ವಾತಂತ್ರ್ಯ ಬಂದು ಅರವತ್ತುಮೂರು ವರ್ಷಗಳಾಗುತ್ತಾ ಬಂದರೂ ಅನುಷ್ಠಾನಕ್ಕೆ ಗಮನವೀಯುವುದು ಅರ್ಥಪೂರ್ಣವೆನಿಸುತ್ತದೆ. ಏಕೆಂದರೆ ಬುಡಕಟ್ಟು ಸಮುದಾಯಗಳಿಗಾಗಿ ರೂಪಿಸುವ ಕಾರ್ಯಕ್ರಮವನ್ನು ಹಾಗೂ ಅವುಗಳ ಸ್ವರೂಪ ಹಾಗೂ ಬದಲಾವಣೆಗಳ ಬಗ್ಗೆ ವಿವೇಚಿಸುವುದು ಅತ್ಯಗತ್ಯ. ನಿಯಮಿತ ಕಾರ್ಯಕ್ರಮಗಳ ಅನುಷ್ಠಾನದ ವೈಖರಿಯನ್ನು ಪರೀಕ್ಷಣ ದೃಷ್ಟಿಯಿಂದ ಇಂತಹ ವಿಷಯಗಳಲ್ಲಿ ಪರಿಣಿತಿ ಹೊಂದಿದ ತಜ್ಞರ ಸಹಾಯದಿಂದ ಪರಿಷ್ಕರಿಸುವುದು ಮತ್ತು ಈ ಬಗ್ಗೆ ಸೂಕ್ತ ಸಲಹೆಗಳನ್ನು ನೀಡುವುದು ಅತ್ಯಂತ ಅವಶ್ಯಕ. ಯಾವುದೇ ಒಂದು ಯೋಜನೆ ಸರ್ಕಾರದಿಂದ ಜಾರಿಗೊಂಡಾಗ ಸಂಬಂಧಪಟ್ಟಂತಹ ಆಡಳಿತಾಧಿಕಾರಿಗಳು, ಸ್ವಯಂ ಸೇವಾಕಾರ್ಯಕರ್ತರು, ರಾಜಕೀಯ ನೇತಾರರು, ಸಂಬಂಧಿಸಿದ ಜನಾಂಗಗಳು ಇತ್ಯಾದಿ ಎಲ್ಲಾ ಒಗ್ಗೂಡಿ ಯೋಜನೆಗಳನ್ನು ಸಫಲತೆಯ ದಿಕ್ಕಿನೆಡೆ ಸಾಗಿಸಬೇಕು. ಪರೀಕ್ಷಣ ಕ್ರಮ ಮೌಲಿಕವಾಗಿ ನಡೆದಾಗ ಆ ಸಮುದಾಯದ ಅಭಿವೃದ್ಧಿ ಸಾಧ್ಯವಾಗುತ್ತದೆ. ಅನೇಕ ಕಾರ್ಯಕ್ರಮಗಳ ಅನುಷ್ಠಾನಗಳಲ್ಲಿ ಹೊರಗಿದವ ಸ್ವಹಿತಾಸಕ್ತಿಯುಳ್ಳ ಜನರ ಶೋಷಣೆಯಿಂದ ಧಕ್ಕೆ ಉಂಟಾಗಿ ಬುಡಕಟ್ಟು ಸಮುದಾಯಗಳು ಅಡೆತಡೆಗಳನ್ನು ಎದುರಿಸಬೇಕಾಗುತ್ತದೆ. ಎಷ್ಟೇ ಸಲ ಯೋಜನೆಗಳು ನಿಂತ ನೀರಾಗಿ ಅಂದಾಗ ಮಾತ್ರ ಪರಿಸ್ಥಿತಿ ಮತ್ತು ಪರಿಸರಕ್ಕೆ ಬದಲಾವಣೆ ಹೊಂದುವಂತಿರಬೇಕು. ಅವುಗಳನ್ನು ಅನುಷ್ಠಾನಗೊಳಿಸಿದಲ್ಲಿ ಸಾಫಲ್ಯತೆ ಸಿಗುವುದು, ಹಾಗೂ ಜನರ ಪ್ರಗತಿಗೆ ಪೂರಕವಾಗುವಂತವು. ಬೇಟೆ, ಪಶುಪಾಲನೆ, ಕೃಷಿಕೂಲಿ, ಹಾಗೂ ಕೃಷಿ ಇವು ಇವರ ಪ್ರಮುಖ ಆರ್ಥಿಕ ಚಟುವಟಿಕೆಗಳಾಗಿವೆ.

**ಬೇಸಾಯ:**

ಇರುಳಿಗರು ಮೂಲತಃ ಆಹಾರ ಹುಡುಕುತ್ತಾ ಕಾಡಿನಲ್ಲಿ ಅಲೆದಲೆದು ಬದುಕು ಸಾಗಿಸಿದವರು. ಇವರಿಗೆ ವ್ಯವಸಾಯಮಾಡಿ ಗೊತ್ತಿರಲಿಲ್ಲ, ಆದರೆ ಕಾಡಿನಲ್ಲಿ ಸಿಗಬಹುದಾದ ಆಹಾರ ಪದಾರ್ಥಗಳಿಗೆ ಕೊರತೆ ಉಂಟಾದಾಗ ಕುಮರಿ ಬೇಸಾಯವನ್ನು ಮಾಡುವುದರ ಮೂಲಕ ಆ ಸ್ಥಳದಲ್ಲಿ ಬೆಳೆ ಬೆಳೆದು ಭೂಮಿ ಬರಡಾದ ಸಂದರ್ಭದಲ್ಲಿ ಬೇರೆ ಪ್ರದೇಶವನ್ನು ಆಕ್ರಮಿಸಿಕೊಂಡು ಹೋದವರು ಈ ಸಮುದಾಯ. ಇರುಳಿಗ ಸಮುದಾಯದಲ್ಲಿ ಪ್ರಮುಖವಾಗಿ ಸ್ಥಳಾಂತರ ಬೇಸಾಯ ಪದ್ಧತಿ ತುಂಬಾ ಬಳಕೆಯಲ್ಲಿರುವಂತಹುದು. ಈ ಬಗೆಯ ವ್ಯವಸಾಯ ಪುರಾತನವಾಗಿದ್ದು, ಸ್ಟೀಪನ್ ಪಚ್ಸ್ ಹೇಳುತ್ತಾರೆ. Originally most tribes were shifting cultivators burning the forest and sowing ther seeds in the fertile ashes. Many tribes in south Indian in central india in chotanapur and Bengal on the

slope of the Himalayas and in assam practiced until fairly recent time the slash and burn cultivation for which no plough animals were required. The only Implements required for this type of cultivation were the axe and the digging stick.೧೪

ಇರುಳಿಗರು ಈತರಹದ ಬೇಸಾಯವನ್ನು "ಕೆತ್ಲು" ಎಂದು ಕರೆಯುತ್ತಾರೆ. ಬೆಳೆಯನ್ನು ಬೆಳೆದುಕೊಳ್ಳಲು ಯಾವುದೇ ಗೊಬ್ಬರವನ್ನು ಬಳಸದೆ, ಬೇಸಾಯವನ್ನು ಮಾಡಿ ಬೆಳೆ ತೆಗೆದ ಮೇಲೆ ಈ ಸಮುದಾಯವು ಈ ಭೂಮಿ ಬರಡಾಗಿದೆ ಎಂಬ ಭಾವನೆಯಿಂದ ಸಮುದಾಯ ಪ್ರಮುಖವಾದ ಮುಖಂಡ ಅಥವಾ 'ಕಣಿಗಾರ'ನ ಮೈಮೇಲೆ ದೇವರನ್ನು ಬರಿಸಿ ಮತ್ತೊಂದು ಸೂಕ್ತ ಸ್ಥಳವನ್ನು ಆಯ್ದುಕೊಳ್ಳುತ್ತಾರೆ. ಆದರೆ ಇರುಳಿಗರು ಹಿಂದೆ ಕೃಷಿಗೆ ಒಗ್ಗಿದವರಲ್ಲ ವಿಚಿತ್ರವೆಂದರೆ ಕೆಲವೇ ವರ್ಷಗಳ ಹಿಂದೆ ಇರುಳಿಗರು ತಾವು ತಮ್ಮ ವಾಸಸ್ಥಳದ ಸುತ್ತ ಮುತ್ತ ಹಸನು ಮಾಡಿಕೊಂಡಿದ್ದ ಭೂಮಿಯನ್ನು ತಮ್ಮ ಕಣ್ಣೆದುರೇ ಬೇರೆಯವರು ಉತ್ತು-ಬಿತ್ತು ತಮ್ಮದನ್ನಾಗಿಸಿಕೊಂಡರೂ; ತಾವು ಉಳುಮೆ ಮಾಡಿ ವ್ಯವಸಾಯಗಾರರಾಗದೆ ಹಾಗೆಯೇ ಉಳಿದಿದ್ದರು. ಮತ್ತೊಂದು ವಿಪರ್ಯಾಸವೇನೆಂದರೆ ಮಾಲೀಕರಾಗಬೇಕಾಗಿದ್ದ ಜಮೀನಿನಲ್ಲಿ ತಾವೇ ಕೂಲಿಗಳಾಗಿ ದುಡಿಯುತ್ತಿದ್ದಾರೆ.

ಮಾಗಡಿ ತಾಲ್ಲೂಕು ಸಾವನದುರ್ಗದ ಪಶ್ಚಿಮ ದಿಕ್ಕಿನಲ್ಲಿರುವ ಜೋಡುಗಟ್ಟೆ ಕಾಲೋನಿಯಲ್ಲಿ ವಾಸವಾಗಿರುವ ಇರುಳಿಗ ಸಮುದಾಯಕ್ಕೆ ಬ್ರಿಟೀಷ್ ಸರ್ಕಾರ ನಲವತ್ತು ಕುಟುಂಬಗಳಿಗೆ ತಲಾ ಎರಡು ಎಕರೆ ಜಮೀನನ್ನು ಮಂಜೂರು ಮಾಡಿದರು. ಎಂದು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ. "ಬ್ರಿಟೀಷರ ಆಡಳಿತಾವಧಿಯಲ್ಲಿ ಸುಮಾರು ತೊಂಬತ್ತೈದು ವರ್ಷಗಳ ಹಿಂದೆ ಇಂಗ್ಲೀಷ್ ಅಧಿಕಾರಿಯೊಬ್ಬ ಸಾವನದುರ್ಗ ಕಾಡಿನಲ್ಲಿ ಮಟಗ(ಹುಲಿ) ಕೊಲ್ಲಲು ಬಂದಿದ್ದು ಎತ್ತರವಾದ ಸಾವನದುರ್ಗ ಬೆಟ್ಟದಲ್ಲಿ ತಿರುಗಾಡುತ್ತಿರುವಾಗ ತುತ್ತಾತುದಿಯಲ್ಲಿ ಕಾಲುಜಾರಿ ಪ್ರಪಾತಕ್ಕೆ ಬಿದ್ದನಂತೆ, ಬೀಳುವಾಗ ಯಾವುದೇ ಮಂಚಿಕೆಯಲ್ಲಿ ತಡೆದು ಅಲ್ಲಿಯೇ ಬಿದ್ದಿದ್ದ ಮೇಲೆ ಏಳಲಾಗದೇ ಕೆಳಗೆ ಬೀಳಲಾಗದೇ ಮಧ್ಯದಲ್ಲಿ ಸಿಕ್ಕಿ ಹಾಕಿಕೊಂಡು ಆ ಪ್ರದೇಶವೆಲ್ಲಾ ಪ್ರತಿಧ್ವನಿಸುವಂತೆ ಆಕ್ರಂದನ ಮಾಡುತ್ತಿದ್ದ. ಇತರೆ ಆಂಗ್ಲ ಅಧಿಕಾರಿಗಳು, ಸಪಾಯಿಗಳು ಸಂಘಟಿತರಾಗಿ ಬಂದರೂ ಅಪಾಯದಲ್ಲಿ ಸಿಕ್ಕಿ ಹಾಕಿಕೊಂಡಿದ್ದ ಅಧಿಕಾರಿಯನ್ನು ರಕ್ಷಿಸಲು ಸಾಧ್ಯವಾಗಲಿಲ್ಲ, ಎಲ್ಲೆಲ್ಲಿಂದಲೋ ಪರ್ವತಾರೋಹಿಗಳನ್ನು ಕರೆಸಲಾಯಿತು. ಯಾರಿಂದಲೂ ಆತನನ್ನು ಮೇಲೆ ತರಲು ಸಾಧ್ಯವಾಗಲಿಲ್ಲ.ಹೆಜ್ಜೇನು ಬೇಟೆಯಾಡಲು ಮಾಲು ಕಟ್ಟಿಕೊಂಡು ಹೆಬ್ಬಂಡೆ. ಕಡಿದಾದ ಬೆಟ್ಟಗಳ ಕಿಬ್ಬಿಯಲ್ಲಿ ಲೀಲಾಜಾಲವಾಗಿ ಇಳಿದು-ಹತ್ತಿ ಅಭ್ಯಾಸವಿದ್ದ ಇರುಳಿಗರ ಗಂಡಾಳೊಬ್ಬ ಮುಂದೆ ಬಂದು ಸೊಂಟಕ್ಕೆ ಹಗ್ಗ ಕಟ್ಟಿಕೊಂಡು ಪ್ರಪಾತಕ್ಕೆ ಇಳಿದು ಆಂಗ್ಲ ಅಧಿಕಾರಿಯನ್ನು ರಕ್ಷಿಸಿದ. ಜೋಡುಕಟ್ಟೆಯ ಚಾಕಯ್ಯ ಎಂಬುವರ ಮುತ್ತಾತ ಈ ಕಾರ್ಯವನ್ನು ಮಾಡಿದನಂತೆ ಇದರಿಂದ ಸಂತೋಷಗೊಂಡ ಅಧಿಕಾರಿ ಇಡೀ ಹಳ್ಳಿಯ

ಎಲ್ಲಾ ಕುಟುಂಬಗಳಿಗೂ ತಲಾ ಎರಡೆರಡು ಎಕರೆ ಜಮೀನನ್ನು ಮಂಜೂರು ಮಾಡಿಕೊಟ್ಟನಂತೆ.೧೫

ಈ ಉಂಬಳಿಯ ಜಮೀನಿನಲ್ಲಿ ರಾಗಿ, ಅಡಿಕೆ, ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಈ ಮೂಲಕ ನಮಗೆ ಸ್ವಾತಂತ್ರ್ಯ ಪೂರ್ವ ಭಾತರದಲ್ಲಿಯೇ ಇರುಳಿಗರು ಒಂದೆಡೆ ನೆಲೆನಿಂತು ಬೇಸಾಯ ಮಾಡುತ್ತಿದ್ದರು, ಎನ್ನುವುದಕ್ಕೆ ಸ್ಪಷ್ಟ ನಿದರ್ಶನಗಳನ್ನು ಒದಗಿಸುತ್ತದೆ.

ಇರುಳಿಗರು ಇತ್ತೀಚೆಗೆ ತಮ್ಮ ಸುತ್ತ ಮುತ್ತಲಿನ ಒಕ್ಕಲಿಗರು ಲಿಂಗಾಯಿತರು ಮುಂತಾದ ಬುಡಕಟ್ಟು ಸಮುದಾಯಗಳನ್ನು ನೋಡಿ ಕೆಲವರು ಕಾಡಿನಂಚಿನ ಭೂಮಿಯನ್ನು ಸರ್ಕಾರದಿಂದ ದರಖಾಸ್ತು ಮಾಡಿಕೊಂಡು ಸಾಗುವಳಿ ಮಾಡಿ ರಾಗಿ, ಜೋಳ, ಅವರೆ, ತೊಗರಿ, ನವಣೆ, ಸಜ್ಜೆ, ಹಾರಕ, ಹುಚ್ಚೆಳ್ಳು ಮುಂತಾದ ಧಾನ್ಯಗಳನ್ನು ಬೆಳೆಯುತ್ತಿದ್ದಾರೆ. ಹೆಚ್ಚಿನ ಜನ ಕೂಲಿ ಕೆಲಸ ಮಾಡುತ್ತಿದ್ದಾರೆ. ಕೆಲವರು ಜಮೀನುದಾರರಲ್ಲಿ ಪಾಲಿಗೆ ರೇಷ್ಮೆ ಬೆಳೆ ಬೆಳೆಯುತ್ತಿದ್ದಾರೆ. ವ್ಯವಸಾಯ ಸಂಬಂಧಿ ಎಲ್ಲಾ ಆಚರಣೆಗಳನ್ನು ತಾವು ವಾಸಿಸುವ ಪರಿಸರದ ಪ್ರಭಾವದಿಂದ ರೂಢಿಸಿಕೊಂಡಿದ್ದಾರೆ. ಮುಂಗಾರು ಮಳೆಯ ಹೊನ್ನಾರು, ಚಿತ್ತನೆಯ ಕೂರಿಗೆ ಪೂಜೆ, ಕಾಚಕ್ಕಿ ಮುನಿ, ಕಬಾವು ಮುನಿ, ಕೂದ ಮುನಿ ಹೀಗೆ ಎಲ್ಲಾ ಆಚರಣೆಗಳನ್ನು ನಿಷಿದ್ಧತೆಗಳನ್ನು ಅಳವಡಿಸಿಕೊಂಡಿದ್ದಾರೆ.

**ಪಶುಪಾಲನೆ :**

ಇರುಳಿಗರು ಒಂದೆಡೆ ನೆಲೆನಿಂತು ವ್ಯವಸಾಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ನಂತರ ಕೋಳಿ, ಕುರಿ, ಮೇಕೆ, ದನ, ಎಮ್ಮೆ ಇತ್ಯಾದಿಗಳ ಸಾಕಾಣಿಕೆ ಮಾಡುವುದನ್ನು ಕಾಣಬಹುದು. ದನಗಳನ್ನು ಕಟ್ಟಲು, ಕುರಿ–ಮೇಕೆಗಳನ್ನು ಕೂಡಲು ಹಿಂದಿನ ಗೂಡುಗಳಂತೆಯೇ ಇರುವ ಗುಡಿಸಲುಗಳನ್ನು ನಿರ್ಮಿಸುತ್ತಾರೆ, ಹೀಗೆ ಪ್ರತ್ಯೇಕ ಮನೆ ನಿರ್ಮಿಸುವ ಕೆಲಸವನ್ನು ಇರುಳಿಗರು ಮಾಡುವುದರ ಮೂಲಕ ಪಶುಪಾಲನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಮೀಪದ ಊರುಗಳಿಗೆ ಹಾಲನ್ನು ತಾವು ಸ್ವತಃ ಹಾಕುವುದರ ಮೂಲಕ ಅಭಿವೃದ್ಧಿಯನ್ನು ಮಾಡಿಕೊಳ್ಳುವ ಮನಸ್ಸು ಈ ಸಮುದಾಯದಾಗಿದೆ. ಅಲ್ಲದೆ ಹಾಲು ಉತ್ಪಾದಕರ ಸಹಕಾರ ಸಂಘಕ್ಕೆ ಹಾಲು ಹಾಕುವಂತಹ ಇರುಳಿಗರು ಇಂದು ಕಂಡುಬರುತ್ತಾರೆ. ವ್ಯವಸಾಯವನ್ನು ಪ್ರಮುಖವಾಗಿ ಮುಖ್ಯ ಉದ್ಯೋಗವಾಗಿ ಮಾಡಿಕೊಂಡಿದ್ದರಿಂದ ಉಳುಮೆಗೆ ಪ್ರತಿಕೂಲವಾಗುತ್ತದೆ, ಎಂಬ ಅಭಿಪ್ರಾಯವನ್ನು ಹೊಂದಿರುತ್ತಾರೆ.

**ಬುಟ್ಟಿ ನೇಯುವಿಕೆಯ ಪ್ರಾವೀಣ್ಯತೆ :**

ಹಿಂದೆ ಕಾಡುಗಳಲ್ಲಿ ಸಿಗುತ್ತಿದ್ದ ಆಹಾರ ಪದಾರ್ಥ ಹಾಗೂ ಇತರ ವಸ್ತುಗಳ ಸಂಗ್ರಹಣೆ ಮತ್ತು ಬೇಟೆ ಇರುಳಿಗರ ಮುಖ್ಯವಾಗಿದ್ದ ವೃತ್ತಿಗಳಾಗಿದ್ದವು. ದಟ್ಟವಾಗಿದ್ದ ಅರಣ್ಯಗಳ ನಿವಾಸಿಗಳಾಗಿದ್ದ ಇವರು ಕಾಡಿನ ಉದ್ದಗಲಕ್ಕೂ ಅಲೆದಾಡಿ ಅಲ್ಲಿ

ಸಿಗುತ್ತಿದಂತಹ ಆಹಾರ ಪದಾರ್ಥ, ಸೌದೆ, ಇತ್ಯಾದಿಗಳನ್ನು ಸಂಗ್ರಹಿಸಿಕೊಂಡು ಬರುತ್ತಿದ್ದರು. ಸರ್ಕಾರವು ಅರಣ್ಯ ರಕ್ಷಣೆ ಮತ್ತು ಕಾಡು ಪ್ರಾಣಿ ಸಂರಕ್ಷಣೆಗಾಗಿ ಜಾರಿಗೆ ತಂದಿರುವ ಕಾನೂನುಗಳನ್ನು ಇವರನ್ನು ಎಚ್ಚರಿಕೆಯಿಂದ ಅರಣ್ಯಾಧಿಕಾರಿಗಳ ಕಣ್ಣು ತಪ್ಪಿಸಿ ಕಾಡುಗಳಲ್ಲಿ ದೊರಕುವ ನಾರು-ಬೇರುಗಳನ್ನು ಸಂಗ್ರಹಿಸುವ ಕೆಲಸವನ್ನು ಮಾಡುತ್ತಿದ್ದಾರೆ.

ಇರುಳಿಗರ ಅತ್ಯಂತ ಮುಖ್ಯವಾದ ಕಸುಬುಗಳಲ್ಲಿ ಬಿದಿರಿನ ಕೆಲಸವು ಒಂದು. ಇವರು ಅರಣ್ಯ ಪ್ರದೇಶಗಳಲ್ಲಿ ಸಿಗುವ ಬೆತ್ತವನ್ನು ಬಳಸಿ ಬುಟ್ಟಿ, ಕುಕ್ಕೆ, ತೊಟ್ಟಿಲು, ಮೀನು ಹಿಡಿಯುವ ಮಂಕರಿ ಇತ್ಯಾದಿಗಳನ್ನು ತಯಾರಿಸುವಲ್ಲಿ ನುರಿತರ ಬೆತ್ತ-ಬಿದಿರಿನಿಂದ ದಿನಬಳಕೆಗೆ ಬೇಕಾಗುವ ಕುಕ್ಕೆ, ಮೊರ, ವಂದ್ರಿ, ಗೆರ್ಸಿ, ತಡುಕು, ಕೋಳಿಪಂಜರ, ಕೊಂಗ, ಮೀನು ಹಿಡಿಯುವ ತಟ್ಟೆ, ಮತ್ತು ದವಸಧಾನ್ಯಗಳನ್ನು ಜೋಪಾನವಾಗಿ ಸಂಗ್ರಹಿಸಿಡುವುದಕ್ಕೆ ಅಗತ್ಯವಾದ ದೊಡ್ಡ-ದೊಡ್ಡ ಕೊಮ್ಮೆಗಳು ಇತ್ಯಾದಿಗಳನ್ನು ತಯಾರಿಸುವಲ್ಲಿ ಸಿದ್ಧ ಹಸ್ತರು. ಅರಣ್ಯಗಳಿಗೆ ಹೋಗಿ ಅಧಿಕಾರಿಗಳ ಗಮನಕ್ಕೆ ಬರದ ರೀತಿಯಲ್ಲಿ ಬಹುಜಾಗರೂಕತೆಯಿಂದ ಬಿದಿರನ್ನು ಆರಿಸಿ ತಂದುಕೊಂಡು, ವರ್ಷ ಪೂರ್ತಿ ಬಿದಿರಿನ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಮೊದಲು ಇವರು ಕತ್ತಿಯಿಂದ ಬಿದಿರಿನ ಭಾಗವನ್ನು ಕೆರೆದು ಹಾಕಿ ತಮಗೆ ಬೇಕಾದಷ್ಟು ಉದ್ದ, ಅಗಲ, ಹಾಗೂ ದಪ್ಪದ ಪಟ್ಟಿಗಳನ್ನಾಗಿ ಕತ್ತರಿಸಿಟ್ಟಿಕೊಂಡು ಬುಟ್ಟಿ, ತಟ್ಟೆ ಇತ್ಯಾದಿಗಳನ್ನು ಹೆಣೆಯುತ್ತಾರೆ. ಕಬ್ಬಿಣದ ಕತ್ತಿಯಿಂದ ಬೇಕಾದ ಅಳತೆಗೆ ಬಿದಿರನ್ನು ಕತ್ತರಿಸಿ ಅಚ್ಚೆಯನ್ನಾಗಿ ಪರಿವರ್ತಿಸಿ ಸ್ತ್ರೀಯರೂ ಹಾಗೂ ಪುರುಷರೂ ಬಿದಿರಿನ ವಸ್ತುಗಳನ್ನು ಸಿದ್ಧಪಡಿಸುತ್ತಾರೆ. ಇಲ್ಲಿನ ವಕ್ತೃಗಳು ಹೇಳುವ ಪ್ರಕಾರ ಅರ್ಧಗಂಟೆಯಲ್ಲಿ ಒಂದು ಮೊರವನ್ನು ನಲವತ್ತು ನಿಮಿಷದಲ್ಲಿ ದೊಡ್ಡಕುಕ್ಕೆಯನ್ನು, ಚಿಕ್ಕಕುಕ್ಕೆಯನ್ನು ಇಪ್ಪತ್ತು ನಿಮಿಷಗಳಲ್ಲಿ ತಯಾರಿಸಬಲ್ಲರು. ಆದರೆ ಒಂದು ಗೆರ್ಸಿ ಮಾಡಲು ಸುಮಾರು ಎರಡು ಗಂಟೆಗಳ ಕಾಲ ಬೇಕಾಗುತ್ತದೆ. ಬಿದಿರಿನ ಈ ಸಿದ್ಧವಸ್ತುಗಳ ಬೆಲೆ ೫೦ರೂಗಳಿಂದ ಹಿಡಿದು ೧೦೦-೧೨೦ರೂಗಳವರೆಗೆ ಇರುತ್ತದೆ, ಮತ್ತು ಇವುಗಳನ್ನು ಅಕ್ಕ-ಪಕ್ಕದ ಹಳ್ಳಿಗಳಲ್ಲಿರುವ ರೈತರಿಗೆ ಹಾಗೂ ಇತರ ಬಳಕರದಾರರಿಗೆ ಮಾರುತ್ತಾರೆ. ಕೆಲವು ಸಲ ಇವರು ಈ ವಸ್ತುಗಳನ್ನು ದಳ್ಳಾಳ್ಳಿಗಳಿಗೆ ಮಾರುವುದುಂಟು. ಇವರು ತಮ್ಮ ಉಪಯೋಗಕ್ಕಾಗಿ ಒಣಗಿದ ಕಡ್ಡಿಗಳನ್ನು ಒಟ್ಟಾಗಿ ಕಟ್ಟಿ ಪೊರಕೆಗಳನ್ನು ಮಾಡಿಕೊಳ್ಳುತ್ತಾರೆ.

ಹೀಗೆ ಇರುಳಿಗರು ಬಿದಿರಿನಿಂದ ರೇಷ್ಮೆ ಸೊಪ್ಪಿನ ಗೂಡುಗಳು, ತಟ್ಟೆಗಳು, ಚಂದ್ರಿಕೆಗಳು, ಮೊರಗಳನ್ನು ಹೆಣೆಯುತ್ತಿದ್ದರು. ಆದರೆ ಇಂದು ಅರಣ್ಯದ ಕಾನೂನುಗಳು ಅದಕ್ಕೆ ತಡೆಯೊಡ್ಡಿ ಈ ಜನರ ಜೀವನದ ಮೇಲೆ ಬಹಳ ಕೆಟ್ಟ ಪರಿಣಾಮವನ್ನುಂಟು ಮಾಡಿದೆ.

**ಹಕ್ಕಿಪಿಕ್ಕಿಯವರ ಆರ್ಥಿಕತೆ :**

ಹಕ್ಕಿಪಿಕ್ಕಿಯರು ನಾನಾ ಕಸುಬುಗಳ ಜನ. ಅವರು ಯಾವ ಸಂದರ್ಭ ಮತ್ತು ಯಾವ ಪ್ರದೇಶಗಳಲ್ಲಿದ್ದಾರೆಂಬುದು ಅವರ ಕಸುಬುಗಳ ಸ್ವರೂಪವನ್ನು ತಿಳಿಸುತ್ತದೆ. ಆದ್ದರಿಂದ ಅವರ ಮುಖ್ಯವಾದ ಕಸುಬು ಯಾವುದು ಉಪಕಸುಬು ಯಾವುದೆಂದು ಹೇಳಲು ಸಾಧ್ಯವಿಲ್ಲದಷ್ಟು ವೈವಿಧ್ಯಮಯವಾಗಿರುತ್ತದೆ. ಅವರ ಔದ್ಯೋಗಿಕ ಸ್ವರೂಪ. ಅವರು ಅಲೆಮಾರಿಗಳು ಮತ್ತು ಅರೆ ಅಲೆಮಾರಿಗಳಾಗಿರುವುದರಿಂದ ಈ ಬಗೆಯ ವ್ಯತ್ಯಾಸಗಳು ಕಂಡುಬರುತ್ತವೆ. ಅವರು ಅಲೆಮಾರಿಗಳಾಗಿದ್ದಾಗ ವ್ಯಾಪಾರ ಮುಖ್ಯವಾಗಿ ಬೇಟೆ ಮತ್ತು ಇತರ ಗುಡಿಕೈಗಾರಿಕೆಗಳು ಉಪಕಸುಬುಗಳಾಗಿರಬಹುದು. ಇಲ್ಲವೇ ಬರೀ ಬೇಟೆಯ ಉದ್ಯೋಗವೂ ಆಗಿರಬಹುದು. ಇತ್ತೀಚೆಗೆ ಸರ್ಕಾರದ ಪುನರ್ವಸತಿ ಯೋಜನೆಯಡಿ ಖಾಯಂ ಆಗಿ ವಾಸಿಸುವ ಕಡೆ ಕೆಲವು ಕುಟುಂಬಗಳನ್ನು ಹೊರತುಪಡಿಸಿ ಉಳಿದವು ವ್ಯವಸಾಯವನ್ನು ಅವಲಂಬಿಸಿವೆ. ವ್ಯವಸಾಯದೊಂದಿಗೆ ಅವರು ಆಗಾಗ್ಗೆ ಬೇಟೆಯನ್ನು ಮಾಡುತ್ತಾರೆ. ಹೆಂಗಸರು ಭಾಗಶಃ ಭಿಕ್ಷೆ ಮಾಡುತ್ತಾರೆ ಜೊತೆಯಲ್ಲಿ ಸಣ್ಣ ವ್ಯಾಪಾರವನ್ನೂ ಮಾಡುತ್ತಾರೆ.

**ವ್ಯಾಪಾರ ಜೀವನ:**

ಮುಖ್ಯವಾಗಿ ಹೆಂಗಸರು ತಾವು ಭಿಕ್ಷೆ ಮಾಡುವ ಕಾಲದಲ್ಲೆ ಹಲವಾರು ಸಾಮಗ್ರಿಗಳನ್ನು ಮಾರಾಟ ಮಾಡುತ್ತಾರೆ. ಸೂಜಿ, ದಬ್ಬಳ, ಪಿನ್ನ, ಕಸ್ತೂರಿ, ಗೋರಂಜನ, ಕರಿಮಣಿ, ಹಾಲಮಣಿ, ನವುಲತುಪ್ಪ, ಉಡನತುಪ್ಪ, ರುದ್ರಾಕ್ಷಿ, ಸಣ್ಣರುದ್ರಾಕ್ಷಿ ಮುಂತಾದ ಸಾಮಗ್ರಿಗಳನ್ನು ಮಾರಾಟಮಾಡುತ್ತಾರೆ. ಕಸ್ತೂರಿ ಎಂಬುದು ಗಂಡಸರು ಬೇಟೆ ಮಾಡಿದ ಸಂದರ್ಭದಲ್ಲಿ ಕಸ್ತೂರಿ ಮೃಗದಿಂದ ತರುವುದು. ಇದು ನೇಪಾಳದ ಕಡೆ ಸಗುತ್ತದೆ. ಜೇನುತುಪ್ಪ, ಹುಲಿಉಗುರು, ಹದ್ದಿನ ಉಗುರು, ಹುಲಿಹಲ್ಲು, ಐದುಮುಖದ (ಪಂಚಮುಖ) ರುದ್ರಾಕ್ಷಿ, ಏಕಮುಖಿ ರುದ್ರಾಕ್ಷಿ ಇವು ಸಹ ನೇಪಾಳದ ಕಡೆ ಸಿಗುವ ಒಂದು ಬಗೆಯ ತೆಂಗಿನಕಾಯಿಯಲ್ಲಿ ಸಗುತ್ತವೆ. ಕಸ್ತೂರಿ ನೀರಿಗೆ ಹಾಕಿದರೆ, ದಾರದಂತೆ ಬಿಟ್ಟುಕೊಳ್ಳುತ್ತದೆ. ಇದು ಸುವಾಸನೆಯಿಂದ ಕೂಡಿರುತ್ತದೆ. ಹುಲಿಯ ಮೀಸೆ, ಸಣ್ಣ ಹುಲಿಯ ಉಗುರು, ಹುಲಿಯ ಚರ್ಮ ಹೆಂಗಸರು ತಯಾರಿಸುವ ಚೌಲಿ, ಅಲ್ಲದೆ ಅವರು ಮಕ್ಕಳಿಗಾಗಿ ಪೀಪಿ, ಪಿನ್ನ, ಏರ್‌ಪಿನ್ನ ಇವುಗಳನ್ನು ಕೊಂಡು ತಂದು ಮಾರಾಟಮಾಡುತ್ತಾರೆ. ಚೌಲಿಗಳನ್ನು ಡಜನ್‌ಗಟ್ಟಲೆ ಪಟ್ಟಣದ ಅಂಗಡಿಗಳಿಗೂ ಮಾರಾಟಮಾಡುತ್ತಾರೆ. ಒಂದಕ್ಕೆ ೩ ರೂಪಾಯಿನಿಂದ ೭ ರೂಪಾಯಿಯವರೆಗೆ ಹಣ ದೊರೆಯುತ್ತದೆ. ರುದ್ರಾಕ್ಷಿಗಳನ್ನು ೧ ಮುಖದಿಂದ ೨೧ ಮುಖದವುಗಳವರೆಗೆ ತಯಾರಿಸುತ್ತಾರೆ. ತ್ರಿಮೂರ್ತಿ–ಮೂರುಮುಖದ್ದು ಮತ್ತು ಗೌರೀಶಂಕರ–ಎರಡು ಮುಖದ್ದು. ಇವುಗಳಿಗೆ ಬಹಳ ಬೇಡಿಕೆ ಇದೆಯೆಂದು ಹೇಳುತ್ತಾರೆ. ರುದ್ರಾಕ್ಷಿಗಳನ್ನು ಮಥುರಾದಲ್ಲೂ, ಸಾಲಿಗ್ರಾಮಗಳನ್ನು ಹರಿದ್ವಾರದಲ್ಲೂ, ಬಲಮುರಿ ಶಂಖಗಳನ್ನು ಸಮುದ್ರದ ತೀರದಲ್ಲೂ ಸಂಗ್ರಹಿಸುತ್ತಾರೆ.

ಹಕ್ಕಿಪಿಕ್ಕಿಯರು ತಾವು ಕಡಿಮೆ ಬೆಲೆಯನ್ನು ಕೊಟ್ಟು ಸಾಮಗ್ರಿಗಳನ್ನು ಕೊಂಡು, ಅವುಗಳನ್ನು ಹೊತ್ತುಕೊಂಡು ಅಡ್ಡಾಡುತ್ತ, ಅಧಿಕ ಬೆಲೆಗೆ ಮಾರಾಟಮಾಡಿ ಲಾಭವನ್ನು ಗಳಿಸುತ್ತಾರೆ. ಕೆಲವು ವಸ್ತುಗಳ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ.

| **ಸಾಮಗ್ರಿಗಳು** | **ಕೊಳ್ಳುವ ಬೆಲೆ(ರೂಗಳಲ್ಲಿ)** | **ಮಾರಾಟದ ಬೆಲೆ(ರೂಗಳಲ್ಲಿ)** |
|---|---|---|
| ೧. ನರಿಕೊಂಬು | ೫೦೦ | ೧೨೦೦ |
| ೨. ತ್ರಿಮೂರ್ತಿ | ೪೦೦ | ೮೫೦ |
| ೩. ಏಕಮುಖ | ೧೦೦೦ | ೧೫೦೦ |
| ೪. ಸಣ್ಣ ಏಕಮುಖ | ೨೦೦ | ೪೫೦ |
| ೫. ಕಸ್ತೂರಿ | ೧೫೦ | ೩೦೦ |
| ೬. ಅಂಗು | ೫೦ | ೧೫೦ |
| ೭. ೧೦೮ ರುದ್ರಾಕ್ಷಿ ಸರ | ೪೦೦ | ೮೫೦ |
| ೮. ಸಾಲಿಗ್ರಾಮ | ೭೦೦ | ೧೪೦೦ |

ನಾಗಮಣಿ, ಹದ್ದಿನ ಚರ್ಮ, ಸಾಲಿಗ್ರಾಮಗಳು, ಬವಾಳಿ, ಸ್ಫಟಿಕದ ಸರ, ದಬ್ಬಳ, ರುದ್ರಾಕ್ಷಿ, ಕಾಡುಕೋಳಿ ಜುಟ್ಟು, ತಲೆಮದ್ದು ಮುಂತಾದ ವಸ್ತುಗಳು ತಯಾರಿಕೆ ಮಾಡಿ ಆರ್ಥಿಕವಾಗಿ ಅಭಿವೃದ್ಧಿಯನ್ನು ಸಾಧಿಸುತ್ತಿದ್ದಾರೆ.

**ಬುಡಕಟ್ಟು ಆರ್ಥಿಕ ಸಮಸ್ಯೆಗಳು :**

ಬುಡಕಟ್ಟು ಸಮುದಾಯಗಳು ಅನೇಕ ಆರ್ಥಿಕ ತೊಂದರೆಗಳಿಗೆ ಒಳಗಾಗಿದ್ದಾರೆ. ಮೊದಲು ಅವರು ಆರ್ಥಿಕವಾಗಿ ಸರಳ ಹಾಗೂ ಸ್ವಾವಲಂಬನೆಯ ಜೀವನವನ್ನು ಸಾಗಿಸುತ್ತಿದ್ದರು. ಅವರ ಬಗೆಗೆ ಬ್ರಿಟೀಷ್ ಸರ್ಕಾರವು ಅನುಸರಿಸಿದ ಹೊಸ ಕಂದಾಯ ನೀತಿ, ಕಾಯ್ದಿಟ್ಟ ಪ್ರದೇಶದ ನೀತಿ, ಭೂಮಿ ಗೇಣಿ ಪದ್ಧತಿ ಮೊದಲಾದವುಗಳಿಂದಾಗಿ ಅವರು ಆರ್ಥಿಕ ಸ್ವಾವಲಂಬನೆಯನ್ನು ಕಳೆದುಕೊಂಡರು. ಸಂಚಾರಿ ಬೇಸಾಯ ಪದ್ಧತಿ, ಅಲೆಮಾರಿ ಜೀವನದಿಂದ ಅವರಿಗೆ ಬರುವ ಆದಾಯ ತುಂಬಾ ಕಡಿಮೆ. ಅಡವಿಗಳೂ ನಾಶವಾಗುತ್ತಿವೆ. ಅವರು ಅನುಸರಿಸುವ ಬೇಸಾಯ ಪದ್ಧತಿ, ಉಪಯೋಗಿಸುವ ಉಪಕರಣಗಳು ಶತಮಾನಗಳಷ್ಟು ಹಳೆಯವು. ಅಶಿಕ್ಷಿತರೂ, ಮುಗ್ಧರೂ, ಆಗಿರುವ ಬುಡಕಟ್ಟು ಸಮುದಾಯಗಳನ್ನು ಲಾಭಕೋರ ವ್ಯಾಪಾರಿಗಳು ಮೊದಲಾದವರು ಶೋಷಣೆ ಮಾಡುತ್ತಿದ್ದಾರೆ. ಜಮೀನುದಾರರು ಭೂಮಿ ಇಲ್ಲದ ಬುಡಕಟ್ಟು ಸಮುದಾಯಗಳಿಂದ ದುಡಿಸಿಕೊಂಡು ಅವರನ್ನು ವಂಚಿಸುತ್ತಿದ್ದಾರೆ. ವ್ಯಾಪಾರಸ್ಥರು ಒಂದಕ್ಕೆ ಹತ್ತರಷ್ಟು ಬೆಲೆಗೆ ಸಾಮಾನುಗಳನ್ನು ಮಾರುತ್ತಿದ್ದಾರೆ. ಇವೇ ಮೊದಲಾದವುಗಳಿಂದಾಗಿ ಬುಡಕಟ್ಟು ಸಮುದಾಯಗಳು ಕಡುಬಡತನದಿಂದ ತೊಳಲುತ್ತಿದ್ದಾರೆ.

## ಆದಿವಾಸಿಗಳ ಆರ್ಥಿಕ ಸಮಸ್ಯೆಗಳಿಗೆ ಪ್ರಮುಖ ಕಾರಣಗಳು ಈ ಕೆಳಕಂಡಂತಿರುವುವು.

**ಶೋಷಣೆ :**

ಪರಿಶಿಷ್ಟ ಪಂಗಡಗಳ ಜನರ ಅಜ್ಞಾನ, ಅನಕ್ಷರತೆ, ಮುಗ್ಧತೆಗಳನ್ನು ತಮ್ಮ ಬಂಡವಾಳವನ್ನಾಗಿಸಿಕೊಂಡು ಹೊರನಾಡಿನಿಂದ ಬಂದ ಗುತ್ತಿಗೆದಾರರು ಹಾಗೂ ವ್ಯಾಪಾರಸ್ಥರು ಅವರನ್ನು ಶೋಷಣೆ ಮಾಡುತ್ತಿದ್ದಾರೆ.

**ಹೊಸ ಕಾನೂನಿನಿಂದ ಸ್ವಾವಲಂಬನೆಗೆ ಧಕ್ಕೆ :**

ಬುಡಕಟ್ಟು ಸಮುದಾಯಗಳು ತಾವು ದೀರ್ಘಕಾಲದಿಂದಲೂ ವಾಸಿಸಿಕೊಂಡು ಬಂದ ನೆಲೆಯ ಪರಮಾಧಿಕಾರವು ತಮ್ಮದೇ ಎಂಬ ನಂಬಿಕೆವುಳ್ಳವರಾಗಿದ್ದಾರೆ. ಸಾಕಷ್ಟು ಪ್ರಮಾಣದಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ಪಡೆದಿದ್ದ ಬುಡಕಟ್ಟು ಸಮುದಾಯಗಳು ಬ್ರಿಟೀಷರ ಆಳ್ವಿಕೆಯ ಅವಧಿಯಲ್ಲಿ ಸರ್ಕಾರವು ಅನುಸರಿಸಿದ ಹೊಸ ಕಂದಾಯ ನೀತಿ, ಭೂಮಿ ಗೇಣಿ ಪದ್ಧತಿ ಮುಂತಾದವು ಬುಡಕಟ್ಟು ಸಮುದಾಯಗಳ ಸ್ವಾವಲಂಬನೆಯನ್ನು ಹಾಳುಗೆಡುವಿವೆ.

**ಲಾಭದಾಯಕವಲ್ಲದ ಕೃಷಿ ಕಾರ್ಯ :**

ಬುಡಕಟ್ಟು ಸಮುದಾಯಗಳು ಅನುಸರಿಸುತ್ತಿರುವ ಸಾಂಪ್ರದಾಯಿಕ ಶೈಲಿಯ ಕೃಷಿಕಾರ್ಯವು ಲಾಭದಾಯಕವಲ್ಲದ್ದಾಗಿದೆ. ಇಳುವರಿ ಕಡಿಮೆ. ಅವರು ಅನುಸರಿಸುವ "ಸ್ಥಳ ಬದಲಿಕೆಯ ಬೇಸಾಯ ಕ್ರಮ"ದಿಂದ ಕೃಷಿಯ ಪೂರ್ಣ ಪ್ರಯೋಜನ ಅವರಿಗೆ ಲಭ್ಯವಾಗುತ್ತಿಲ್ಲ. ತತ್ಫಲವಾಗಿ ಅರಣ್ಯವೂ ನಾಶವಾಗುತ್ತಿದೆ.

**ಭೂಮಿಯ ಒಡೆತನದ ಹಕ್ಕನ್ನು ಕಸಿದುಕೊಂಡಿದ್ದರಿಂದ ಆಘಾತ :**

ಬುಡಕಟ್ಟು ಸಮುದಾಯ ಪ್ರದೇಶಗಳಲ್ಲಿನ ಕೃಷಿ ಯೋಗ್ಯವಾದ ಭೂಮಿಯು ಕಾನೂನಿನಾತ್ಮಕವಾಗಿ ಬುಡಕಟ್ಟು ಸಮುದಾಯೇತರ ಪಾಲಾಗಿದ್ದು, ಹೆಚ್ಚಿನ ಬುಡಕಟ್ಟು ಸಮುದಾಯಗಳಿಗೆ ಭೂಮಿಯ ಒಡೆತನದ ಹಕ್ಕು ಇಲ್ಲವಾಗಿದೆ. ತಾವು ಹಿಂದಿನಿಂದಲೂ ಅನುಭವಿಸಿಕೊಂಡು ಬಂದಿದ್ದ ಜಮೀನನ್ನು ತಮಗೇ ಹಿಂತಿರುಗಿಸಬೇಕೆಂದೂ, ಅರಣ್ಯಗಳ ಮೇಲಿನ ತಮ್ಮ ಪರಂಪರಾಗತ ಹಕ್ಕನ್ನು ಮಾನ್ಯ ಮಾಡಬೇಕೆಂದು ಅವರು ಆಗ್ರಹಪೂರ್ವಕವಾಗಿ ಕೋರುತ್ತಿದ್ದಾರೆ.

**ಬ್ಯಾಂಕ್ ಮತ್ತಿತರ ಆಧುನಿಕ ಆರ್ಥಿಕ ಸೌಲಭ್ಯಗಳ ಕೊರತೆ :**

ಬುಡಕಟ್ಟು ಸಮುದಾಯ ಪ್ರದೇಶಗಳಲ್ಲಿನ ಬ್ಯಾಂಕ್‌ಗಳ ಸೇವಾ ಸೌಲಭ್ಯಗಳು ಅತ್ಯಲ್ಪವಾಗಿವೆ. ಅವರು ಮಾಮೂಲಿ ಲೇವಾದೇವಿಗಾರರಿಂದ ಸಾಲ ಪಡೆದು

ಶೋಷಿಸಲ್ಪಡುವುದು ಬಹಳವಾಗಿ ಮುಂದುವರಿದಿದೆ. ಇದರಿಂದಾಗಿ ಅವರು ತಮ್ಮ ಸಾಲವನ್ನು ಮನ್ನಾ ಮಾಡಲು, ಒತ್ತೆ ಇರಿಸಿಕೊಂಡಿರುವ ತಮ್ಮ ಜಮೀನನ್ನು ತಮಗೇ ಹಿಂತಿರುಗಿಸುವಂತೆ ಮಾಡಲು ಕೋರಿಕೊಳ್ಳುತ್ತಿದ್ದಾರೆ.

### ನಿರುದ್ಯೋಗ :

ಬುಡಕಟ್ಟು ಸಮುದಾಯ ಯುವಕ ಯುವತಿಯರು ಬಹಳಷ್ಟು ಮಂದಿ ನಿರುದ್ಯೋಗಿಗಳು ಇಲ್ಲವೇ ಅರೆ ಉದ್ಯೋಗಿಗಳಾಗಿದ್ದಾರೆ. ಅವರು ಅನಕ್ಷರತೆ ಮತ್ತು ಉದ್ಯೋಗಗಳ ಅಲಭ್ಯತೆಯಿಂದ ಕಂಗಾಲಾಗಿರುವರು.

### ಸಂಸ್ಕೃತಿ ಮತ್ತು ಸ್ಥಿತ್ಯಂತರ :

ಇದಕ್ಕೆ ಪ್ರಮುಖವಾಗಿ ಎರಡು ಕಾರಣಗಳನ್ನು ಕೊಡಬಹುದು. ಮೊದಲನೆಯದಾಗಿ ಈ ಸಮುದಾಯಗಳು ನಾಗರೀಕರ ಪ್ರಭಾವದಿಂದ ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲಾರರು. ಎರಡನೆಯದಾಗಿ ನಾಗರೀಕ ಸಂಪರ್ಕದಿಂದ ಅವರು ತಮ್ಮ ಪದ್ಧತಿ ಆಚಾರ-ವಿಚಾರ ನಂಬಿಕೆಗಳನ್ನು ಬಿಟ್ಟು ನಾಗರೀಕರನ್ನು ಅನುಕರಿಸ ತೊಡಗಿದ್ದಾರೆ. ಈ ಎರಡು ಅಂಶಗಳನ್ನು ಗಮನಿಸಿದಾಗ ತಮ್ಮ ಮೂಲ ಸಂಸ್ಕೃತಿ ನಾಶವಾಗುವ ಸಂಭವಗಳನ್ನು ತಳ್ಳಿ ಹಾಕುವಂತಿಲ್ಲ. ಸ್ವಾತಂತ್ರ್ಯ ನಂತರ ಭಾರತದಲ್ಲಿ ಸಾಮಾಜಿಕ ಪರಿವರ್ತನೆ ತೀವ್ರವಾಗಿ ನಡೆಯುತ್ತಿವೆ. ಅದರಂತೆ ಈ ಸಮುದಾಯದಲ್ಲಿ ಸಾಕಷ್ಟು ಬದಲಾವಣೆಗೆ ಒಳಪಟ್ಟಿರುವುದು ಕಂಡುಬರುತ್ತದೆ.

ಕನಕಪುರ, ರಾಮನಗರ, ಮಾಗಡಿ, ಬಿಡದಿ ಇತ್ಯಾದಿ ಪ್ರದೇಶಗಳಲ್ಲಿ ತಮ್ಮ ನೆಲೆಯನ್ನು ಗುರುತಿಸಿಕೊಳ್ಳುವ ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬದಲಾಗುತ್ತಿದ್ದಾರೆ.

ಇರುಳಿಗರು ಒಂದು ಸರಳವಾದ ಗುಡಿಸಲನ್ನು ಕಟ್ಟಿಕೊಂಡು ಅದರಲ್ಲಿಯೇ ಅವರ ಕುಟುಂಬಕ್ಕೆ ಬೇಕಾದ ಸವಲತ್ತನ್ನು ಒದಗಿಸಿಕೊಂಡು ಬದುಕುತ್ತಿದ್ದರು. ಇಂದು ಕೆಲವರು ಹೆಂಚಿನ ಮನೆಗಳಲ್ಲಿ ವಾಸಿಸುವ ಸಂಸ್ಕೃತಿಯನ್ನು ರೂಢಿಸಿಕೊಂಡಿದ್ದಾರೆ. ಮಣ್ಣಿನ ಮಡಿಕೆಯನ್ನು ಬಳಸುತ್ತಿದ್ದ ಇವರು ಹಿತ್ತಾಳೆ, ಅಲ್ಯೂಮಿನಿಯಂ, ಸ್ಟೀಲ್ ಪಾತ್ರೆಗಳನ್ನು ಬಳಸುತ್ತಿದ್ದಾರೆ. ವನಸ್ಪತಿಗಳಿಂದ ಬೆಳಕು ಪಡೆಯುತ್ತಿದ್ದವರು ಇಂದು ಸೀಮೆಎಣ್ಣೆಯ ದೀಪಗಳಿಂದ ಬೆಳಕು ಪಡೆಯುತ್ತಿರುವುದು, ಅಲ್ಲದೆ ಸರ್ಕಾರ ಭಾಗ್ಯಜ್ಯೋತಿ ಯೋಜನೆಯಡಿಯಲ್ಲಿ ಕೆಲವೇ ಮನೆಗಳವರು ವಿದ್ಯುತ್ ದೀಪಗಳ ಬೆಳಕನ್ನು ಪಡೆಯುತ್ತಿದ್ದಾರೆ. ಆಧುನಿಕ ಉಡುಗೆ-ತೊಡುಗೆಗಳ ಬಳಕೆಯನ್ನು ಮಾಡುತ್ತಿದ್ದಾರೆ.

ಕನಕಪುರ, ರಾಮನಗರ, ಕೂನ ಮುದ್ದಹಳ್ಳಿಗಳು, ಮಾಗಡಿ ತಾಲ್ಲೂಕಿನ ಜೋಡುಗಟ್ಟೆ ಇತ್ಯಾದಿ ಖುಷ್ಕಿ ಬೇಸಾಯ ಮಾಡುತ್ತಿದ್ದಾರೆ. ಕೆಲವರು ಕೆತ್ಲು ಬೇಸಾಯವನ್ನು ಮಾಡುತ್ತಿದ್ದಾರೆ. ಹೈಬ್ರಿಡ್ ಬಿತ್ತನೆ ಬೀಜಗಳ ಬಳಕೆ, ರಸಗೊಬ್ಬರಗಳ ಬಳಕೆ ಇತ್ಯಾದಿಗಳನ್ನು ಮಾಡುತ್ತಿದ್ದಾರೆ. ಬದಲಾದ ಪರಿಸ್ಥಿತಿಯಲ್ಲಿ ಇರುಳಿಗ ಹಾಗೂ

ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ಪರಂಪಾರಗತ ವೃತ್ತಿಯೊಡನೆ ಹೊಸ ಹವ್ಯಾಸಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಸರದಿ ಕೃಷಿ, ಬೇಟೆ, ಜೇನುಸಾಕಾಣಿಕೆ, ಬುಟ್ಟಿಹೆಣೆಯುವಿಕೆ, ಬಿದಿರು ಕೆಲಸ, ಕೃಷಿ ಇವೆ ಮುಂತಾದ ವೃತ್ತಿಗಳಲ್ಲಿ ತೊಡಗಿದ್ದಾರೆ. ಬಹುಸಂಖ್ಯಾತ ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯ ವ್ಯವಸಾಯ ವೃತ್ತಿ ಮತ್ತು ಕೃಷಿ ಕಾರ್ಮಿಕರಾಗಿರುವುದು ಸತ್ಯ. ಉಳಿದವರು ಅರಣ್ಯ ನಿಷೇಧದ ನಡುವೆಯೂ ತಮಗೆ ಪ್ರಿಯವಾದ ಅರಣ್ಯದ ಕೆಲಸದಲ್ಲಿ ತೊಡಗಿಸಿಕೊಂಡಿರುವುದು, ಕಾಡಿನ ಗುತ್ತಿಗೆದಾರರಿಗೆ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿಕೊಡುವ ಕಾರ್ಮಿಕರಾಗಿಯೂ ಕೆಲಸ ನಿರ್ವಹಿಸಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬರುತ್ತಿದೆ. ಬದಲಾದ ಸಾಮಾಜಿಕ, ಆರ್ಥಿಕ ಪರಿಸರ ಹಾಗೂ ಕೈಗಾರೀಕರಣದ ಪರಿಣಾಮದಿಂದಾಗಿ ಅನೇಕರು ತಮ್ಮ ಮೂಲಸ್ಥಾನಗಳನ್ನು ತೊರೆದು ತಮ್ಮ ಕಸುಬುಗಳನ್ನು ಕೈಬಿಟ್ಟಿರುವುದು ಕಂಡುಬರುತ್ತದೆ. ಅಂತೆಯೇ ಅವರ ಆರ್ಥಿಕ ಜೀವನವೂ ಬದಲಾಗಿದೆ.

ಬದಲಾದ ಆರ್ಥಿಕ ವ್ಯವಸ್ಥೆಯಿಂದಾಗಿ ಇರುಳಿಗರು ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ಸಣ್ಣ ಹಿಡುವಳಿದಾರರು ಮತ್ತು ಕೃಷಿ ಕಾರ್ಮಿಕರಾಗಿ ಪರಿವರ್ತಿತರಾಗಿದ್ದಾರೆ. ಸಾಗುವಳಿ ಜಮೀನು ವಿತರಣೆಯಲ್ಲಿ ವಂಚನೆಯ ಪ್ರಕರಣಗಳು ನಡೆದಿದ್ದು ಬುಡಕಟ್ಟು ಸಮುದಾಯಗಳು ವರ್ಗಾವಣೆಗೊಂಡಿರುವುದನ್ನು ನಾವು ಕಾಣಬಹುದು. ನಗರೀಕರಣ, ಕೈಗಾರೀಕರಣಗಳು ಅವರ ಸಮಸ್ಯೆಗಳನ್ನು ಮತ್ತಷ್ಟು ತೀವ್ರಗೊಳಿಸಿವೆ. ಕೈಹಿಡಿತವಿಲ್ಲದೆ ಅನಾವಶ್ಯಕ ವೆಚ್ಚದಿಂದಾಗಿ ಬುಡಕಟ್ಟು ಜನ ಸಾಲದಲ್ಲಿ ಮುಳುಗಿ ಹೋಗಿರುವುದು ದುರ್ದೈವ. ಕೈಸಾಲಗಳಿಗೆ ಭೂಮಿಯನ್ನು ಪರಭಾರೆ ಮಾಡಿಕೊಡದಂತೆ ಶಾಸನ ತಂದರೆ ಮಾತ್ರ ಸರ್ಕಾರ ಅವರಿಗೆ ನೀಡಿರುವ ಭೂಮಿಗಳನ್ನು ಅವರ ಹೆಸರಿನಲ್ಲಿಯೇ ಉಳಿಯುವುದು ಸಾಧ್ಯ.

ಈಗೀಗ ಸಂಪೂರ್ಣವಾಗಿ ಕಾಡನ್ನೇ ಅವಲಂಬಿಸಿ ಜೀವನ ನಡೆಸುವವರು ಯಾರು ಇಲ್ಲ. ಕಾಡಿನ ನಾಶವೇ ಅದಕ್ಕೆ ಕಾರಣ. ಮತ್ತು ಸರ್ಕಾರದ ಅರಣ್ಯ ನೀತಿಯು ಪ್ರಮುಖ ಕಾರಣವಾಗಿದೆ.

ಸದ್ಯ ಕೈಗಾರೀಕರಣದ ಸುಳಿಗೆ ಸಿಕ್ಕಿಹಾಕಿಕೊಂಡಿರುವ ಬುಡಕಟ್ಟಿನ ಸಮುದಾಯ ಸಾಕಷ್ಟು ಪರಿವರ್ತನೆಗೆ ಗುರಿಯಾಗಿದ್ದಾರೆ. ಬುಡಕಟ್ಟು ಕಾರ್ಮಿಕರು ಇತರ ಸಮುದಾಯದ ಕಾರ್ಮಿಕರೊಡನೆ ಪರಸ್ಪರ ಮಿಳಿತಗೊಂಡು ತಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳುತ್ತಿದ್ದಾರೆ.

ಶಿಕ್ಷಣ, ಮತದಾನದ ಹಕ್ಕುಗಳು ಅವರನ್ನು ಬದಲಾವಣೆಯತ್ತ ಕೊಂಡೊಯ್ಯುತ್ತಿದೆ. ಅವರ ಆಚರಣೆಗಳು ಸತ್ವ ಕಳೆದುಕೊಳ್ಳುತ್ತಿದೆ. ಶಿಷ್ಟ ಸಂಸ್ಕೃತಿಯ ಪ್ರಭಾವ ಗಾಢವಾಗುತ್ತಿದ್ದು ತಮ್ಮ ಆಚರಣೆಗಳಲ್ಲಿನ ಬುಡಕಟ್ಟು ಸಮುದಾಯದ ಸಂಸ್ಕೃತಿಯ ಪಳೆಯುಳಿಕೆಗಳು ಕಳೆಗುಂದುತ್ತವೆ. ಇರುಳಿಗರು ತಮ್ಮ ಮದುವೆ, ಹುಟ್ಟು, ಸಾವು ಇತ್ಯಾದಿ ಸಂಪ್ರದಾಯ ಆಚರಣೆಗಳ ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶವಿರುತ್ತಿರಲಿಲ್ಲ. ಇಂದು ಇವರ ಮದುವೆ ಬ್ರಾಹ್ಮಣ ಪುರೋಹಿತ್ಯದಲ್ಲಿ

ನಡೆಯುತ್ತಿದೆ. ಉತ್ಕೃಷ್ಟವಾದ ಸಾಹಿತ್ಯಿಕ, ಸಾಂಸ್ಕೃತಿಕ ಮೌಲ್ಯಗಳನ್ನು ಹೊಂದಿರುವ ಇರುಳಿಗ ಕಲೆ "ಕಣಿ"ಯಲ್ಲಿನ ನಂಬಿಕೆಗಳು ಜನರಿಂದ ಮಾಯವಾಗುತ್ತಿವೆ. ಕಣಿಗಾರನ ಮೇಲೆ ಮೊದಲಿದ್ದ ಗೌರವ, ಭಯ, ನಂಬಿಕೆಗಳು ನೆಲೆ ಕಳೆದುಕೊಳ್ಳುತ್ತಿವೆ. ಅವರ ಸಾಮಾಜಿಕ ವ್ಯವಸ್ಥೆಯಲ್ಲಿನ ಭದ್ರತೆ ಕೂಡ ಅಭದ್ರವಾಗುತ್ತಿದೆ. ಕುಲ ಪಂಚಾಯ್ತಿಯ ಕಟ್ಟು-ಕಟ್ಟಳೆಗಳು ನಶಿಸುತ್ತಿವೆ.

ಅನುಚಾನವಾಗಿ ಬಂದಿದ್ದ ಕಲ್ಲುಸೇವೆ, ಶವಸಂಸ್ಕಾರದ ರೀತಿಯನ್ನು ಬದಲಾಯಿಸಿಕೊಳ್ಳುವುದರತ್ತ ಇರುಳಿಗರು ಸಾಗಿದ್ದಾರೆ.

ಹಕ್ಕಿಪಿಕ್ಕಿಯವರು ಇತ್ತೀಚಿನವರೆಗೂ ಅಲೆಮಾರಿಗಳಾದುದರಿಂದ ಅವರಿಗೆ ಖಾಯಂ ಆದ ವಸತಿ ವ್ಯವಸ್ಥೆ ಇರಲಿಲ್ಲ, ಆದರೆ ಇತ್ತೀಚೆಗೆ ಈ ಪದ್ಧತಿ ಸಡಿಲಗೊಂಡು ಖಾಯಂ ಆಗಿ ಮಣ್ಣು, ಇಟ್ಟಿಗೆಗಳಿಂದ ಮನೆ ನಿರ್ಮಿಸಿ ಒಂದೆಡೆ ನೆಲೆಸುವಂತಹ ಪರಿಸ್ಥಿತಿ ಇರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುರುತಿಸಲಾಗಿದ್ದು ಇದರ ಪೋಟೋ ಪ್ರತಿಯನ್ನು ಅನುಬಂಧನದಲ್ಲಿ ದಾಖಲಿಸಲಾಗಿದೆ.

ನ್ಯಾಯ ನಿಯಮಗಳು ಬಹುತೇಕವಾಗಿ ಇಂದಿಗೂ ಜೀವಂತವಾಗಿದ್ದರೂ ಕೆಲವು ಸ್ವಲ್ಪ ಸಡಿಲಿಸಿವೆ. ಸಾಮಾಜಿಕ ಬದಲಾವಣೆಗಳ ನಡುವೆ ಈ ಬದಲಾವಣೆ ಸರ್ವೇ ಸಾಮಾನ್ಯ. ಇತ್ತೀಚೆಗೆ ಅವರ ನ್ಯಾಯ-ನಿಯಮಗಳೂ ಅವರ ಬದುಕಿನಂತೆಯೇ ಸರಳವಾಗುತ್ತಿವೆ.

ಹಕ್ಕಿಪಿಕ್ಕಿಯವರು ಬಹುವಾಗಿ ಆಧುನೀಕರಣಕ್ಕೆ ಒಳಗಾಗಿದ್ದಾರೆ. ಇವರಷ್ಟು ನಿರಂತರವಾಗಿ ಬದಲಾವಣೆಗೆ ಒಳಗಾಗುವ ಸಮುದಾಯ ಕರ್ನಾಟಕದಲ್ಲಿ ಯಾವುದೂ ಇಲ್ಲ. ಇದಕ್ಕೆ ಕಾರಣ ಅವರ ಅಲೆಮಾರಿ ಜೀವನ. ಜೀವನೋಪಾಯಕ್ಕಾಗಿ ಹಕ್ಕಿಗಳನ್ನು ಬೇಟೆಯಾಡುತ್ತಿದ್ದ ಈ ಸಮುದಾಯ ಇಂದು ಕೃಷಿ, ವ್ಯಾಪಾರ ಚಟುವಟಿಕೆಗಳನ್ನು ಮಾಡುವುದರ ಮೂಲಕ ಸಾಕಷ್ಟು ಬದಲಾವಣೆಗಳಾಗಿದ್ದು ಸರ್ಕಾರದ ಯೋಜನೆಗಳು ಇವರಲ್ಲಿ ತಲುಪಿರುವುದು ಕಂಡುಬಂದು ಸ್ವ-ಉದ್ಯೋಗ ನಿರ್ವಹಣೆ ಮಾಡಿಕೊಳ್ಳುತ್ತಾ ಆರ್ಥಿಕವಾಗಿ ಪ್ರಬಲವಾಗುವುದರತ್ತ ಈ ಸಮುದಾಯ ದಾಪುಗಾಲು ಆಗುತ್ತಿರುವುದನ್ನು ಗಮನಿಸಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿವರಗಳನ್ನು ದಾಖಲಿಸಿ ಅದರ ಪೋಟೋ ಪ್ರತಿಯನ್ನು ಅನುಬಂಧದಲ್ಲಿ ಕೊಡಲಾಗಿದೆ.

## ಬುಡಕಟ್ಟು ಸಮುದಾಯದ ಆರ್ಥಿಕ ಅಭಿವೃದ್ಧಿಗೆ ಸರ್ಕಾರವು ಕೈಗೊಂಡಿರುವ ಯೋಜನೆಗಳು

### ಗಿರಿಜನ ಉಪ ಯೋಜನೆ :

ಪರಿಶಿಷ್ಟ ಪಂಗಡದವರ ಸರ್ವತೋಮುಖ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆಯನ್ನು ರೂಪಿಸಲಾಗಿದೆ. ವಿವಿಧ ಅಭಿವೃದ್ಧಿ ಇಲಾಖೆಗಳು/ ನಿಗಮಗಳು/ ಮಂಡಳಿಗಳು ತಮ್ಮ ಯೋಜನಾ ಆಯವ್ಯದಲ್ಲಿ ರಾಜ್ಯ ವಲಯ ಮತ್ತು ಜಿಲ್ಲಾ

ವಲಯಗಳಡಿ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಹಣವನ್ನು ಮೂಸಲಾಗಿಟ್ಟು, ಬಡತನ ರೇಖೆ ಕೆಳಗಿರುವ ಕುಟುಂಬಗಳಿಗೆ ಶೈಕ್ಷಣಿಕ ಅಭಿವೃದ್ಧಿಗೆ ಹಲವಾರು ಆರ್ಥಿಕ ಸವಲತ್ತುಗಳ ಜೊತೆಗೆ ವಸತಿ, ಕುಡಿಯುವ ನೀರು, ಸಂಪರ್ಕ, ರಸ್ತೆ, ನೈರ್ಮಲೀಕರಣ, ಆರೋಗ್ಯ ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಆದ್ಯತೆ ನೀಡಲಾಗುತ್ತಿದೆ. ಪರಿಶಿಷ್ಟ ಪಂಗಡದವರ ಅಭಿವೃದ್ಧಿಗೆ ಗಿರಿಜನ ಉಪ ಯೋಜನೆಯಡಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳ ವಿವರ ಕೆಳಕಂಡಂತಿದೆ.

**೧. ಕೃಷಿ ಇಲಾಖೆ :**

೧. ಕೃಷಿ ಪರಿಕರಗಳ ಪೂರೈಕೆ ಹಾಗೂ ಧಾನ್ಯ ಸಂಗ್ರಹಣಾ ಕಣಜಗಳ ಪೂರೈಕೆ. ಶೇಕಡಾ ೭೫ರ ಸಹಾಯಧನದಲ್ಲಿ ರೂ. ೫೦,೦೦೦-೦೦ಗಳ ಮಿತಿಯಲ್ಲಿ ಪವರ್ ಟಿಲ್ಲರ್ ಒದಗಿಸುವುದು. ಆಧುನಿಕ ಕೃಷಿ ಉಪಕರಣಗಳ ಪೂರೈಕೆ, ತುಂತುರು ನೀರಾವರಿ ಘಟಕಗಳು ಹಾಗೂ ಹನಿ ನೀರಾವರಿ ಗಟಕಗಳ ಪೂರೈಕೆ, ನಬಾರ್ಡ್ ದರಗಳಲ್ಲಿ ಉಲುಮೆ ಎತ್ತು ಮತ್ತು ಎತ್ತಿನಗಾಡಿ ವಿತರಣೆ.

**೨. ತೋಟಗಾರಿಕೆ :**

೧. ಅರ್ಧ ಎಕರೆ ತೆಂಗಿನ ತೋಟ, ೧ ಎಕರೆ ಹಣ್ಣಿನ ತೋಟ, ಹೂವಿನ ತೋಟ ನಿರ್ಮಾಣ.

**೩. ಪಶು ಸಂಗೋಪನೆ :**

೧. ಪರಿಶಿಷ್ಟ ವರ್ಗದ ಫಲಾನುಭವಿಗಳಿಗೆ ನಬಾರ್ಡ್ ದರಗಳಲ್ಲಿ ಶೇಕಡ ೭೫ರ ಸಹಾಯಧನದಲ್ಲಿ ಮಿಶ್ರತಳಿ ಹಸು ಘಟಕ, ಎಮ್ಮೆಘಟಕ, ಕುರಿ ಘಟಕ ಮತ್ತು ಹಂದಿ ಘಟಕಗಳ ಪೂರೈಕೆ.

**೪. ಅರಣ್ಯ ಇಲಾಖೆ :**

೧. ಸಾಮಾಜಿಕ ಭದ್ರತಾ ನೆಡುತೋಪು

೨. ಕುಶಲ ಕರ್ಮಿಗಳಿಗೆ ಉಚಿತ ಬಿದಿರು ಬೆತ್ತ ಸರಬರಾಜು

೩. ಮನೆಗಳ ನಿರ್ಮಾಣಕ್ಕೆ ರೂ. ೧೦,೦೦೦-೦೦ ಮಿತಿಯಲ್ಲಿ ಗೃಹ ನಿರ್ಮಾಣ ವಸ್ತುಗಳ ಸರಬರಾಜು

**೫. ಗ್ರಾಮೀಣ ಮತ್ತು ಸಣ್ಣ ಕೈಗಾರಿಕೆಗಳು :**

೧. ಆಸಕ್ತಿ ಹೊಂದಿರುವ ಪರಿಶಿಷ್ಟ ಪಂಗಡದ ಯುವಕರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಸಹಕಾರಿಯಾಗುವಂತೆ ಜೇನು ಸಾಕಾಣಿಕೆ. ಬಡಗಿತನ, ಬಿದಿರು ಬೆತ್ತದ

ಮತತು ಇತರೆ ವೃತ್ತಿಗಳಲ್ಲಿ ತರಬೇತಿ. ನಿರುದ್ಯೋಗಿ ಯುವಕರಿಗೆ ಉಚಿತ ಉಪಕರಣಗಳ ವಿತರಣೆ.

೨. ಪರಿಶಿಷ್ಟ ಪಂಗಡದವರಿಗೆ ಗುಡಿ ಕೈಗಾರಿಕೆಗಳನ್ನು ಸ್ಥಾಪಿಸಲು ಲಿವಿಂಗ್ ಕಮ್ ವರ್ಕ್ ಶೆಡ್‌ಗಳನ್ನು ನಿರ್ಮಿಸಲು ಸಹಾಯಧನ ಮಂಜೂರಾತಿ.

**೬. ರೇಷ್ಮೆ ಕೃಷಿ :**

೧. ಹಿಪ್ಪುನೇರಳೆ ಬೇಸಾಯಕ್ಕೆ ಧನ ಸಹಾಯ

೨. ರೇರಿಂಗ್ ಹೌಸ್‌ಗಳ ನಿರ್ಮಾಣಕ್ಕೆ ಧನ ಸಹಾಯ

೩. ಪ್ಯಾಕೇಜ್ ಆಫ್ ಬೆನಿಫಿಟ್ಸ್ ಯೋಜನೆ

೪. ರೇಷ್ಮೆ ಹುಳುಗಳನ್ನು ಸಾಕುವ ಸಲಕರಣೆಗಳ ಸರಬರಾಜು

**೭. ಕನಾಟಕ ವಿದ್ಯುತ್ ಪ್ರಸರಣಾ ನಿಗಮ :**

೧. ಪರಿಶಿಷ್ಟವರ್ಗದ ಕಾಲೋನಿಗಳ ವಿದ್ಯುದ್ದೀಕರಣ

೨. ಪರಿಶಿಷ್ಟವರ್ಗದವರ ನೀರಾವರಿ ಪಂಪ್‌ಸೆಟ್ಟುಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವುದು

೩. ಕುಟೀರಜ್ಯೋತಿ ಯೋಜನೆಯಡಿ ಪರಿಶಿಷ್ಟಪಂಗಡದವರ ಮನೆಗಳಿಗೆ ವಿದ್ಯುತ್ ಸೌಲಭ್ಯ ಒದಗಿಸುವುದು.

**೮. ಉದ್ಯೋಗ ಮತ್ತು ತರಬೇತಿ :**

೧. ಹೊಲಿಗೆ ಮುಂತಾದ ವೃತ್ತಿಯಲ್ಲಿ ತರಬೇತಿ ನೀಡುವುದು.

**೯. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ :**

೧. ಮಹಿಳೆಯರಿಗೆ ಸ್ತ್ರೀ-ಶಕ್ತಿಯೋಜನೆಯಡಿ ಸಹಾಯ ಧನ

೨. ಮಕ್ಕಳಿಗೆ ಪೌಷ್ಠಿಕ ಆಹಾರ ನೀಡಿಕೆ.

೩. ಕರ್ನಾಟಕ ಮಹಿಳಾ ಅಭಿವೃದ್ಧಿನಮದ ಮೂಲಕ

೪. ಕೌಶಲ್ಯ ಅಭಿವೃದ್ಧಿಗೆ ವೃತ್ತಿಪರ ತರಬೇತಿ

೫. ಉದ್ಯೋಗಿನಿ ಯೋಜನೆಯಡಿ ಮಹಿಳೆಯರಿಗೆ ಆರ್ಥಿಕ ಅಭಿವೃದ್ಧಿಗೆ ಸಹಾಯಧನ.

## ೧೦. ತಾಂತ್ರಿಕ ಶಿಕ್ಷಣ ಇಲಾಖೆ :

ತಾಂತ್ರಿಕ ಶಿಕ್ಷಣ ಇಲಾಖಾವತಿಯಿಂದ ಪರಿಶಿಷ್ಟಪಂಗಡದ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗೆ ಸಹಕಾರಿಯಾಗುವಂತೆ ಡ್ರಾಯಿಂಗ್ ಉಪಕರಣಗಳ ಉಚಿತ ವಿತರಣೆ.

## ೧೧. ಕಾಲೇಜು ಶಿಕ್ಷಣ ಇಲಾಖೆ :

ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕ, ಮತ್ತಿತರ ಸಾಮಗ್ರಿಗಳ ಉಚಿತ ವಿತರಣೆ.

## ೧೨. ಸಾರ್ವಜನಿಕ ಶಿಕ್ಷಣ ಇಲಾಖೆ :

ವಿದ್ಯಾ ವಿಕಾಸ ಕಾರ್ಯಕ್ರಮದಡಿ ೧ ರಿಂದ ೭ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಪಂಡಗದ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ, ಪಠ್ಯಪುಸ್ತಕಗಳನ್ನು ಒದಗಿಸುವುದು.

## ೧೩. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ :

ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಆರ್ಥಿಕ ಸಹಾಯ ಉದ್ಯೋಗ ಮತ್ತು ಜೀವನ ಮಟ್ಟವನ್ನು ಸುಧಾರಿಸಲು ಕೆಳಕಂಡ ಕಾರ್ಯಕ್ರಮಗಳ ಅಡಿಯಲ್ಲಿ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

೧. ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆ

೨. ಎಸ್.ಜಿ.ಆರ್.ವೈ.

೩. ಐ.ಆರ್.ಇ.ಪಿ.

೪. ಜಿಲ್ಲಾಪಂಚಾಯತ್, ತಾಲ್ಲೂಕು ಪಂಚಾಯತಿಗಳಿಗೆ ಅಭಿವೃದ್ಧಿ ಅನುದಾನ.

## ೧೪. ಪಂಚಾಯತ್‌ರಾಜ್ ಇಂಜಿನೀಯರ್‌ಗಳ ಇಲಾಖೆ :

ಪರಿಶಿಷ್ಟ ವರ್ಗದ ಕಾಲೋನಿಗಳಿಗೆ ಸಂಪರ್ಕ ರಸ್ತೆ ಮತ್ತು ಸೇತುವೆಗಳನ್ನು ನಿರ್ಮಾಣ ಮಾಡುವುದು. ಗ್ರಾಮಾಂತರ ಪ್ರದೇಶಗಳಲ್ಲಿ ಪರಿಶಿಷ್ಟ ಪಂಗಡದ ಕಾಲೋನಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಗ್ರಾಮೀಣ ನೀರು ಪೂರೈಕೆ ಯೋಜನೆಯಡಿಯಲ್ಲಿ ಕೊಳವೆ ಬಾವಿಗಳು ಹಾಗೂ ಕಿರು ನೀರು ಸರಬರಾಜು ಯೋಜನೆಗಳ ಮೂಲಕ ಒದಗಿಸಲಾಗುತ್ತದೆ.

## ೧೫. ವಸತಿ ಯೋಜನೆ :

ಗಿರಿಜನ ಉಪ ಯೋಜನೆಯಡಿ ಪರಿಶಿಷ್ಟವರ್ಗದ ವಸತಿ ರಹಿತ ಕುಟುಂಬಗಳಿಗೆ, ಅಂಬೇಡ್ಕರ್ ವಸತಿ ಯೋಜನೆಯಡಿ, ಘಟಕ ವೆಚ್ಚ ರೂ.೩೦,೦೦೦-೦೦ದಲ್ಲಿ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಮನೆಗಳ ನಿರ್ಮಾಣ.

## ೧೬. ಲ್ಯಾಂಪ್ ಸಹಕಾರ ಸಂಘಗಳು :

ಸಮಗ್ರ ಗಿರಿಜನ ಅಭಿವೃದ್ಧಿ ಯೋಜನಾ ಪ್ರದೇಶಗಳಾದ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ, ಉಡುಪಿ ಮತ್ತು ಚಿಕ್ಕಮಗಳೂರು ಜಿಲ್ಲೆ ಹಾಗೂ ಮಂಡ್ಯ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಸಹಕಾರಿ ತತ್ವದ ಆಧಾರದ ಮೇಲೆ ೨೧ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘಗಳು (ಲ್ಯಾಂಪ್) ಕಾರ್ಯ ನಿರ್ವಹಿಸುತ್ತಿವೆ. ಅಲ್ಪಾವಧಿ ಸಾಲವನ್ನು ಕೂಡಾ ಈ ಸಂಘಗಳು ನೀಡುವುದರಿಂದ ಸ್ಥಳೀಯ ಲೇವಾದೇವಿಗಾರರಿಂದ, ಶೋಷಣೆಗೊಳಗಾಗುವುದನ್ನು ತಪ್ಪಿಸಲು ಸಾಧುವಾಗಿತ್ತಿದೆ. ಕೆಲವು ಸಂಘಗಳು ಕಿರು ಅರಣ್ಯ ಉತ್ಪನ್ನಗಳ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಿದ್ದು, ಸಂಸ್ಕರಿಸಿ, ಮಾರಾಟ ಮಾಡುವುದರಿಂದ, ಹೆಚ್ಚಿನ ಲಾಭ ಪಡೆಯಲು ಅವಕಾಶವಿರುತ್ತದೆ.

ಗಿರಿಜನ ಪ್ರದೇಶಗಳಲ್ಲಿ ಈ ಸಹಕಾರ ಸಂಘಗಳು ಜೀವನಾವಶ್ಯಕ ಪದಾರ್ಥಗಳನ್ನು ನ್ಯಾಯಬೆಲೆಗೆ ವಿತರಿಸುವುದರ ಜೊತೆಗೆ ಸದಸ್ಯರು ಹೆಣೆದ ಬುಟ್ಟಿ ಮತ್ತಿತರ ಬಿದಿರು ಮತ್ತು ಬೆತ್ತದ ಸಾಮಗ್ರಿಗಳನ್ನು ಹಾಗೂ ಕಿರು ಅರಣ್ಯ ಉತ್ಪನ್ನಗಳನ್ನು ಮಾರಾಟ ಮಾಡುವ ವ್ಯವಸ್ಥೆ ಇರುತ್ತದೆ.

## ಕೇಂದ್ರ ಸರ್ಕಾರದ ಯೋಜನೆಗಳು :

ಕೇಂದ್ರ ಸರ್ಕಾರವು ಪರಿಶಿಷ್ಟ ವರ್ಗದವರ ಸರ್ವಾಂಗೀಣ ಅಭಿವೃದ್ಧಿಗೆ ಕೆಳಕಂಡ ಯೋಜನೆಯಡಿ ವಿವಿಧ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಅನುದಾನ ಬಿಡುಗಡೆ ಮಾಡಿ ಸಹಕರಿಸುತ್ತಿದೆ.

೧. ತರಬೇತಿ ಮತ್ತು ಸಂಬಂಧಿತ ಕಾರ್ಯಕ್ರಮಗಳು – ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಳ್ಳುವ ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ವಿಶೇಷ ತರಬೇತಿ.

೨. ಸಂಶೋಧನೆ ಮತ್ತು ತರಬೇತಿ (ಬುಡಕಟ್ಟು ಸಂಶೋಧನಾ ಕೇಂದ್ರ) ಇದರ ಮೂಲಕ ಕಮ್ಮಟ, ಸೆಮಿನಾರ್ಸ್, ಸಂಶೋಧನೆ ಇತ್ಯಾದಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

೩. ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಮತ್ತು ಪುಸ್ತಕ ಭಂಡಾರ – ಮೆಟ್ರಿಕ್ ನಂತರದ ಕೋರ್ಸ್‌ಗಳಲ್ಲಿ ಓದುತ್ತಿರುವ ಪರಿಶಿಷ್ಟವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಪಾವತಿಸುವುದು.

೪. ಪರಿಶಿಷ್ಟವರ್ಗದ ಆಶ್ರಮಶಾಲೆಗಳ ಕಟ್ಟಡ ನಿರ್ಮಾಣ

೫. ಪರಿಶಿಷ್ಟವರ್ಗದ ಆಶ್ರಮಶಾಲೆಗಳ ಕಟ್ಟಣ ನಿರ್ಮಾಣ

೬. ಏಕಲವ್ಯ ಮಾದರಿ ವಸತಿಶಾಲೆಗಳ ಸ್ಥಾಪನೆ ಮತ್ತು ನಿರ್ವಹಣೆ

೭. ಶೈಕ್ಷಣಿಕ ಸಂಕೀರ್ಣ – ಪರಿಶಿಷ್ಟ ವರ್ಗದ ಮಹಿಳೆಯರಲ್ಲಿ ಸಾಕ್ಷರತೆ ಕಡಿಮೆ ಇರುವ ಜಿಲ್ಲೆಗಳಲ್ಲಿ ಬಾಲಕಿಯರ ಸಾಕ್ಷರತಾ ಮಟ್ಟವನ್ನು ಉತ್ತಮ ಪಡಿಸಲು ಶೈಕ್ಷಣಿಕ ಸಂಕೀರ್ಣಗಳ ಸ್ಥಾಪನೆ ಮತ್ತು ನಿರ್ವಹಣೆ

೮. ಗಿರಿಜನ ಉಪಯೋಜನೆಗೆ ವಿಶೇಷ ಕೇಂದ್ರಿಯ ಸಹಾಯಧನ – ಪರಿಶಿಷ್ಟ ವರ್ಗದ ಕುಟುಂಬಗಳಿಗೆ ಬಡತನರೇಖೆಯಿಂದ ಮೇಲೆ ಬರಲು ಸಹಕಾರಿಯಾಗುವಂತಹ ಆರ್ಥಿಕೋನ್ನತಿ ಕಾರ್ಯಕ್ರಮಗಳಾದ ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ಸ್ವಯಂ ಉದ್ಯೋಗ ತರಬೇತಿ ಇತ್ಯಾದಿ ಕಾರ್ಯಕ್ರಮಗಳನ್ನು ಕ್ಲಸ್ಟರ್ ಮಾದರಿಯಲ್ಲಿ ಅನುಷ್ಠಾನಗೊಳಿಸಲು ಸಹಾಯಧನ.

೯. ಭಾರತ ಸಂವಿಧಾನ ಅನುಚ್ಛೇದ ೨೭೫ (೧)ರಡಿ ಮೂಲಭೂತ ಸೌಲಭ್ಯಗಳಾದ ರಸ್ತೆ ಮತ್ತು ಸೇತುವೆ, ಕುಡಿಯುವ ನೀರು, ನೈರ್ಮಲೀಕರಣ, ಸಮುದಾಯ ಭವನ, ಬೀದಿ ದೀಪ ಸೌಲಭ್ಯ ಒದಗಿಸುವುದು ಮತ್ತು ಸಣ್ಣ ನೀರಾವರಿ ಯೋಜನೆಯಡಿ ಪರಿಶಿಷ್ಟ ವರ್ಗದವರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವುದು.

೧೦. ವೃತ್ತಿ ತರಬೇತಿ–ಪರಿಶಿಷ್ಟವರ್ಗದ ವಿದ್ಯಾವಂತ ನಿರುದ್ಯೋಗಿ ಅಭ್ಯರ್ಥಿಗಳಿಗೆ ಐ.ಟಿ.ಐ.ಗಳ ಮುಖಾಂತರ ವಿವಿಧ ವೃತ್ತಿಗಳಲ್ಲಿ ಒಂದು ವರ್ಷದ ಅವಧಿಯ ತರಬೇತಿ ಕಾರ್ಯಕ್ರಮ.

೧೧. ಬುಡಕಟ್ಟು ಸಮುದಾಯ ಅಭಿವೃದ್ಧಿ ಪಂಗಡದವರ ಅಭಿವೃದ್ಧಿ – ಬುಡಕಟ್ಟು ಸಮುದಾಯಗಳಾದ ಇರುಳಿಗ ಮತ್ತು ಹಕ್ಕಿಪಿಕ್ಕಿ ಪಂಗಡದವರ ಆರ್ಥಿಕ ಅಭಿವೃದ್ಧಿಗೆ ಸಹಾಯಧನ.

೧೨. Upgradation of Merit ೯ ರಿಂದ ೧೨ನೇ ತರಗತಿಯವರೆಗೆ ಓದುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ವ್ಯಾಸಂಗ ಉನ್ನತೀಕರಣಕ್ಕೆ ವಿಶೇಷ ಕೋಚಿಂಗ್ ವ್ಯವಸ್ಥೆ.

## ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಅನುಷ್ಠಾನಗೊಳ್ಳುತ್ತಿರುವ ಕಾರ್ಯಕ್ರಮಗಳು

ಸರ್ಕಾರವು ಪರಿಶಿಷ್ಟ ವರ್ಗದವರ ಅಭಿವೃದ್ಧಿಗೆ ಹಾಕಿಕೊಂಡಿರುವ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳ ಜೊತೆಗೆ ಪರಿಶಿಷ್ಟ ವರ್ಗದವರ ಅಭಿವೃದ್ಧಿಗಾಗಿ ಸೇವೆ ಸಲ್ಲಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳು ಕೂಡಾ ಹಲವಾರು ಕಾರ್ಯಕ್ರಮಗಳನ್ನು ಯೋಜನೆಗಳನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರದ ಯೋಜನೆಯಡಿಯಲ್ಲಿ ಸಹಾಯಧನ ನೀಡಲು ಅವಕಾಶವಿರುತ್ತದೆ.

ಭಾರತ ಸರ್ಕಾರದ ಇತ್ತೀಚಿನ ಮಾರ್ಗಸೂಚಿಯ ಪ್ರಕಾರ ಕೆಳಕಂಡ ಯೋಜನೆ/ ಕಾರ್ಯಕ್ರಮಗಳಿಗೆ ಕೇಂದ್ರ ಸರ್ಕಾರದ ಸಹಾಯಧನ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಕೆಲವು ಪ್ರಮುಖ ಕಾರ್ಯಕ್ರಮಗಳ ವಿವರ ಕೆಳಕಂಡಂತಿವೆ.

೧. ಪರಿಶಿಷ್ಟಪಂಗಡದ ವಿದ್ಯಾರ್ಥಿಗಳಿಗೆ ವಸತಿ ಶಾಲೆಗಳು
೨. ಪರಿಶಿಷ್ಟಪಂಗಡದ ವಿದ್ಯಾರ್ಥಿಗಳಿಗೆ ವಸತಿ ರಹಿತ ಶಾಲೆಗಳು
೩. ಪರಿಶಿಷ್ಟಪಂಗಡದ ವಿದ್ಯಾರ್ಥಿಗಳಿಗೆ ರಾತ್ರಿ ಶಾಲೆಗಳು
೪. ಗ್ರಂಥಾಲಯ
೫. ಸಂಚಾರಿ ಲೈಬ್ರರಿ ಮತ್ತು ಆಡಿಯೋ ವಿಶುಯಲ್ ಘಟಕ
೬. ೧೦ ಹಾಸಿಗೆಗಳ ಆಸ್ಪತ್ರೆ / ಡಿಸ್ಪೆನ್ಸರಿ
೭. ಸಂಚಾರಿ ಆರೋಗ್ಯ ಘಟಕ
೮. ಪರಿಶಿಷ್ಟವರ್ಗದ ನಿರುದ್ಯೋಗಿ ಅಭ್ಯರ್ಥಿಗಳಿಗೆ ವಿವಿಧ ವೃತ್ತಿಗಳಲ್ಲಿ ತರಬೇತಿ ಕಾರ್ಯಕ್ರಮ

ಪರಿಶಿಷ್ಟ ವರ್ಗದವರ ಅಭಿವೃದ್ಧಿಗಾಗಿ ಸೇವೆ ಸಲ್ಲಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳು ಮೇಲ್ಕಾಣಿಸಿದ ಯಾವುದೇ ಯೋಜನೆಗಳನ್ನು ಹಮ್ಮಿಕೊಳ್ಳ ಬಯಸಿದಲ್ಲಿ, ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಜಿಲ್ಲಾಧಿಕಾರಿಗಳ ತಪಾಸಣಾ ವರದಿಯೊಂದಿಗೆ ಸಲ್ಲಿಸುವ ಪ್ರಸ್ತಾವನೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಸ.ಕ.ಇ. ಇವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸ್ಕ್ರೀನಿಂಗ್ ಕಮಿಟಿಯಲ್ಲಿ ಪರಿಶೀಲಿಸಿ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಕಳುಹಿಸಲಾಗುವುದು. ಹಣದ ಲಭ್ಯತೆಗನುಗುಣವಾಗಿ ಕೇಂದ್ರ ಸರ್ಕಾರವು ಪ್ರಸ್ತಾವನೆಗಳಿಗೆ ಮಂಜೂರಾತಿ ನೀಡುವುದು.

ನಮ್ಮ ಸಾಮಾಜಿಕ ಸಂರಚನೆಯೊಳಗೆ ಮಾನವ ಪ್ರತಿಭಾಶಕ್ತಿಯ ಜೀವ ನೆಲಗಳಾದ ಇರುಳಿಗರು ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ಬದುಕುತ್ತಲೇ ಬಂದಿದ್ದಾರೆ. ವಸಾಹತು ಸಂದರ್ಭದಲ್ಲಿ ಅವರನ್ನು ಕಾಡಿನಿಂದ ನಾಡಿಗೆ ತಂದರು. ಕಾಡಿನೊಳಗೆ ಬೀಳುಬಿದುರುಗಳೊಂದಿಗೆ ಇದ್ದ ಅವರ ಬದುಕಿನ ನೆಲೆ ತಪ್ಪಿಸಿದರು. ಸ್ವಾತಂತ್ರೋತ್ತರದ ಅಭಿವೃದ್ಧಿಯ ನೆಪದಲ್ಲಿ ಈ ಪ್ರಕ್ರಿಯೆ ಮುಂದುವರೆದಿದೆ.

ವಸಾಹತೋತ್ತರದಲ್ಲಿ ರಾಷ್ಟ್ರವನ್ನು ಅಭಿವೃದ್ಧಿ ರಾಷ್ಟ್ರವಾಗಿಸುವ ಕನಸಿನಲ್ಲಿ ನಮ್ಮ ಹೊಸ ಅಭಿವೃದ್ಧಿ ನೀತಿಯನ್ನು ರೂಪಿಸಲಾಯಿತು. ನಮ್ಮ ಅಭಿವೃದ್ಧಿಯ ಪರಿಕಲ್ಪನೆ ಪಶ್ಚಿಮದಿಂದ ಸ್ವೀಕರಿಸಿದ್ದು ಮತ್ತು ಅದು ಇಡಿಯಾಗಿ ಆರ್ಥಿಕ ನೆಲೆಯನ್ನು ಆಧರಿಸಿರುವಂತಹದ್ದು. ಇಂತಹ ಅಭಿವೃದ್ಧಿ ಯೋಜನೆಗಳಿಗೆ ನಮ್ಮ ಸಾಂಸ್ಕೃತಿಕ ಬಹುರೂಪತೆಗಳ ನೋಟ ಇಲ್ಲ. ಹಾಗಾಗಿ ಇದು ಪ್ರಗತಿಯ ನೆಪದಲ್ಲಿ ನಮ್ಮ ಬುಡಕಟ್ಟುಗಳಿಗಿದ್ದ ನೈಸರ್ಗಿಕ ಸಂಪನ್ಮೂಲಗಳನ್ನು ಅದರ ಶಕ್ತಿ ಮೂಲಗಳನ್ನು ನಾಶ ಮಾಡಿದೆ. ನಮ್ಮ ಅಭಿವೃದ್ಧಿಯ ಪರಿಕಲ್ಪನೆಯ ಮುಂದಿರುವುದು ಯಂತ್ರ ಹೊರೆತು ಮಾನವ ಮನಸ್ಸಲ್ಲ. ಇದು ಮಾನವ ಸಮುದಾಯದ ಬದುಕಿನೊಂದಿಗೆ ಯಾವ ಸಂವಾದವನ್ನು ಬೆಳೆಸಲಾರದು. ಇದರಿಂದಾಗಿ ಬದುಕಿನೊಂದಿಗೆ ಒಂದಾಗಿದ್ದ ಕಸುಬು ಬದುಕಿನಿಂದ ಬೇರೆಯಾಯಿತು.

ಅಭಿವೃದ್ಧಿ ಎಂದರೆ ನಗರೀಕರಣ, ಕೈಗಾರೀಕರಣ. ಈ ಪರಿಭಾಷೆಯಲ್ಲಿ ಬುಡಕಟ್ಟುಗಳ ಅಭಿವೃದ್ಧಿ ಎಂದರೆ, ಕಾಡಿನ ಒಳಗೆ ಹಾಗೂ ಅಂಚು ವಾಸಿಗಳಾದ

ಬುಡಕಟ್ಟು ಸಮುದಾಯಗಳನ್ನು ನಗರವಾಸಿಗಳಾಗುವುದಕ್ಕೆ ತಕ್ಕ ಭೂಮಿಕೆಯನ್ನು ಸಿದ್ಧಪಡಿಸುವುದು. ಇರುಳಿಗರ ಸಂದರ್ಭದಲ್ಲಿ ಕಾಡಾಡಿಗಳಾಗಿದ್ದ ಅವರಿಗೆ ನಾಡೊಳಗೆ ಸರ್ಕಾರಿ ವಸತಿ ಯೋಜನೆಯಡಿಯಲ್ಲಿ ಸೂರುಕಟ್ಟಿಕೊಟ್ಟು ಫಲಾನುಭವಿಗಳನ್ನಾಗಿ ಮಾಡುವುದು. ಇದು ಇರುಳಿಗರಿಗೆ ಅವರಿಗೆ ಇದ್ದ ಜೀವಾನೋಪಾಯದ ಶಕ್ತಿ ಮೂಲಗಳನ್ನು ಉದಾ: ವೈದ್ಯ, ಕಾಡುತ್ಪತ್ತಿ ಬೀಳುಬಿದಿರಿನ ಕಲೆಗಾರಿಕೆ, ಎಲ್ಲವನ್ನು ನಾಶಮಾಡಿ ಪರತಂತ್ರಕ್ಕೆ ಒಡ್ಡುತ್ತದೆ. ಈ ಬಗೆಯ ಅಸಹಾಯಕತೆ ಅವರ ಆತ್ಮವಿಶ್ವಾಸವನ್ನು ಕಳೆಯುತ್ತದೆ. ಎಲ್ಲರಿಗೂ ಸೂರು, ಭೂಮಿ ಅಥವಾ ಆಕಳುಗಳನ್ನು ನೀಡುವ ಯೋಜನೆಗಳಾಗಿರುವ ಯೋಜನೆಗಳಾಗಿವೆ. ನಮಗಿರುವುದು ಪಶ್ಚಿಮಕ್ಕಿರುವಂತೆ ಬರಿಯ ಆರ್ಥಿಕ ಆಯಾಮವಷ್ಟೇ ಅಲ್ಲ. ಆಥಿಕತೆಯ ಆಚೆಗೆ ಮಾನವ ಬದುಕನ್ನು ಸಂಪನ್ನಗೊಳಿಸುವ ಸಾಂಸ್ಕೃತಿಕ ಆಯಾಮವಿದೆ.

ಪಶು ಸಂಗೋಪನೆಗೆ ಅವಕಾಶವಿದ್ದರೂ ಸಹ ಪಶುಗಳಿಗೆ ಬೇಕಾಗುವ ಹುಲ್ಲು ಮೇಯಲು ಕಾಯ್ದಿಟ್ಟ ಕಾಡಿನಲ್ಲಿ ಅವಕಾಶ ನಿಡಲಿಲ್ಲ. ಜೊತೆಗೆ ಪಶುಪಾಲನೆಯಿಂದ ಅಂತಹ ಲಾಭವಿಲ್ಲದಾಯಿತು. ನಾಗರೀಕರು ವಿದೇಶಿ ಹಸುಗಳನ್ನು ಸಾಕಿ ಅದರಿಂದ ಪಡೆದ ಲಾಭಕ್ಕೆ ಹೋಲಿಸಿದರೆ, ಇವರು ಪಶುಸಾಕಾಣಿಕೆ ಮಾಡದಿದ್ದರೆ ಒಳ್ಳೆಯದು ಎನಿಸುತ್ತದೆ. ಕೃಷಿ ಕೂಲಿಯು ಆಧುನಿಕ ವ್ಯವಸಾಯದಿಂದ ಸಿಗದಂತಾಗಿದೆ.

ಬಿದಿರು, ಈಚಲಿನಿಂದ ತಯಾರಿಸುತ್ತಿದ್ದ ಬುಟ್ಟಿ, ಕುಕ್ಕೆ, ಚಾಪೆ ಇತ್ಯಾದಿಗಳ ಸ್ಥಾನದಲ್ಲಿ ಇವತ್ತು ಪ್ಲಾಸ್ಟಿಕ್ ವಸ್ತುಗಳು ಒಂದು ಅವೆಲ್ಲವನ್ನು ನೋಡುವವರೇ ಇಲ್ಲದಂತಾಗಿದೆ. ಇವರ ಕಲಾತ್ಮಕ ವಸ್ತುಗಳಿಗೆ ಬದಲಿಯಾಗಿ ಫ್ಯಾಕ್ಟರಿಗಳು ತಯಾರಿಸುವ ವಸ್ತುಗಳಿಗೆ ಮುಗಿ ಬೀಳುವವರಿದ್ದಾರೆ. ಕೆಲವರು ಅದನ್ನು ಇಷ್ಟಪಟ್ಟರೂ ಅದರಿಂದ ಬರುವ ಲಾಭವೆಲ್ಲಾ ದಲ್ಲಾಳಿಗಳಿಗೆ ಹೋಗುತ್ತದೆ. ಅವರಿಗೆ ಸಿಗುವುದೇನಿದ್ದರೂ ಪುಡಿಗಾಸು ಮಾತ್ರ. ನಾರಿನಿಂದ ಹಗ್ಗ, ಮಣಿ ತಯಾರಿಸುವವರಿಗೆ ನಮ್ಮ ಕಾರ್ಖಾನೆಗಳು ತಯಾರಿಸುವ ವಯರ್‌ನ ಹಗ್ಗ ಹಾಗೂ ಮಣಿಗಳು ಅವರ ಬಾಯಿಗೆ ಮಣ್ಣನ್ನು ಹಾಕಿದೆ. ಹೀಗೆ ಬುಡಕಟ್ಟು ಸಮುದಾಯದವರ ಕಸುಬುಗಳು ಮೂಲೆಗುಂಪಾಗಿ ಇವತ್ತು ಅವರ ಜೀವನ ದುರಂತಮಯವಾಗಿದೆ. ಒಂದು ಕರಕುಶಲ ವಸ್ತುವಿನ ತಯಾರಿಕೆಗೆ ಬೇಕಾದ ವೆಚ್ಚವನ್ನು ನೋಡಿದರೆ, ಆ ಕರಕುಶಲ ವಸ್ತು ಅಷ್ಟಕ್ಕೆ ಮಾರಾಟವಾಗುವುದಿಲ್ಲ.

ಕೈಗಾರಿಕೆಗಳ ಉತ್ಪನ್ನದಿಂದ ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿರುವಂತೆ ಬುಡಕಟ್ಟು ಸಮುದಾಯಗಳ ಹಿಂದುಳಿಯುವಿಕೆಗೂ ಕಾರಣವಾಗಿದೆ. ಮುಖ್ಯವಾಗಿ ಕೈಗಾರಿಕೆಗಳು ಪ್ರಕೃತಿಯ ಸಾರ್ಥಕ ಬಳಕೆಯಿಂದ ಜನರ ಅವಶ್ಯಕತೆಗಳನ್ನು ವೇಗವಾಗಿ ಪೂರೈಸುವ ಕೆಲಸ ಮಾಡಿದವು ನಿಜ. ಆದರೆ ಈ ತ್ವರಿತ ಅಭಿವೃದ್ಧಿಯ ಜೊತೆಗೆ ತಂತಮ್ಮ ಮೂಲ ಕಸುಬುಗಳನ್ನು ನಂಬಿಕೊಂಡು ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಈ ಜನಸಮುದಾಯಗಳು ದಾರಿಕಾಣದೆ ಪರಿತಪಿಸುವಂತಾಯಿತು. ಇದು ಸಮುದಾಯಗಳ ಭೀಕರ ಅವನತಿಗೆ ಕಾರಣವಾಯಿತು ಎಂದು ಮೇಲುನೋಟಕ್ಕೆ ಅನಿಸಿದರೂ ಅದರಿಂದ ಸಾಂಸ್ಕೃತಿಕವಾಗಿ ಕೂಡ ಒಂದು ಬಗೆಯ ಹಿಂಜರಿತ ಉಂಟಾಯಿತು ಆಧುನಿಕ ಕೈಗಾರಿಕೆಗಳಿಗೆ ಉತ್ಪಾದನೆ, ವಿನಿಮಯ, ವಿವರಣೆಯಂತಹ

ವಾವಹಾರಿಕ ಪರಿಭಾಷೆ ಹಾಗೂ ಆ ಮೂಲಕ ಲಾಭನಷ್ಟಗಳೇ ಪ್ರಮುಖವಾಗುತ್ತದೆ. ಆದರೆ ಸಾಂಪ್ರದಾಯಿಕ ಕಸುಬುಗಳನ್ನು ಅವಲಂಬಿಸಿ ಬದುಕುವ ಆದಿವಾಸಿ ಸಮುದಾಯಗಳಿಗೆ ವ್ಯವಹಾರ ಹೊರತಾಗಿಯೂ ಸಾಂಸ್ಕೃತಿಕ ಬದುಕು ಮುಖ್ಯವಾಗುತ್ತದೆ. ಜೋತೆಗೆ ದೊಡ್ಡ ದೊಡ್ಡ ಕಾರ್ಖಾನೆಗಳ ಉತ್ಪನ್ನಗಳ ಮುಂದೆ ಸಣ್ಣ ಕಾರ್ಖನೆಗಳ ಉತ್ಪನ್ನಗಳೇ ಪೈಪೋಟಿಗೆ ನಿಲ್ಲದ ಸ್ಥಿತಿಯಲ್ಲಿವೆ.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಕೆಲವು ಇರುಳಿಗ ಹಾಗೂ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳಿಗೆ ವಿದ್ಯುತ್ ಪ್ರಸರಣದ ನಿಗಮಗಳಿಂದಾಗಿ ಹಲವು ಮನೆಗಳು ಬೆಳಕನ್ನು ಕಂಡಿವೆ. ಆದರೆ ಇನ್ನೂ ಕೆಲವು ಕಾಲೋನಿಗಳಿಗೆ ಬೆಳಕನ್ನು ನೀಡುವ ಅವಶ್ಯಕತೆಯಿದೆ.

ತಾಂತ್ರಿಕ ಶಿಕ್ಷಣ ಇಂದು ಈ ಸಮುದಾಯದಗಳನ್ನು ತಲುಪಿ. ಹಕ್ಕಿಪಕ್ಕಿ ಹಾಗೂ ಇರುಳಿಗರ ಮಕ್ಕಳು ಈ ಯೋಜನೆಗಳನ್ನು ಪಡೆದುಕೊಳ್ಳುವಲ್ಲಿ ಸಫಲತೆಯನ್ನು ಪಡೆದುಕೊಳ್ಳುತ್ತಿದ್ದಾರೆ.

ಗಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ವ್ಯವಸ್ಥೆಯಿಂದಾಗಿ ಬುಡಕಟ್ಟು ಸಮುದಾಯಗಳಿಗೆ ರಸ್ತೆ ಸಂಪರ್ಕ, ಕುಡಿಯುವ ನೀರಿನ ಯೋಜನೆ, ವಸತಿಯೋಜನೆ ಇತ್ಯಾದಿ ಯೋಜನೆಗಳು ಈ ಸಮುದಾಯಗಳನ್ನು ತಲುಪುವಲ್ಲಿ ಸಂಪೂರ್ಣ ಸಫಲಗೊಂಡಿಲ್ಲವಾದರೂ ಇಂದಿಗೂ ಅನೇಕ ಗ್ರಾಮಾಗಳಿಗೆ, ಕುಡಿಯುವ ನೀರಿನ ವ್ಯವಸ್ಥೆ, ಸಂಪರ್ಕಕ್ಕೆ ಸರಿಯಾದ ರಸ್ತೆಗಳಿರವುದಿಲ್ಲ. ಮಾಗಡಿ ತಾಲ್ಲೂಕಿನ ಜೇನುಕಲ್ಲು ಪಾಳ್ಯದಲ್ಲಿ ಇನ್ನೂ ರಸ್ತೆ ಸಂಪರ್ಕ ವ್ಯವಸ್ಥೆ ಇಲ್ಲದಿರುವುದನ್ನು ನಾವು ಕಾಣಬಹುದು.

ಬುಡಕಟ್ಟು ಸಮುದಾಯದ ಅಭಿವೃದ್ಧಿ ಹಲವು ಸ್ವಯಂ ಸೇವಾ ಸಂಸ್ಥೆಗಳು ಹಲವು ಯೋಜನೆಗಳನ್ನು ರೂಪಿಸಿವೆ ಆದರೆ ಮಧ್ಯವರ್ತಿಗಳ ಹಾವಳಿಯಿಂದಾಗಿ ನಿಜವಾದ ಬುಡಕಟ್ಟು ಸಮುದಾಯಕ್ಕೆ ಸರ್ಕಾರ ಹಾಗೂ ಸಂಘ ಸಂಸ್ಥೆಗಳ ಯೋಜನೆಗಳು ಸಂಪೂರ್ಣವಾಗಿ ಸಿಗದೆ ಇತ್ತ ಕಡೆ ನಾಗರೀಕರೂ ಆಗದೇ ಅತ್ತಕಡೆ ತಮ್ಮ ಮೂಲ ಸ್ವರೂಪವನ್ನು ಬಿಡದೆ ಅತಂತ್ರ ಸ್ಥಿತಿಯಲ್ಲಿದ್ದಾರೆ.

**ಕೋಷ್ಟಕ**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬುಡಕಟ್ಟು ಸಮುದಾಯಗಳ ಕಾಲೋನಿಯಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರದಲ್ಲಿಯ ಬುಡಕಟ್ಟು ಸಮುದಾಯಗಳಿಗೆ ಸಿಕ್ಕ ಸರ್ಕಾರದ ಕಲ್ಯಾಣ ಕಾರ್ಯಕ್ರಮಗಳು ಸೌಲಭ್ಯಮತ್ತು ಅವುಗಳನ್ನು ಪಡೆದ: ಮತ್ತು ಪಡೆಯದ ಬಗ್ಗೆ ಕುಟ್ಟುಂಬಗಳು ನೀಡಿದ ಕಾರಣ ವಿವರ ಸಮುದಾಯಗಳ ಕಾಲೋನಿಗೆ ಅನುಸಾರವಾಗಿ.
ಸಾಮಾಜಿಕ ಕ್ಷೇತ್ರದಲ್ಲಿ ಕಲ್ಯಾಣ ಕಾರ್ಯಕ್ರಮಗಳ ಸೌಲಭ್ಯಪಡೆದ: ಪಡೆಯದ ಕಾರಣಗಳು

| ಬುಡಕಟ್ಟು ಕಾಲೋನಿಗಳ ಹೆಸರು | ಬುಡಕಟ್ಟು ಸಮುದಾಯಗಳು ಮತ್ತು ಕುಟುಂಬ ಸಂಖ್ಯೆ | ಜನ ಸಂಖ್ಯೆ | ಸಾಮಾಜಿಕ ಕ್ಷೇತ್ರ | ಆರ್ಥಿಕ ಕ್ಷೇತ್ರ | ಶೈಕ್ಷಣಿಕ | ಆರೋಗ್ಯ |
|---|---|---|---|---|---|---|
| ಮುಟಕಯ್ಯನದೊಡ್ಡಿ | 45 | 110 | 25% | 40% | 3% | 40% |
| ಜೋಡುಗಟ್ಟೆ | 43 | 196 | 60% | 70% | 10% | 55% |
| ಮತ್ತ | 4 | 21 | 50% | 75% | 20% | 45% |
| ಅಚಲು | 18 | 70 | 65% | 77% | 16% | 70% |
| ಜೇನುಕಲ್ಲು ಪಾಳ್ಯ | 30 | 120 | 10% | 65% | 6% | 2% |
| ಸುಭಾಸ್‌ನಗರ | 208 | 2000 | 79% | 80% | 22% | 35% |
| ಭೂತನಹಳ್ಳಿ ಹಕ್ಕಿಪಿಕ್ಕಿ ಕಾಲೋನಿ | 150 | 676 | 81% | 70% | 40% | 33% |

ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ಇಂದಿನವರೆಗೂ ಸರ್ಕಾರದ ಯೋಜನೆಗಳನ್ನು ಸದುಪಯೋಗಪಡಿಸಿಕೊಂಡಿರುವ ಶೇಕಡವಾರು ಮಾಹಿತಿಯನ್ನು ನೀಡಲಾಗಿದೆ.

**ಅಡಿ ಟಿಪ್ಪಣಿ :**

೧. ಚ.ನ.ಶಂಕರ್‌ರಾವ್, ಸಮಾಜಶಾಸ್ತ್ರದ ಕಿರುವಿಶ್ವಕೋಶ, ಪುಟ ೮೬೨ ಜೈಭಾರತ್ ಪ್ರಕಾಶನ ಮಂಗಳೂರು –೧೯೯೮

೨. ಚ.ನ.ಶಂಕರ್‌ರಾವ್, ಸಮಾಜಶಾಸ್ತ್ರದ ಕಿರುವಿಶ್ವಕೋಶ, ಪುಟ ೮೬೩, ಜೈಭಾರತ್ ಪ್ರಕಾಶನ ಮಂಗಳೂರು-೧೯೯೮

೩. ಚ.ನ.ಶಂಕರ್‌ರಾವ್, ಸಮಾಜಶಾಸ್ತ್ರದ ಕಿರುವಿಶ್ವಕೋಶ, ಪುಟ ೮೬೭, ಜೈಭಾರತ್ ಪ್ರಕಾಶನ

೪. ಚ.ನ.ಶಂಕರ್‌ರಾವ್,ಸಮಾಜಶಾಸ್ತ್ರದ ಕಿರುವಿಶ್ವಕೋಶ, ಪುಟ –೧೭೭, ಜೈ ಪ್ರಕಾಶನ ಮಂಗಳೂರು ೧೯೯೮

೫. ಚ.ನ.ಶಂಕರ್‌ರಾವ್,ಸಮಾಜಶಾಸ್ತ್ರದ ಕಿರುವಿಶ್ವಕೋಶ,ಪುಟ–178 ಜೈಭಾರತ್ ಪ್ರಕಾಶನ ಮಂಗಳೂರು ೧೯೯೮

೬. ಚ.ನ.ಶಂಕರ್‌ರಾವ್ ಸಮಾಜಶಾಸ್ತ್ರದ ಕಿರುವಿಶ್ವಕೋಶ ಪುಟ 516, ಜೈಭಾರತ್ ಪ್ರಕಾಶನ ಮಂಗಳೂರು –೨೦೦೧

೭. ಚ.ನ.ಶಂಕರ್‌ರಾವ್, ಸಮಾಜಶಾಸ್ತ್ರದ ಕಿರುವಿಶ್ವಕೋಶ ಪುಟ– 972, ಜೈಭಾರತ್ ಪ್ರಕಾಶನ ಮಂಗಳೂರು –೨೦೦೧

೮. ಚ.ನ.ಶಂಕರ್ ರಾವ್, ಸಮಾಜಶಾಸ್ತ್ರದ ಕಿರುಪರಿಚಯ ಪುಟ868, ಜೈಭಾರತ್ ಪ್ರಕಾಶನ ಮಂಗಳೂರು

೯. ಚ.ನ.ಶಂಕರ್ ರಾವ್ ಸಮಾಜಶಾಸ್ತ್ರದ ಕಿರುಪರಿಚಯ,ಪುಟ–೧೯, ಜೈಭಾರತ್ ಪ್ರಕಾಶನ ಮಂಗಳೂರು

೧೦. ಪುಟ ೮೩ ಸಿಂಧ್ ಮಾದಿಗರ ಸಂಸ್ಕೃತಿ, ಕೋಟಗಾನಹಳ್ಳಿ ರಾಮಯ್ಯ.

೧೧. ಎಂ ಭೈರೇಗೌಡ ಇರುಳಿಗರು ಜಾನಪದ ಅಧ್ಯಯನ ಪುಟ೪೭–೪೮

೧೨. **H.V.Nanjundaiah and Ananthakrishana Iyer, The mysore Tribes and castes vol.III.p -೩೮೯**

೧೩. **ಎಂ.ಭೈರೇಗೌಡ ಇರುಳಿಗರ ಜಾನಪದೀಯ ಅಧ್ಯಯನ ಪುಟ–೨೪೨**

೧೪. **Stephen fuchs, The Aboriginal Tribes of Indian,p-೪೭**

೧೫. ಮರಿಭೈರಯ್ಯ, ವಯಸ್ಸು–20, ಜೋಡುಕಟ್ಟೆ, ೨೬ .೪ .೨೦೦೯

# ಅಧ್ಯಾಯ-೪ ಬೆಂಗಳೂರು ಪರಿಸರದ ಒಂದು ನೋಟ

## ೧. ಬೆಂಗಳೂರು ಗ್ರಾಮಾಂತರ ರಾಮನಗರ ಜಿಲ್ಲೆಯ ಪರಿಸರದ ಪಲ್ಲಟಗಳು

ಇಡೀ ಭಾರತದಲ್ಲೇ ಅತ್ಯಂತ ತೀವ್ರವಾದ ನಗರೀಕರಣಕ್ಕೆ ಒಳಗಾಗಿ ಬೆಳೆಯುತ್ತಿರುವ ನಗರಗಳಲ್ಲಿ ಬೆಂಗಳೂರು ಸಹ ಒಂದು. ಇದರ ಆಸುಪಾಸಿನಲ್ಲಿ ೨೦-೬೦ಕಿ.ಮೀ ಒಳಗೆ ಇರುವ ಬೆಂಗಳೂರು ನಗರ ಜಿಲ್ಲೆಯ ಆನೆಕಲ್, ಬೆಂಗಳೂರು ದಕ್ಷಿಣ ತಾಲ್ಲೂಕು, ರಾಮನಗರ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟ ಮಾಗಡಿ, ಕನಕಪುರ, ಚನ್ನಪಟ್ಟಣ ತಾಲ್ಲೂಕುಗಳು ನಗರೀಕರಣದಿಂದ ಪ್ರಭಾವವಾಗಿವೆ. ಇಂದು ಇವು ಅನೇಕ ಬದಲಾವಣೆಗೆ ಒಳಪಟ್ಟಿವೆ. ಆದರೆ ಕಳೆದ ೨ ದಶಕಗಳಿಂದ ಇರುಳಿಗ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಮೇಲೆ ಪಾಶ್ಚಾತ್ಯ ಮತ್ತು ಆಧುನಿಕ ಸಂಸ್ಕೃತಿಯ ಕರಿನೆರಳು ಬೀಳಲಾರಂಭಿಸಿದೆ. ಇದರ ಪ್ರಭಾವದಿಂದಾಗಿ ಸ್ವಾಭಾವಿಕವಾಗಿಯೇ ಅವರಲ್ಲಿಯೂ ಬದಲಾವಣೆಯ ಚಹರೆಗಳನ್ನು ಕಾಣಬಹುದು.

ನಾಗರೀಕತೆ ಅವರ ಎಲ್ಲಾ ಪಾರಂಪರಿಕ ವ್ಯವಸ್ಥೆಯನ್ನು ಸಡಿಲಿಸಿ ತನ್ನ ಕಬಂಧ ಬಾಹುಗಳಿಂದ ಬಂಧಿಸಿ ಹೊಸ ಲೋಕಕ್ಕೆ ಸೆಳೆಯುವ ಪ್ರಯತ್ನ ಮಾಡಿದರೂ, ಈ ಸಮುದಾಯಗಳು ಅವರ ಮೂಲ ಚಹರೆಯನ್ನು ಅಷ್ಟಿಷ್ಟಾದರೂ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

ಬದಲಾವಣೆ ಜೀವನದ ಒಂದು ಅನಿವಾರ್ಯ ಪ್ರಕ್ರಿಯೆ. ಒಬ್ಬ ವ್ಯಕ್ತಿಯ ಜೀವನದಲ್ಲಿ ಬಾಲ್ಯ, ಯೌವ್ವನ, ಪ್ರೌಢಾವಸ್ಥೆ, ವೃದ್ಧಾಪ್ಯ ಹೀಗೆ ವಿವಿಧ ಹಂತಗಳನ್ನು ತಲುಪಿದಾಗ ಆಯಾ ಕಾಲಕ್ಕನುಗುಣವಾಗಿ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗಳಾಗುತ್ತವೆ. ಚಿಕ್ಕಂದಿನ ಅನುಭವದ ವ್ಯಾಪ್ತಿ ಕ್ರಮೇಣ ಜನಸಂಪರ್ಕ ಪರಿಸ್ಥಿತಿಗಳ ಪ್ರಭಾವ ಮುಂತಾದ ಕಾರಣಗಳಿಂದಾಗಿ ವಿಶಾಲವಾಗುತ್ತಾ ಹೋಗುತ್ತದೆ. ಇದು ಒಂದು ದೇಶ ಅಥವಾ ಸ್ಥಳದ ಮಟ್ಟಿಗೂ ನಿಜ. ೧೫೨೭ರಲ್ಲಿ ಬೆಂಗಳೂರು ಸ್ಥಾಪನೆಗೊಂಡಾಗ ಒಂದು ಪುಟ್ಟ ಊರಾಗಿತ್ತು. ಮುಂದೆ ಮರಾಠರು, ಮುಸಲ್ಮಾನರು, ಬ್ರಿಟೀಷರು, ದಿವಾನರು ಹೀಗೆ ಬೇರೆ ಬೇರೆ ಆಡಳಿತಕ್ಕೊಳಪಟ್ಟು ಅವಕ್ಕನುಗುಣವಾದ ಸಂಸ್ಕೃತಿ ಹಾಗೂ ಜೀವನ ಶೈಲಿಯನ್ನು ಅಳವಡಿಸಿಕೊಳ್ಳುತ್ತಾ ಹೋಯಿತು. ಇಲ್ಲಿನ ಹಿತಕರವಾದ ಹವಾಗುಣ, ಸುಂದರ ಪರಿಸರ, ವಿಶಾಲ ಮನೋಭಾವದ ಸ್ಥಳೀಯರು ಮುಂತಾದ ಕಾರಣಗಳಿಂದಾಗಿ ಪರಸ್ಥಳಗಳಿಂದ ಬಂದು ಬೇರೆ ಬೇರೆ ವೃತ್ತಿಗಳನ್ನು ಕೈಗೊಂಡು ಇಲ್ಲಿಯೇ ನೆಲೆಸಿದರು. ಇದರಿಂದ ಜನಸಂದಣಿ ಹೆಚ್ಚಾಗಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲೇ ಕೆಂಪೇಗೌಡನ ಕಾಲದ ಬೆಂಗಳೂರಿನ ದಕ್ಷಿಣ ಭಾಗವನ್ನು ವಿಸ್ತರಿಸಲಾಯಿತು. ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ

ಮತ್ತಷ್ಟು ಅಭಿವೃದ್ಧಿಗೊಂದು ವ್ಯವಸ್ಥಿತ ರೂಪ ದೊರೆಯಿತು. ಬ್ರಿಟೀಷರು ಇಲ್ಲಿಗೆ ಬಂದು ನೆಲೆಸಿದ ಮೇಲಂತೂ ಈ ಅಭಿವೃದ್ಧಿಯ ವೇಗ ಹೆಚ್ಚಾಯಿತು. ಈ ನಗರದ ಖ್ಯಾತಿ ಹೊರದೇಶಗಳಿಗೂ ಹರಡಿ ವಿದೇಶಿಯರೂ ಇಲ್ಲಿ ಬಂದು ನೆಲೆಸಿ ತಮ್ಮ ಸಂಸ್ಕೃತಿ ಪರಂಪರೆ ಹಾಗೂ ಜೀವನ ಶೈಲಿಗಳ ಪ್ರಭಾವವನ್ನು ಬೀರತೊಡಗಿದರು. ಹಳೆ ಬೆಂಗಳೂರಿನ ಸುತ್ತಮುತ್ತಲೂ ಚಾಮರಾಜಪೇಟೆ, ಮಲ್ಲೇಶ್ವರ, ಬಸವನಗುಡಿ, ಶೇಷಾದ್ರಿಪುರ, ವಿಶ್ವೇಶ್ವರಪುರ, ಶ್ರೀರಾಮಪುರ, ಶಂಕರಪುರ, ವಿಜಯನಗರ, ಜಯನಗರ, ಬನಶಂಕರಿ ಹೀಗೆ ಅನೇಕ ಹೊಸ ಬಡಾವಣೆಗಳು ರೂಪುಗೊಂಡವು. ಕಳೆದ ಒಂದೆರಡು ದಶಕಗಳಿಂದಲಂತೂ ಬದಲಾವಣೆ ಅತಿ ವೇಗವಾಗಿ ಸಾಗುತ್ತಿವೆ. ಜನವಸತಿ, ಆರೋಗ್ಯ, ಶಿಕ್ಷಣ, ಸಾರಿಗೆ, ಕುಡಿಯುವ ನೀರು, ವಿದ್ಯುಚ್ಛಕ್ತಿ, ವಾಣಿಜ್ಯ, ವ್ಯವಹಾರ, ಕಲೆ, ಸಾಹಿತ್ಯ, ಸಂಸ್ಕೃತಿ, ನಾಟಕ, ಸಂಗೀತ ಹೀಗೆ ಪ್ರತಿಯೊಂದು ಕ್ಷೇತ್ರವೂ ವಿಸ್ತಾರಗೊಂಡು ೧೯೪೯ರಲ್ಲಿ ರೂಪುಗೊಂಡ ಮಹಾನಗರ ಪಾಲಿಕೆ ೨೦೦೭ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಾಗಿ ಪರಿವರ್ತಿತವಾಗಿದೆ.

ಇದರ ವ್ಯಾಪ್ತಿ ೧೦೦ ರಿಂದ ೧೯೮ ವಾರ್ಡ್‌ಗಳಿಗೆ ವಿಸ್ತರಿಸಲ್ಪಟ್ಟಿದೆ. ಮುಖ್ಯವಾಗಿ ಸಂಚಾರ ವ್ಯವಸ್ಥೆಯನ್ನು ಸುಗಮಗೊಳಿಸಲು ನಗರದ ವಿವಿದೆಡೆಗಳಲ್ಲಿ ಮೇಲ್ಸೇತುವೆಗಳೂ, ಅಂಡರ್‌ಪಾಸ್‌ಗಳೂ ನಿರ್ಮಾಣವಾಗಿವೆ. ಮೆಟ್ರೋ ರೈಲು ಯೋಜನೆಯೂ ಪ್ರಗತಿಪಥದಲ್ಲಿದೆ. ಪ್ರಸ್ತುತ ರಾಜ್ಯಸರ್ಕಾರವು ನಗರದ ಸರ್ವತೋಮುಖ ಬೆಳವಣಿಗೆಗಾಗಿ ಪ್ರಥಮ ಆದ್ಯತೆ ನಿಡಿದೆ. ಈಗಿರುವ ಲಾಲ್‌ಬಾಗ್, ಕಬ್ಬನ್ ಪಾರ್ಕ್ ಹಾಗೂ ಮತ್ತಿತರ ಸುಂದರ ಉದ್ಯಾನವನಗಳ ಜೊತೆ ಇನ್ನೂ ನಾಲ್ಕು ಮಿನಿಲಾಲ್‌ಬಾಗ್‌ಗಳು ರೂಪಗೊಂಡು ಇಲ್ಲಿನ ಹಸಿರು ಸಂಪತ್ತನ್ನು ವೃದ್ಧಿಸಲಿವೆ. ಎಲ್ಲಾ ಕ್ಷೇತ್ರಗಳಿಗೂ ವಿಶ್ವದರ್ಜೆಯ ಸೌಕರ್ಯವನ್ನು ನೀಡಲಾಗುತ್ತದೆ. ಇನ್ನೆರಡು ವರ್ಷಗಳಲ್ಲಿ ಬೆಂಗಳೂರು ಅತ್ಯಾಧುನಿಕ ಸ್ವರೂಪವನ್ನು ಪಡೆದು ವಿಶ್ವದ ಯಾವುದೇ ಆಧುನಿಕ ನಗರಕ್ಕೆ ಸರಿಸಮಾನ ಸ್ಥಾನವನ್ನು ಪಡೆಯಲಿದೆ. ಈ ಪ್ರಗತಿಯ ಹಾದಿಯಲ್ಲಿ ಈಗ ನಾವು ಕಾಣುತ್ತಿರುವ ಸಂಚಾರ ದಟ್ಟಣೆ, ಪರಿಸರ ಮಾಲಿನ್ಯ, ಮೂಲಭೂತ ಸೌಕರ್ಯಗಳ ಕೊರತೆ ಮುಂತಾದ ಸಮಸ್ಯೆಗಳೆಲ್ಲವೂ ತಾತ್ಕಾಲಿಕ. ಅಭಿವೃದ್ಧಿಯ ದಿಕ್ಕಿನಲ್ಲಿ ವೇಗವಾಗಿ ಸಾಗುವ ಯಾವುದೇ ನಗರ ಅಥವಾ ದೇಶ ಅನಿವಾರ್ಯವಾಗಿ ಎದುರಿಸಲೇಬೇಕಾಗಿ ಬರುವ ತೊಂದರೆಗಳಿವು. ಒಟ್ಟಿನಲ್ಲಿ ಏನೇ ಅಡಚಣೆಗಳಿದ್ದರೂ ಬೆಂಗಳೂರು ಬದಲಾಗುತ್ತಿದೆ, ಮುನ್ನಡೆಯುತ್ತಿದೆ, ಹಳೆಬೇರು ಹೊಸ ಚಿಗುರಿನ ಭವ್ಯ ಬೆಂಗಳೂರು ರೂಪುಗೊಳ್ಳುತ್ತಿದೆ.೧

ವಿಭಿನ್ನ ಪ್ರಕಾರದ ಸಮುದಾಯಗಳ ನಡುವೆ ಗಾತ್ರ, ಜನಸಾಂದ್ರತೆ, ಶ್ರಮವಿಭಜನೆಯ ಮಟ್ಟ, ಪ್ರತ್ಯೇಕತೆ, ಸಾಮುದಾಯಿಕ ಐಕ್ಯಮತ್ಯದ ಸ್ಥಿತಿ, ಸಾಮಾಜಿಕ ಪರಿವರ್ತನೆಯ ವೇಗ ಸಾಮಾಜಿಕ ಸ್ತರವಿನ್ಯಾಸ, ಸಾಮಾಜಿಕ ಚಲನೆ ಹಾಗೂ ಸಾಮಾಜಿಕ ನಿಯಂತ್ರಣದ ಸ್ವರೂಪ ಇವೇ ಮುಂತಾದ ಅಂಶಗಳು ಇದ್ದರೂ ಏರಿಳಿತ ಪ್ರಮಾಣಗಳ ಆಧಾರದ ಮೇಲೆ ಅವು ಗ್ರಾಮ ಸಮುದಾಯಕ್ಕೆ ಸಮೀಪವಾಗಿಯೇ ಗ್ರಾಮಾಂತರ ಪರಿಸರದ ಪಲ್ಲಟಗಳಾಗಿವೆ.

'ಜನಪದ ನಗರ ನಿರಂತರತೆ' ನಗರ ಜೀವನಕ್ರಮ ಮತ್ತು ಮೌಲ್ಯಗಳು ಬಹಳ ವ್ಯಾಪಕವಾಗಿ ಎಂಬಂತೆ ಗ್ರಾಮೀಣ ಪ್ರದೇಶಗಳಿಗೂ ಹರಡಿಕೊಂಡಿರುವುದರಿಂದ ಇತ್ತೀಚಿನ ದಿನಗಳಲ್ಲಿ ಗ್ರಾಮ ಪರಿಸರದಲ್ಲಿ ಸಾಕಷ್ಟು ಬದಲಾವಣೆಯಾಗಿದೆ.

ಬುಡಕಟ್ಟು ಸಮುದಾಯಗಳಲ್ಲಿ ಗ್ರಾಮ ಜೀವನ ಮತ್ತು ನಗರ ಜೀವನದ ಎಷ್ಟೋ ಅಂಶಗಳು ಒಟ್ಟಿಗೆ ಸೇರಿಕೊಂಡಿರುವುದನ್ನು ಕಾಣಬಹುದು. ಬೆಂಗಳೂರು ಗ್ರಾಮಾಂತರ ಪರಿಸರ ನಗರದ ಭಾಗಗಳಾಗಿರುವುದರ ಜೊತೆಗೆ ಹಳ್ಳಿಗಳಿಗೂ ದೂರವಾಗಿಲ್ಲದ ಕಾರಣ ಇಂತಹ ಪ್ರದೇಶದಲ್ಲಿ ಗ್ರಾಮನಗರದ ಸಮಾಗಮವನ್ನು ಕಾಣಬಹುದು. "ಗ್ರಾಮ-ನಗರ ಸೆರಗು ಅಂಚು" ಇಂತಹ ಪ್ರದೇಶದಲ್ಲಿ ಭೂಮಿಯನ್ನು ಕೆಲವೊಮ್ಮೆ ಹಳ್ಳಿಗಳಂತೆ ಸಣ್ಣ ಪ್ರಮಾಣದ ಕೃಷಿಕಾರ್ಯಗಳಿಗೆ ಬಳಸಿಕೊಳ್ಳಬಹುದು. ಸಾಮಾನ್ಯವಾಗಿ ಎಲ್ಲೆಡೆಗಳಲ್ಲಿ ಕಾಣುವಂತೆ ಇಲ್ಲಿ ಭೂಮಿಯ ಬೆಲೆ ನಗರದ ಕೇಂದ್ರ ಪ್ರದೇಶಗಳಿಗಿಂತಲೂ ಕಡಿಮೆಯಿರುವುದರಿಂದ ಹಾಗೂ ನಗರದಲ್ಲಿ ಕಟ್ಟುನಿಟ್ಟಾಗಿ ಜಾರಿಯಲ್ಲಿರುವ ವಲಯ ಕ್ರಮದ ನೀತಿ ನಿಯಮಾವಳಿಗಳು ಇಲ್ಲಿ ಜಾರಿಯಲ್ಲಿಲ್ಲದೆ ಇರುವುದರಿಂದ ಕೆಲವೊಮ್ಮೆ ಭೂಮಿಯನ್ನು ಕೆಲವು ಅನಪೇಕ್ಷಿತ ಉದ್ದೇಶಗಳಿಗೂ ಬಳಸಿಕೊಳ್ಳುವುದುಂಟು.

ಬುಡಕಟ್ಟು ಸಮುದಾಯದ ಜನರು ಗ್ರಾಮ ಪ್ರದೇಶದ ಮಧ್ಯಭಾಗ ತಾಣದಿಂದ ದೂರವಿರಲು ಬಯಸಿ ನಗರದ ಕಡೆ ಕೆಲವೊಮ್ಮೆ ಸಮೀಪದ ಪ್ರದೇಶಗಳಲ್ಲಿ ಸಾಗಿ ನೆಲೆ ನಿಲ್ಲಲು ಬಯಸುವುದರಿಂದ ಗ್ರಾಮಾಂತರ ಪರಿಸರದಲ್ಲಿ ಸಾಕಷ್ಟು ಪಲ್ಲಟಗಳಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬುಡಕಟ್ಟು ಸಮುದಾಯದ ಗ್ರಾಮಗಳ ಪಲ್ಲಟವು ಹಲವಾರು ಅಂಶಗಳ ಪ್ರಭಾವದಿಂದಾಗಿರುವುದು ವಾಸ್ತವಿಕ ವಿಚಾರವಾಗಿದೆ. ಗ್ರಾಮಾಂತರ ಪ್ರದೇಶದ ಪಲ್ಲಟಕ್ಕೆ ಕಾರಣವಾದ ಪ್ರಮುಖ ಅಂಶಗಳನ್ನು ಈ ಕೆಳಕಂಡಂತೆ ಅಧ್ಯಯನ ನಡೆಸಲಾಗಿದೆ.

**ಪ್ರಾದೇಶಿಕ ಪಲ್ಲಟಗಳು :**

ಬುಡಕಟ್ಟು ಸಮುದಾಯಗಳ ಗ್ರಾಮ ಪರಿಸರದ ಪಲ್ಲಟವು ಸ್ಥಳೀಯ ಅಂಶಗಳು ವಿವಿಧ ಬುಡಕಟ್ಟು ಸಮುದಾಯಗಳ ಕುಟುಂಬಗಳು ಹೊಲಸೆ ಬರಲು ಹಾಗೂ ನಿರ್ದಿಷ್ಟ ಸ್ಥಳೀಯ ನೆಲೆಯಲ್ಲಿ ನೆಲೆಸಲು ಕಾರಣವಾಗಿರುವುದನ್ನು ಭೌಗೋಳಿಕ ಅಂಶಗಳಾದ ಭೂಭಾಗ. ನೀರು ಮತ್ತು ವಾಯುಗುಣವು ಮುಖ್ಯವಾದವುಗಳಾಗಿವೆ.

ಇರುಳಿಗರು ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳು ಬೆಂಗಳೂರು ಗ್ರಾಮಾಂತರ ಪರಿಸರದಲ್ಲಿ ಸ್ಥಿರವಾದ ಜೀವನವನ್ನು ನಿರ್ವಹಿಸಲು ಒಂದು ಕಡೆ ನೆಲೆಸಲು ತಮ್ಮ ಮೂಲ ಗುಹೆಗಳು, ಬೆಟ್ಟಗುಡ್ಡಗಳನ್ನು ಬಿಟ್ಟು ಗ್ರಾಮ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು ನೆಲೆಸಿರುವುದು ಭೂಮಿಯ ಪಲ್ಲಟಗಳನ್ನು ತಿಳಿಸುತ್ತದೆ. ಅರಣ್ಯ ಕಾಯಿದೆಯ ಪರಿಣಾಮ ಕಾಡಿನಿಂದ ಹೊರಬಂದ ಈ ಬುಡಕಟ್ಟು ಸಮುದಾಯವು ಫಲವತ್ತತೆಯನ್ನು ಹೊಂದಿರುವ ಭೂಪ್ರದೇಶಗಳಲ್ಲಿ ಅಲ್ಲಲ್ಲಿ ವ್ಯವಸಾಯವನ್ನು ಮಾಡಿಕೊಂಡು ಜೀವನವನ್ನು ನಿರ್ವಹಿಸುತ್ತಿರುವುದನ್ನು ಕಾಣಬಹುದು. ಮನೆಗಳ

ನಿರ್ಮಾಣ, ಉತ್ಪಾದನೆಗೆ ಹೆಚ್ಚಿನ ಪ್ರೋತ್ಸಾಹ, ಅಧಿಕ ಇಳುವರಿ, ಅಪಾರ ಜಾನುವಾರು ಸಂಪತ್ತಿಗೆ ಗ್ರಾಮ ಪರಿಸರವು ವಿಶಾಲವಾದ ಭೂಭಾಗವನ್ನು ಹೊಂದಿರುವುದು ಅವಶ್ಯಕವಾಗಿದೆ.

ಯಾವುದೇ ಬುಡಕಟ್ಟು ಸಮುದಾಯವು ಬದಲಾವಣೆಯನ್ನು ಸಾಧಿಸಲು ಒಂದು ನಿರ್ದಿಷ್ಟ ಭೂಪ್ರದೇಶವು ಎಷ್ಟು ಮುಖ್ಯವೋ ಆ ಭೂಪ್ರದೇಶದಲ್ಲಿ ನೀರು ಮತ್ತು ವಾಯುಗುಣವು ಅಷ್ಟೇ ಮುಖ್ಯ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳು ನದಿ ತೀರ ಪ್ರದೇಶಗಳಲ್ಲಿ ವಾಸಿಸುತ್ತಿರುವುದು ಅವರಿಗೆ ಉತ್ತಮ ವಾಯುಗುಣವನ್ನು ಒದಗಿಸುತ್ತಿರುವುದು ಪ್ರಾದೇಶಿಕ ಪಲ್ಲಟಗಳಿಂದ ಎಂಬುವುದನ್ನು ಕಾಣಬಹುದು. ಆದರೆ ಹಕ್ಕಿಪಿಕ್ಕಿ ಮತ್ತು ಇರುಳಿಗರಿಗೆ ಅಂಥ ಭೂಮಿ, ಫಲವತ್ತತೆ ಅಥವಾ ಉತ್ಪಾದನಾ ಮಾರ್ಗಗಳು ಹೇರಳವಾಗಿ ದೊರೆತಿಲ್ಲ.

**ಆರ್ಥಿಕ ಪಲ್ಲಟಗಳು :**

ಬುಡಕಟ್ಟು ಸಮುದಾಯಗಳ ಗ್ರಾಮ ಪರಿಸರದ ಪಲ್ಲಟದಲ್ಲಿ ಆಥಿಕ ಪಲ್ಲಟವು ಪ್ರಮುಖವಾದದ್ದು ಎಂಬುವುದನ್ನು ಅಧ್ಯಯನ ಮಾಡಬಹುದು. ಆರ್ಥಿಕ ಪಲ್ಲಟವು ಧನಾತ್ಮಕ ನೆರವು ನೀಡುವ ಕೃಷಿ ಪಲ್ಲಟ, ಗ್ರಾಮ ಆರ್ಥಿಕತೆಯ ಪಲ್ಲಟ ಮತ್ತು ಗೃಹ ಕೈಗಾರಿಕೆಯ ಪಲ್ಲಟವು ಬಹುರೂಪಿ ಪಲ್ಲಟಗಳಾಗಿ ಗ್ರಾಮ ಪರಿಸರದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ.

ಬುಡಕಟ್ಟು ಸಮುದಾಯಗಳು ತಮ್ಮ ಮೂಲ ವೃತ್ತಿಯಾದ ಬೇಟೆಯನ್ನು ಬಿಟ್ಟ ಮೇಲೆ ಗ್ರಾಮ ಪ್ರದೇಶಗಳಿಗೆ ಬಂದು ವಾಸಿಸುತ್ತಿರುವ ಇವರು ಕೃಷಿಯನ್ನು ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿ ಜೀವನ ನಿರ್ವಹಿಸುತ್ತಿದ್ದಾರೆ. ಕೆರೆ, ನದಿ ತೀರ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ವ್ಯವಸಾಯವನ್ನು ಮಾಡುತ್ತಿದ್ದಾರೆ.

ಕೃಷಿಯಲ್ಲಿ ಹೆಚ್ಚಿನ ಉತ್ಪಾದನೆಯನ್ನು ಸಾಧಿಸಲು ಸೂಕ್ತ ರೀತಿಯ ಒಳ್ಳೆಯ ನೇಗಿಲುಗಳು, ಆರ್ಥಿಕ ಇಳುವರಿ ಕೊಡುವ ಬೀಜಗಳು, ಉತ್ತಮ ಗೊಬ್ಬರ, ಬೇಸಾಯಕ್ಕೆ ಬೇಕಾದ ಸಾಲವನ್ನು ಇಂದು ಸಹಕಾರಿ ಸಂಘ ಸಂಸ್ಥೆಗಳು ಒದಗಿಸುತ್ತಿವೆ.

ಕೃಷಿ ವೃತ್ತಿಯ ಜೊತೆಗೆ ಗೃಹ ಕೈಗಾರಿಕೆಗಳನ್ನು ಅಳವಡಿಸಿಕೊಂಡು ಮುಂದುವರೆಯುತ್ತಿರುವುದನ್ನು ಈ ಆರ್ಥಿಕ ಪಲ್ಲಟಗಳಿಂದ ತಿಳಿಯಬಹುದು.

**ಸಾಮಾಜಿಕ ಪಲ್ಲಟಗಳು :**

ಬುಡಕಟ್ಟು ಸಮುದಾಯಗಳು ಗ್ರಾಮೀಣ ಪ್ರದೇಶದ ಪರಿಸರದಲ್ಲಿ ಬೆಳವಣಿಗೆಯನ್ನು ಸಾಧಿಸಲು ಹಲವಾರು ಸಾಮಾಜಿಕ ಅಂಶಗಳಾದ ಶಾಂತಿ, ಭದ್ರತೆ, ಸಹಕಾರ, ಬುದ್ಧಿಶಕ್ತಿ ಮತ್ತು ದುಡಿಮೆ ಪ್ರಮುಖ ಅಂಶಗಳಾಗಿವೆ.

ಯಾವುದೇ ಗ್ರಾಮ ಪರಿಸರವು ಪಲ್ಲಟಗೊಳ್ಳಬೇಕಾದರೆ ಪ್ರಾದೇಶಿಕ, ಆರ್ಥಿಕ ಹಾಗೂ ಸಾಮಾಜಿಕ ಅಂಶಗಳು ಅತ್ಯಗತ್ಯವಾಗಿರುತ್ತದೆ. ಇವುಗಳಲ್ಲಿ ಒಂದೊಂದು ಅಂಶವು ಸಹ ಗ್ರಾಮ ಪರಿಸರದ ಪಲ್ಲಟಕ್ಕೆ ತನ್ನದೇ ಆದ ನೆರವು ನೀಡುತ್ತಿರುವುದನ್ನು ಅಧ್ಯಯನ ಮಾಡಬಹುದು.

**ಪರಿಸರದ ಪಲ್ಲಟಗಳು :**

ಪರಿಸರ ಪಲ್ಲಟದ ಅಂಶಗಳು ಬೆಂಗಳೂರು ಗ್ರಾಮಾಂತರ ಪರಿಸರದ ಮೇಲೆ ಪ್ರಭಾವವನ್ನುಂಟು ಮಾಡುತ್ತಿವೆ. ಪರಿಸರ ಪಲ್ಲಟದ ಅಂಶಗಳಾದ ಭೂಭಾಗ, ಮೇಲ್ಮಟ್ಟ, ಸಂಪರ್ಕ ಸಾಧನಗಳು, ಕೈಗಾರಿಕೆಗಳ ಬಗೆಗಳು, ಆರ್ಥಿಕ ಕ್ರಮ, ಜನಸಂಪತ್ತು, ಪ್ರಾಣಿ ಸಂಪತ್ತು ಮೊದಲಾದವು ಬುಡಕಟ್ಟು ಸಮುದಾಯಗಳ ಗ್ರಾಮ ರಚನೆ ಹಾಗೂ ಬೆಳವಣಿಗೆಗಳ ಮೇಲೆ ಗಮನಾರ್ಹ ಪ್ರಭಾವವನ್ನುಂಟು ಮಾಡುತ್ತಿವೆ. ಅವು ಬೆಂಗಳೂರು ಗ್ರಾಮಾಂತರ ಪರಿಸರದ ಪಲ್ಲಟವನ್ನು ನಿರ್ಧರಿಸುತ್ತವೆ. ಯಾವುದೇ ಬುಡಕಟ್ಟು ಸಮುದಾಯದ ಗ್ರಾಮ ರಚನೆಯು ಅಲ್ಲಿಯ ಭೂಭಾಗದ ಸ್ವರೂಪ, ವಾಯುಗುಣ, ನೈಸರ್ಗಿಕ ಅನುಕೂಲಗಳು, ಪ್ರತಿಕೂಲಗಳು, ಇತರ ಸಕಾರಾತ್ಮಕ ಅಂಶಗಳು, ನಕಾರಾತ್ಮಕ ಅಂಶಗಳು ಮೊದಲಾದವುಗಳನ್ನು ಆಧರಿಸಿ ಬೆಳವಣಿಗೆ ಹೊಂದಿರುವುದು ನಿರ್ವಿವಾದದ ಸಂಗತಿಯಾಗಿದೆ ಎಂಬುವುದನ್ನು ಅಧ್ಯಯನ ಮಾಡಬಹುದು.

ಬುಡಕಟ್ಟು ಸಮುದಾಯದ ಗ್ರಾಮಾಂತರ ಪರಿಸರದ ಬೆಳವಣಿಗೆಯ ಮೇಲೆ ಜನಸಂಖ್ಯೆ ಅಪಾರವಾದ ಪ್ರಭಾವವನ್ನುಂಟು ಮಾಡುತ್ತಿದೆ. ಜನಸಂಖ್ಯೆಯು ಬೆಳೆದಂತೆ ಗ್ರಾಮ ಸಮುದಾಯವು ಪಟ್ಟಣ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಆ ಜನಸಂಖ್ಯೆ ಹೆಚ್ಚುತ್ತಾ ಹೋದರೆ ಆ ಸಮುದಾಯವೇ ನಗರ ಎನಿಸುತ್ತದೆ. ಜನಸಂಖ್ಯೆಯ ಹೆಚ್ಚಳವು ಹಲವಾರು ಅಂಶಗಳ ಹೆಚ್ಚುವರಿಗೆ ಕಾರಣವಾಗುತ್ತವೆ. ಗ್ರಾಮ ಸಮುದಾಯದಲ್ಲಿ ಜನಸಂಖ್ಯೆ ಹೆಚ್ಚಾದಂತೆ ಅಧಿಕ ಆಹಾರ ಪದಾರ್ಥಗಳ ಉತ್ಪಾದನೆ ಅಗತ್ಯವಾಗುತ್ತದೆ. ಶಿಶುವಿಹಾರ, ಪ್ರಾಥಮಿಕ, ಪ್ರೌಢಶಾಲೆಗಳು ಸ್ಥಾಪನೆಯಾಗುತ್ತಿವೆ. ಅಂಗಡಿಗಳು, ಮಾರುಕಟ್ಟೆಗಳು ತೆರೆಯಲ್ಪಡುತ್ತಿವೆ. ಸಂಪರ್ಕ ಹಾಗೂ ಸಮಾಚಾರ ಸಾಧನಗಳು ಏರ್ಪಡುತ್ತಿವೆ. ಮಾಧ್ಯಮಿಕ ಬಾಂಧವ್ಯಗಳು ಏರ್ಪಡುತ್ತಿವೆ. ಔಪಚಾರಿಕ ಸಾಮಾಜಿಕ ನಿಯಂತ್ರಣ ಸಾಧನಗಳು ಅಗತ್ಯವಾಗಿವೆ. ಪೋಲಿಸ್ ಮೊದಲಾದ ಭದ್ರತಾ ವ್ಯವಸ್ಥೆಗಳು ಅಸ್ತಿತ್ವಕ್ಕೆ ಬರುತ್ತಿವೆ.

ಬುಡಕಟ್ಟು ಸಮುದಾಯಗಳ ಗ್ರಾಮ ಸಮುದಾಯದಲ್ಲಿ ಮತದಾನದ ಪ್ರಭಾವ ಗಮನಾರ್ಹವಾಗಿ ಕಂಡುಬರುತ್ತಿದೆ. ಇವರ ಸಮುದಾಯದಲ್ಲಿನ ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ಸ್ವರೂಪವು ಬದಲಾಗುತ್ತಿದೆ. ಬಯಲು ಪ್ರದೇಶವನ್ನು ಆಯ್ಕೆ ಮಾಡಿಕೊಂಡಿರುವ ಇರುಳಿಗ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯವು ಗ್ರಾಮ ಸಮುದಾಯದ ಪರಿಸರ ಪಲ್ಲಟಕ್ಕೆ ಒಳಗಾಗಿದ್ದಾರೆ. ಯಾವುದೇ ಬುಡಕಟ್ಟು ಸಮುದಾಯದ ಜನರ ಆರ್ಥಿಕ ಸುಸ್ಥಿತಿ ಇಲ್ಲವೇ ದುಸ್ಥಿತಿಗೆ ಬಹಳಮಟ್ಟಿಗೆ ಕಾರಣವಾಗಿರುತ್ತವೆ. ಜನರು ಬಡವರಾಗಿರಲು, ಸುಮಾರು ಸ್ಥಿತಿವಂತರಾಗಿರಲು ಇಲ್ಲವೇ

ಶ್ರೀಮಂತರಾಗಿರಲು ವಿಶೇಷವಾಗಿ ಪ್ರಭಾವ ಬೀರುತ್ತವೆ. ಜನರಲ್ಲಿ ಜಮೀನ್ದಾರ, ಕೃಷಿ ಕಾರ್ಮಿಕ, ಕುಶಲ ಕೆಲಸಗಾರ, ಶ್ರಮ ಜೀವಿ ಮೊದಲಾದ ಅಂತರಗಳನ್ನು ಉಂಟುಮಾಡಿ ಅವರ ನಡುವೆ ವಿಶೇಷ ಸಂಬಂಧಗಳು ಬೆಳೆದು ಬರಲು ಕಾರಣವಾಗುತ್ತಿವೆ.

ಉದ್ಯೋಗವು ಸಹ ಬೆಂಗಳೂರು ಗ್ರಾಮಾಂತರ ಪರಿಸರದ ಪಲ್ಲಟದ ಮೇಲೆ ಗಮನಾರ್ಹ ರೀತಿಯಲ್ಲಿ ಪ್ರಭಾವ ಬೀರುತ್ತಿವೆ. ಬೇಟೆಯನ್ನು ಬಿಟ್ಟು ಕೃಷಿ ಉದ್ಯೋಗವನ್ನು ಆಧರಿಸಿ ಬದುಕುತ್ತಿರುವ ಬುಡಕಟ್ಟು ಸಮುದಾಯದ ಜನರು ಕೃಷಿ ಉದ್ಯೋಗದ ಜೊತೆಗೆ ನೇಯ್ಗೆ, ಬುಟ್ಟಿ ಹೆಣೆಯುವುದು, ಕಟ್ಟಿಗೆ ಮಾರುವುದು ಇತ್ಯಾದಿ ಉಪ ಉದ್ಯೋಗಗಳನ್ನು ಆಧರಿಸಿ ಬದುಕುತ್ತಿರುವ ಬುಡಕಟ್ಟು ಸಮುದಾಯದವರು ಬೆಂಗಳೂರು ಗ್ರಾಮಾಂತರ ಪರಿಸರದಲ್ಲಿ ಸಾಕಷ್ಟು ಪಲ್ಲಟಗಳಿಗೆ ಒಳಗಾಗಿದ್ದಾರೆ.

ಬೆಂಗಳೂರು ಗ್ರಾಮಾಂತರ ಪ್ರದೇಶವು ಬೃಹತ್ ಬೆಂಗಳೂರು ಎಂಬ ಮಹಾ ನಗರಕ್ಕೆ ಪಕ್ಕದಲ್ಲಿದ್ದು ಬುಡಕಟ್ಟು ಸಮುದಾಯಗಳಿಗೂ ಆಶ್ರಯ ತಾಣವಾಗಿದೆ.

ಬೆಂಗಳೂರು ಗ್ರಾಮಾಂತರ ಪರಿಸರವು ಬುಡಕಟ್ಟು ಸಮುದಾಯಗಳಿಗೆ ಗ್ರಾಮ, ಪಟ್ಟಣ ಹತ್ತಿರವಿದ್ದು, ಅದರಲ್ಲಿಯೂ ದಟ್ಟವಾದ ಅಡವಿ ಇಲ್ಲವೇ ಆಳವಾದ ಕಣಿವೆ ಮೊದಲಾದ ಕಡೆ ಇರುವುದಾದರೆ ಅಲ್ಲಿನ ಜನರು ಇನ್ನೂ ಹಳೆಯ ಕಾಲದ ಕಂದಾಚಾರಗಳಿಗೆ ಕಟಿಬದ್ಧರಾಗಿರುವವರಂತೆ ಕಂಡುಬರುತ್ತಾರೆ. ಭೂತಪ್ರೇತಗಳಲ್ಲಿ, ಮಾಟಮಂತ್ರಗಳಲ್ಲಿ ಬಹಳವಾಗಿ ನಂಬಿಕೆವುಳ್ಳವರಾಗಿರುತ್ತಾರೆ. ಹೊಸ ಆಲೋಚನೆಗಲು, ನೂತನ ಕಲ್ಪನೆಗಳು, ಬದಲಾವಣೆಗಲು ಅವರಲ್ಲಿ ಕಂಡುಬರುವುದು ಬಹಳ ಕಡಿಮೆ. ಆಧುನಿಕ ಸಾಧನ ಸಾಮಗ್ರಿಗಲು ಅವರಿಗೆ ಬಹಳಮಟ್ಟಿಗೆ ದುರ್ಲಾಭ.

ಬೆಂಗಳೂರು ಗ್ರಾಮಾಂತರ ಪ್ರದೇಶವು ನಗರಕ್ಕೆ ಸಾಕಷ್ಟು ಸಮೀಪವಾಗಿರುವುದರಿಂದ ವಿಶೇಷವಾದ ಪಲ್ಲಟಗಳು ಕಂಡುಬರುತ್ತವೆ. ಅಲ್ಲಿನ ಜನರು ಪಟ್ಟಣದ ಜನರೊಡನೆ, ಪಟ್ಟಣದ ಜನಜೀವನದೊಡನೆ, ನಿಕಟ ಸಂಪರ್ಕವುಳ್ಳವರಾಗಿರುತ್ತಾರೆ. ಅವರಿಗೆ ಪಟ್ಟಣಗಳಲ್ಲಿ ದೊರೆಯುವ ಹಲವಾರು ಪದಾರ್ಥಗಳ ಪರಿಚಯವಾಗುತ್ತದೆ. ಅವರು ಸುಗಂಧ ದ್ರವ್ಯಗಳು, ಹೊಸ ಬಟ್ಟೆಗಳು, ನೂತನ ಉಡುಪುಗಳು, ವಿನೂತನ ನೀಟುಗಾರಿಕೆಯ ಅಥವಾ ಶೋಭಾಚಾರದ ಸಾಧನ ಸಾಮಗ್ರಿಗಳು, ವಿವಿಧ ಬಗೆಯ ಅಲಂಕಾರದ ಪದಾರ್ಥಗಳು ಮೊದಲಾದವುಗಳನ್ನು ಗಮನಿಸಿ ಉಪಯೋಗಿಸಲು ಉಪಕ್ರಮಿಸುತ್ತಿದ್ದಾರೆ. ಅವರಿಗೂ ಸಹ ಸಮಯ ಪಾಲನೆಯ ಪ್ರಜ್ಞೆ, ಶಿಸ್ತು ಬದ್ಧ ಜೀವನದ ಪರಿಕಲ್ಪನೆ, ಆರ್ಥಿಕ ಸುಸ್ಥಿತಿಯನ್ನುಂಟು ಮಾಡಿಕೊಳ್ಳಲು ಆಸಕ್ತಿ, ಸಣ್ಣ ಪ್ರಮಾಣದ ವ್ಯಾಪಾರ, ಕಾರ್ಯ ಕ್ಷೇತ್ರಗಳನ್ನು ವಿಸ್ತರಿಸಿಕೊಳ್ಳುವುದು, ಆರ್ಥಿಕ ವಹಿವಾಟದಲ್ಲಿ ಬದಲಾವಣೆ ಹೆಚ್ಚಾಗಿ ಕಂಡುಬರುತ್ತವೆ. ದುಡಿಯಲು ಕಂಡುಕೊಳ್ಳಬಹುದಾದ ಹಲವಾರು ಮಾರ್ಗಗಳ ಜೊತೆಗೆ, ಆದಾಯವನ್ನು ಹೆಚ್ಚಿಸಿಕೊಳ್ಳಲಿರುವ ವಿವಿಧ ಅವಕಾಶಗಳ ಜೊತೆಗೆ, ಮನೋರಂಜನೆಯು ಸೇರಿದಂತೆ ಅನೇಕ ವಿಷಯಗಲಿಗೆ ಸಂಬಂಧಿಸಿದ ಬೇಡಿಕೆಗಳ ಪೂರೈಕೆಯ ಬಗೆಗಿನ ಖರ್ಚು ಸಹ ಕಂಡುಬರುತ್ತದೆ. ಜನರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ನೈತಿಕ ಜೀವನದ ಮೇಲೂ

ಗಮನಾರ್ಹವಾದ ಪ್ರಭಾವವುಂಟಾಗುತ್ತದೆ. ವಿವಿಧ ವಿಷಯಗಳ ಬಗ್ಗೆ ಜನರ ದೃಷ್ಟಿಕೋನಗಳಲ್ಲಿ ಬದಲಾವಣೆ ಕಂಡುಬರುತ್ತದೆ.

ಗ್ರಾಮ ಸಮುದಾಯವು ಯಾತ್ರಾಸ್ಥಳವಾಗಿರುವ ಪಟ್ಟಣಕ್ಕೆ ಹತ್ತಿರವಾಗಿದ್ದರೆ, ವ್ಯಾಪಾರ ಕೇಂದ್ರವಾದ ಪಟ್ಟಣಕ್ಕೆ ಸಮೀಪವಾಗಿದ್ದರೆ ಪ್ರಭಾವ ಭಿನ್ನ ಭಿನ್ನ ರೂಪಗಳಲ್ಲಿ ಪ್ರಾಪ್ತವಾಗುತ್ತದೆ. ಜನರು ತಾವು ಉತ್ಪಾದಿಸಬಹುದಾದ ಹೂವು, ಕಾಯಿ, ಹಣ್ಣು, ತರಕಾರಿ, ಹಾಲು, ಮೊಸರು, ಬೆಣ್ಣೆ, ತುಪ್ಪ, ದವಸಧಾನ್ಯಗಳು ಮೊದಲಾದವುಗಳನ್ನು ಸಮೀಪದಲ್ಲಿರುವ ಪಟ್ಟಣ ಇಲ್ಲವೇ ನಗರಕ್ಕೆ ತೆಗೆದುಕೊಂಡು ಹೋಗಿ ಮಾರಿ ಹಣವನ್ನು ಸಂಪಾದಿಸಬಹುದಾದ ವಿಶೇಷ ಅವಕಾಶಗಳಿರುತ್ತವೆ. ಪಟ್ಟಣದ ಜನರ ಸಂಪರ್ಕ ಹಾಗೂ ಸಂಬಂಧಗಳಿಂದ ಗ್ರಾಮ ಸಮುದಾಯಗಳ ಜನರೂ ಸಹ ಹೆಚ್ಚು ಬುದ್ಧಿವಂತರಾಗುವುದು, ವಿದ್ಯಾವಂತರಾಗುವುದು, ವ್ಯಾಪಾರ ವ್ಯವಹಾರಗಳಲ್ಲಿ ಆಸಕ್ತಿ ವಹಿಸುವುದು, ತನ್ಮೂಲಕ ಆರ್ಥಿಕವಾಗಿ ಸುಸ್ಥಿತಿಯನ್ನು ಪಡೆಯುವುದು, ಪ್ರಗತಿಯನ್ನು ಸಾಧಿಸುವುದು, ಭೌತಿಕ ಸಂಸ್ಕೃತಿಯಲ್ಲಿ ಹೆಚ್ಚಿನ ಪ್ರಗತಿ ಸಾಧ್ಯವಾಗುವಂತೆ ಮಾಡುವುದು ವಿಶೇಷವಾಗಿ ಕಂಡುಬರುತ್ತವೆ.

ಮೇಲೆ ವಿವರಿಸಲಾಗಿರುವ ಸಂಗತಿಗಳೇ ಅಲ್ಲದೆ ಭೌಗೋಳಿಕ ನೆಲೆ ಸಹ ಗ್ರಾಮಾಂತರ ಪರಿಸರದ ಮೇಲೆ ಪಲ್ಲಟವು ಗಮನಾರ್ಹ ರೀತಿಯಲ್ಲಿ ಪರಿಣಾಮವನ್ನುಂಟು ಮಾಡುತ್ತಿದೆ. ಈಗಾಗಲೇ ತಿಳಿಸಲಾಗಿರುವಂತೆ ಬುಡಕಟ್ಟು ಸಮುದಾಯವು ಬಯಲು ಸೀಮೆಯಲ್ಲಿ ವಾಸಿಸುತ್ತಿದ್ದಾರೆ. ನಿರ್ದಿಷ್ಟ ವಾಯುಗುಣಕ್ಕನುಗುಣವಾಗಿ ಅಲ್ಲಿಯ ಪರಿಸರಕ್ಕನುಗುಣವಾಗಿ ಜನರ ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳು ಬೆಳವಣಿಗೆ ಹೊಂದುತ್ತಿವೆ. ಅವರ ಆಹಾರ-ವಿಹಾರ, ಉಡಿಗೆ-ತೊಡಿಗೆ, ನಡೆ-ನುಡಿ, ರೀತಿ-ನೀತಿ, ಆಚಾರ-ವಿಚಾರ, ಧ್ಯೇಯಧೋರಣೆ ಮೊದಲಾದವು ಪಲ್ಲಟಗೊಂಡಿವೆ. ಬೆಟ್ಟ ಗುಡ್ಡ ಪ್ರದೇಶಗಳಲ್ಲಿನ ಬುಡಕಟ್ಟು ಸಮುದಾಯಗಳ ಜನರು ಸಾಮಾನ್ಯವಾಗಿ ಹೆಚ್ಚು ಪರಿಶ್ರಮ ಪಡುವವರೂ ಬಡವರೂ ಮೂಢನಂಬಿಕೆಯುಳ್ಳವರೂ ಆಗಿರುತ್ತಾರೆ.

ಅಂತೆಯೇ ವಾಸ್ತವಿಕವಾಗಿ ಬೆಂಗಳೂರು ಗ್ರಾಮಾಂತರ ಪರಿಸರದ ಮೇಲೆ ಸಾಕಷ್ಟು ಅಂಶಗಳು ಪಲ್ಲಟವನ್ನುಂಟು ಮಾಡಿರುವುದನ್ನು ಅಧ್ಯಾಯನದ ಮೂಲಕ ತಿಳಿಯಬಹುದು

## ೨. ಭೂಮಿ- ಅರಣ್ಯ-ಕೃಷಿ- ಕೈಗಾರಿಕೆ ಇತ್ಯಾದಿ

**ಭೂಮಿ:**

ಭಾರತದ ಬುಡಕಟ್ಟು ಸಮಾಜಗಳ ಸಂಸ್ಕೃತಿ ರೂಪುಗೊಂಡಿರುವುದೇ ಭೂಮಿಯ ಜೊತೆಗಿನ ಅವುಗಳ ಅನನ್ಯ ಅನುಸಂಧಾನದಲ್ಲಿ. ಭೂಮಿ ಮತ್ತು ಬುಡಕಟ್ಟು ಸಮುದಾಯಗಳ ನಿರಂತರ ಅನುಸಂಧಾನದ ಫಲವಾಗಿಯೇ ಸಂಸ್ಕೃತಿಗೆ ವಿಕಾಸಶೀಲ

ಪ್ರವೃತ್ತಿ ಮೂಕೂಡಿ ಬಂದಿದೆ. ಬುಡಕಟ್ಟು ಜನ ಸಮೂಹಗಳು ಸಮುದಾಯಗಳಾಗಿ ಸಂಘಟಿತವಾದದ್ದೇ, ಅವು ಭೂಮಿಯ ಜೊತೆ ಸಾಧ್ಯವಾಗಿಸಿಕೊಂಡ 'ಆಧ್ಯಾತ್ಮಿಕ ಮೋಹದಿಂದಾಗಿ, ಭೂಮಿ 'ಲೌಕಿಕದಲ್ಲಿ' ಅನೇಕ ಸಾಧ್ಯತೆಗಳನ್ನು ಸಾಕಾರಗೊಳಿಸುವ ಜೀವಂತ ವೇದಿಕೆಯೆಂಬ ಪರಿಭಾವನೆ ಈ ಸಮುದಾಯಗಳ ಮೋಹವನ್ನು 'ಆಧ್ಯಾತ್ಮದ' ಮಟ್ಟಕ್ಕೆ ಎತ್ತರಿಸಿದೆ. ಇಂದು ಆದಿವಾಸಿಗಳು ಮತ್ತು ಕೆಳಜಾತಿಗಳ ಬಹುತೇಕ ಆಚರಣೆಗಳು ಮತ್ತು ಅಭಿವ್ಯಕ್ತಿ ಸಾಧ್ಯತೆಗಳು ಭೂಮಿಯ ಜೊತೆಗಿನ ಅವುಗಳ ಸಂಬಂಧದ ಫಲವಾಗಿ ಹುಟ್ಟಿಕೊಂಡಿವೆ.

ಸಮಾಜವಾದಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದ ಆಳುವ ವ್ಯವಸ್ಥೆಯ ಇನ್ನೊಂದು ಕ್ರೂರ ಮುಖವನ್ನು ಬುಡಕಟ್ಟು ಸಮುದಾಯಗಳು ಅದ್ಭುತವಾಗಿ ವ್ಯಾಖ್ಯಾನ ಮಾಡಬಲ್ಲರು. ಭೂಮಿಯಿಂದ ವಂಚಿತರಾದ ಬುಡಕಟ್ಟು ಸಮುದಾಯಗಳ ಇಂದಿನ ಅನೇಕ ಅಸಹಾಯಕ ಹೋರಾಟಗಳು ಇಲ್ಲಿನ ಆಳುವ ವ್ಯವಸ್ಥೆಯ ಹುನ್ನಾರಗಳನ್ನು ಎತ್ತಿ ತೋರುತ್ತಿವೆ. ಬುಡಕಟ್ಟು ಸಮುದಾಯಗಳ ಉತ್ಪಾದನ ಚಟುವಟಿಕೆಗಳು ಬಹುತೇಕ ಭೂಮಿಯನ್ನೇ ನೆಚ್ಚಿಕೊಂಡಿರುವ ಕಾರಣಕ್ಕಾಗಿ, ಭೂಮಿಯನ್ನು ಉಳಿಸಿಕೊಳ್ಳುವ ಮತ್ತು ಕಳೆದುಕೊಳ್ಳುವ ಅವರ ಎಲ್ಲಾ ಪ್ರಯತ್ನಗಳು ಜೀವನ್ಮರಣದ ಪ್ರಶ್ನೆಗಳಾಗಿಯೇ ಎದುರು ನಿಲ್ಲುತ್ತವೆ.

ಬುಡಕಟ್ಟು ಸಮುದಾಯಗಳಿಗೆ ಸ್ವಂತ ಆಸ್ತಿಯ ಪರಿಕಲ್ಪನೆ ಇರಲಿಲ್ಲ. ತೀರಾ ಮೊದಲಿಗೆ ಆಹಾರ ಸಂಗ್ರಹಣೆ ಮತ್ತು ಬೇಟೆಯಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಇವರು ಕೃಷಿಯ ಅನ್ವೇಷಣೆಯ ನಂತರ ಕೂಡ ಒಂದಡೆ ನಿಂತು ಒಂದೇ ಭೂಮಿಯನ್ನು ನಂಬಿ ಬದುಕಿದವರಲ್ಲ. ಹಿಂದೆ ಬುಡಕಟ್ಟು ಸಮುದಾಯ 'ಕಮರಿ' ಬೇಸಾಯ ಮಾಡುತ್ತಾ ಜಾಗದಿಂದ ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು. ಅಂದರೆ ಕಾಡೊಳಗಿನ ಒಂದೆರಡು ಎಕರೆಯಷ್ಟು ಭೂಮಿಯನ್ನು ಹಸನು ಮಾಡಿ ಬಿತ್ತನೆ ಮಾಡುವ ಪದ್ಧತಿ. ಈಕಮರಿ ಬೇಸಾಯದ ಎರಡು ಮುಖ್ಯ ಲಕ್ಷಣಗಳೆಂದರೆ ನೇಗಿಲನ್ನು ಬಳಸದೆ ಗುದ್ದಲಿಯಿಂದ ಮಾತ್ರ ಅಗೆದು ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಹಾಗೂ ನಿರ್ದಿಷ್ಟ ಪ್ರದೇಶದಲ್ಲಿ ಮೂರು ಸಲಕ್ಕಿಂತ ಹೆಚ್ಚಿನ ಬಾರಿಗೆ ಬೆಳೆ ತೆಗೆಯದೆ ಮುಂದಿನ ಪ್ರದೇಶಕ್ಕೆ ಹೋಗುತ್ತಿದ್ದುದು. ನೇಗಿಲಿನ ಉಪಯೋಗವಿರಲಿಲ್ಲ ಎಂದರೆ ಕೃಷಿ ಭೂಮಿಯ ವಿಸ್ತರಣೆ ಕೂಡ ಇರಲಿಲ್ಲ ಎಂದೇ ಅರ್ಥ. ಬ್ರಿಟೀಷರ ಆಗಮನದ ನಂತರ ಬಂದ ಕಬ್ಬಿಣದ ನೇಗಿಲ ಗುಳ ಎಷ್ಟರಮಟ್ಟಿಗೆ ಕೃಷಿ ಭೂಮಿಯ ವಿಸ್ತರಣೆ ಮಾಡಿತು ಎಂಬುದು ನಮಗೆಲ್ಲ ಗೊತ್ತೇ ಇದೆ. ಯಾವುದೇ ಭೂಮಿಯಲ್ಲಿ ಕಾಡು ಕಡಿದರೂ ಅನಂತರ ಅದರ ಪಾಡಿಗೆ ಅದನ್ನು ಏಳು ವರ್ಷಬಿಟ್ಟರೆ ಮತ್ತದೇ ಕಾಡು ಆವರಿಸಿಕೊಳ್ಳುತ್ತದೆ. ಇದನ್ನು ತಿಳಿದಿದ್ದ ಬುಡಕಟ್ಟು ಸಮುದಾಯ 'ಖಾಯಂ ಕೃಷಿ' ಭೂಮಿಯ ಬದಲಾಗಿ 'ಕುಮರಿ ಬೇಸಾಯ'ವನ್ನು ಅವಲಂಬಿಸಿ ಆ ಮೂಲಕ ಕಾಡಿಗೆ ಯಾವುದೇ ಅಪಾಯವೂ ಒದಗದಂತೆ ಸಮತೋಲನ ಕಾಪಾಡಿಕೊಂಡು ಬರುತ್ತಿದ್ದರು.

ಬುಡಕಟ್ಟು ಭೂ ವ್ಯವಸ್ಥೆಯ ಸ್ವರೂಪದ ಬಗ್ಗೆ ಎರಡು ಸಿದ್ಧಾಂತಗಳು ಸ್ಪಷ್ಟವಾಗಿ ಕಾಣುತ್ತವೆ. ಒಂದು ಬ್ರಿಟೀಷ್ ಆಡಳಿತಾಧಿಕಾರಿಗಳಿಂದ ರೂಢಿಸಿದ ಪದ್ಧತಿ ಮತ್ತೊಂದು

ಬುಡಕಟ್ಟಿನ ಮೂಲಿಗರು ಸಾಗುವಳಿಗಾಗಿ ಕಾಡು ಕಡಿದು ಭೂಮಿಯನ್ನು ಸ್ವಚ್ಛಗೊಳಿಸಿದ ಕಂದಾಯ ರಹಿತವಾದ ಪದ್ಧತಿ. ಎರಡನೆಯದನ್ನು ಬುಡಕಟ್ಟು ಜನರೇ ರೂಢಿಸಿದ್ದು, ಇದನ್ನು ಪದ್ಧತಿಯೆಂದು ಕರೆದಿದ್ದಾರೆ. ಬುಡಕಟ್ಟು ಜನರಲ್ಲದ ಹೊಸಬರು ಬಂದು ಈ ಸಾಮಾನ್ಯ ರೈತನ ಸ್ಥಿತಿಗೆ ಇಳಿಸಿದರು.೧ ಈಪದ್ಧತಿಯನ್ನು ಜರ್ಮನಿ ಮಿಷನರಿಗಳು ಜರ್ಮನಿ ಭೂವ್ಯವಸ್ಥೆಯ ಹಿನ್ನೆಲೆಯಲ್ಲಿ ಸುಧಾರಿಸಲು ಪ್ರಯತ್ನಿಸಿದರು. ೩ ದಟ್ಟವಾದ ಕಾಡುಗಳಿಂದ ಆವೃತವಾದ ಭೂಮಿಯನ್ನು ವಶಪಡಿಸಿಕೊಂಡು ಹಣ್ಣು-ಹಂಪಲು,ಗಡ್ಡೆ ಗೆಣಸು,ಮೀನು ಮಾಂಸ ತಿಂದು ಜೀವಿಸುತ್ತಿದ್ದರು. ಕಾಡು ಕಡಿದು ಭೂಮಿಯನ್ನು ಸುಟ್ಟು ಉತ್ತು ಹದಗೊಳಿಸಿ ಬಿತ್ತಿ ಬೇಸಾಯವನ್ನು ಕಂಡುಹಿಡಿದರು ಬುಡಕಟ್ಟು ಸಮುದಾಯ.ಇವರು ಪ್ರಕೃತಿ ಪ್ರಿಯರು, ಪ್ರಪಾತಗಳು, ಬೆಟ್ಟಗಳು ,ಕಾಡು ಕಡಿದು ಭೂಮಿಯನ್ನು ವ್ಯವಸಾಯಯೋಗ್ಯವಾಗಿಸದ ಭೂಮಿ, ದಟ್ಟವಾದ ಕಾಡು, ಇವರಿಗೆ ಮತ್ತು ಇವರ ಸಾಕು ಪ್ರಾಣಿಗಳಾದ ದನಕರುಗಳಿಗೆ ಜೀವನೋಪಾಯದ ಆಧಾರ ಸ್ತಂಭಗಳಾಗಿದೆಯೇ ಇಂದಿಗೂ ಉಳಿದಿವೆ. ಇವರು ವಾಸಿಸುವ ಕಾಡು ಬೆಟ್ಟಗುಡ್ಡಗಳನ್ನು ಎಂತಹ ಶತ್ರುವಾದರೂ ಸರಿ ಪ್ರವೇಸಿಸುವುದು ಕಷ್ಟಸಾಧ್ಯ. ಯಾವಾ ಆಕ್ರಮಣಕ್ಕೆ ಬೆದರದೆ ಬೆಚ್ಚದೆ ನಿರ್ಭೀತರಾಗಿ, ನಲೆಸಿರುವ ಬಗ್ಗೆ ಬುಡಕಟ್ಟು ಸಮುದಾಯದ ಹಾಡೊಂದು ಹೀಗಿದೆ. ೨

ಕೆಲವು ಎಲ್ಲೆಯಿಲ್ಲದ ಛಾಯೆಯ ಸಾಮೀಪ್ಯಗಳು

ಎಲ್ಲಿ ಆಕ್ರಮಣ ಮತ್ತು ತುಳಿತಗಳಿಲ್ಲವೊ

ಪರಾಭವಿತ ಮೇಗ್ ಅಪರಾಭವಿತ ಯುದ್ಧಗಳಿಲ್ಲವೊ

ಅಲ್ಲಿ ಶಕ್ತಿ ಎಂದೆಂದಿಗೂ ಅವರನ್ನು ಮುಟ್ಟಲಾರವು ೪. ಅರಣ್ಯ ಮತ್ತು ಭೂಮಿಯ ಜೊತೆ ಹೊಂದಿರುವ ಅನನ್ಯ ಅನುಸಂಧಾನದಿಂದಾಗಿಯೇ ಭಾರತದ ಬುಡಕಟ್ಟು ಸಮಾಜಗಳ ಸಂಸ್ಕೃತಿ ರೂಪುಗೊಂಡಿದೆ. ಆದಿವಾಸಿಗಳಿಗೆ ಭೂಮಿ ಕೇವಲ ಆರ್ಥಿಕ ಭದ್ರತೆಯನ್ನು ಒದಗಿಸುವ ಸಂಪನ್ಮೂಲ ಮಾತ್ರವಲ್ಲ. ಅವರ ಸ್ಮೃತಿ ಜಗತ್ತಿನಲ್ಲಿ ಬೆರತುಹೋದ ಒಂದು ದಿವ್ಯ ಮೋಹ. ಬುಡಕಟ್ಟು ಸಮುದಾಯಗಳು ಭೂಮಿಯ ಜೊತೆಗೆ ಒಂದು ಬಗೆಯ ಆಧ್ಯಾತ್ಮಿಕ ಸಂಬಂಧವನ್ನು ಏರ್ಪಡಿಸಿಕೊಂಡಿದ್ದಾರೆ.ನೇಗಿಲಿನಿಂದ ಉಳುಮೆ ಮಾಡಿದರೆ ಭೂಮಿಯ ಎದೆ ಸೀಳಿದಂತೆ ಎಂದು ಭಾವಿಸಿದ್ದರಿಂದಲೇ, ಬುಡಕಟ್ಟು ಸಮುದಾಯಗಳು ಕುಮ್ರಿ ಬೇಸಾಯ ಕ್ರಮವನ್ನು ಅನುಸರಿಸುತ್ತಿದ್ದವು. ಈ ಕಾರಣಕ್ಕಾಗಿ ಬುಡಕಟ್ಟು ಸಮುದಾಯಗಳು ಪುಟ್ಟ ಉಪಕರಣಗಳಿಂದ ಲಘು ಕೃಷಿಯಲ್ಲಿ ತೊಡಗುತ್ತಿದ್ದರು. ಒಂದೇ ಕಡೆ ನಿರಂತರವಾಗಿ ಭೂಮಿಯನ್ನು ಉಳಿಮೆ ಮಾಡಿದರೆ ಪರಿಸರ ಅಸಮತೋಲನವಾಗುವುದೆಂದು ಅರಣ್ಯದ ಹಲವು ಕಡೆ ಲಘು ಬೇಸಾಯದಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಈಗಲೂ ಬುಡಕಟ್ಟು ಸಮುದಾಯಗಳು ಕಾಡಲ್ಲಿಯ ಒಂದು ಮರ ಕಡಿಯುವುದೆಂದರೆ ಒಬ್ಬ ಮನುಷ್ಯನನ್ನು ಕೊಂದಂತೆಯೇ ಎಂದು ಭಾವಿಸುತ್ತಾರೆ. ಹೀಗಾಗಿ ಅರಣ್ಯ ಮತ್ತು ಭೂಮಿಯ ಒಡೆತನವೆನ್ನುವುದು ಬುಡಕಟ್ಟು ಸಮುದಾಯಗಳಿಗೆ ಕಾನೂನು ಬದ್ಧವಲ್ಲ. ಈಎರಡರ

ಜೊತೆಗಿನ ಅವರ ಸಂಬಂಧ ಪಾರಂಪರಿಕವಾದುದ್ದು. ಈಬಗೆಯ ಅಮಾಯಕ ಸಂಬಂಧ ಆಧುನಿಕ ಜಗತ್ತಿನ 'ನಾಗರಿಕ ಆಕ್ರಮಣಕಾರರಿಗೆ' ವರದಾನವಾಯಿತು. ಕಾನೂನುಗಳು ಕೇಳುವ ಮೂರ್ತ ಸಾಕ್ಷಿಗಳು ಆದಿವಾಸಿಗಳ ಬಳಿ ಇಲ್ಲವಾಗಿ ಅವರ ಜಮೀನುಗಳು ವಶಪಡಿಸಿಕೊಳ್ಳಲ್ಪಟ್ಟವು. ದೇಶಕ್ಕೆ ಸ್ವಾತಂತ್ರ್ಯ ಬಂದು ಎಲ್ಲರೂ ಸಾಮಾಜಿಕ,ರಾಜಕೀಯ, ಆರ್ಥಿಕ, ಕ್ಷೇತ್ರಗಳಲ್ಲಿ ಸ್ವಾವಲಂಬನೆ ಹೊಂದಲು ದಾಪುಗಾಲಿಟ್ಟರೆ. ಬುಡಕಟ್ಟು ಸಮುದಾಯಗಳು ತಮ್ಮ ಪಾರಂಪರಿಕ ಆರ್ಥಿಕ ಮೂಲಗಳನ್ನು ಕಳೆದುಕೊಂಡು ಅತಂತ್ರ ಪರಾವಲಂಬಿ ಸ್ಥಿತಿಯನ್ನು ತಲುಪಿದ್ದಾರೆ. ೩

ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟೀಷರು ತಂದ ಅರಣ್ಯ ನೀತಿ ಮತ್ತು ಭೂಸುಧಾರಣೆಗಳು ವಸಾಹತು ಆಡಳಿತ ಹಿತ ಕಾಯಲೆಂದೇ ರೂಪಿಸಲ್ಪಟ್ಟವು. ಈ ಕಾಯ್ದೆಗಳು ಭಾರತದ ಬುಡಕಟ್ಟು ಸಮುದಾಯಗಳ ಕೃಷಿಕ ಸಮಾಜಗಳ ಭೂಮಿ ಮತ್ತು ಅರಣ್ಯಗಳ ಮೇಲಿನ ಪಾರಂಪರಿಕ ಅವಲಂಬನೆಯನ್ನು ನಾಶಮಾಡಿದವು. ಕಾನೂನು ಬದ್ಧ ಒಡೆತನವನ್ನು ಮಾತ್ರ ಈ ಕಾಯ್ದೆಗಳು ಅನಮೋದಿಸಿದವು. ಆದಿವಾಸಿಗಳು ವಾಸಿಸುವ ಘಟ್ಟ ಪ್ರದೇಶಗಳಲ್ಲಿ ತಮ್ಮ ಎಸ್ಟೇಟುಗಳನ್ನು ವಿಸ್ತರಿಸಲು ಕಂಪನಿಯ ಸೈನ್ಯದ ಮೂಲಕ ಬುಡಕಟ್ಟು ಸಮುದಾಯಗಳಿಗೆ ಮುಖಾಮುಖಿಯಾದರು. ಅರಣ್ಯ ರಾಷ್ಟ್ರೀಕರಣಗೊಂಡಿದ್ದರಿಂದ ಅದು ಸರ್ಕಾರದ ಸ್ವತ್ತಾಗಿ ಪರಿಗಣಿಸಲ್ಪಟ್ಟಿತು. ರಾಷ್ಟ್ರದ ಹಿತದೃಷ್ಟಿಯಿಂದ ಅರಣ್ಯವನ್ನು ಬುಡಕಟ್ಟು ಸಮುದಾಯಗಳು ಬಿಟ್ಟಿ ಹೋಗಬೇಕೆಂದು ಅರಣ್ಯಕಾಯ್ದೆ ಬುಡಕಟ್ಟು ಸಮುದಾಯಗಳಿಗೆ ಆಜ್ಞಾಪಿಸಿತು.

**ಅರಣ್ಯ :**

ಯಾವುದೇ ಸಂಸ್ಕೃತಿಯ ಮೇಲೆ ಅದರ ಸುತ್ತ ಮುತ್ತಲ ಪರಿಸರದ ಪ್ರಭಾವ ದಟ್ಟವಾಗಿ ಒಂದಲ್ಲ ಒಂದು ರೀತಿಯಲ್ಲಿ ಆಗಿಯೇ ಇರುತ್ತದೆ. ಇರುಳಿಗರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ , ಮಾಗಡಿ ,ಕನಕಪುರ, ಚನ್ನಪಟ್ಟಣ ,ನೆಲಮಂಗಲ, ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ಮಂಡ್ಯ, ಮೈಸೂರು, ಕೊಳ್ಳೆಗಾಲ ಇತ್ಯಾದಿ ದಟ್ಟಡವಿಯ ಭೂಭಾಗಗಳಲ್ಲಿ ವಾಸಿಸುತ್ತಿದ್ದರು. ಪ್ರಮುಖವಾಗಿ ಇರುಳಿಗರು ಕರ್ನಾಟಕದ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವ್ಯಾಪಕವಾಗಿ ವಾಸಿಸುತಿದ್ದಾರೆ.

ಮಾಗಡಿ ತಾಲ್ಲೂಕಿನ ಸಾವನದುರ್ಗದ ಸುತ್ತಲ ಬೆಟ್ಟ ಹಾಗು ದಟ್ಟ ಕಾಡು ಪ್ರದೇಶಗಳಲ್ಲಿ ರಾಮನಗರದ ಸುತ್ತಮುತ್ತಲ ಕಾಡು-ಕಣಿವೆಗಳಲ್ಲಿ ಮತ್ತು ಕನಕಪುರ ಪ್ರದೇಶದಲ್ಲಿ ವ್ಯಾಪಕವಾಗಿ ವಾಸಿಸುವ ಇವರು ತಮ್ಮದೇ ಆದ ಇರುಳಿಗರ ಕಾಲೋನಿಗಳನ್ನು ನಿರ್ಮಿಸಿಕೊಂಡಿದ್ದಾರೆ.

ಬೆಟ್ಟ-ಗುಡ್ಡಗಳು, ಅರಣ್ಯ ಪ್ರದೇಶ, ಮಳೆ-ಗಾಳಿಗಳಿಂದ ರಕ್ಷಣೆ ದೊರಕುವ ನಿಸರ್ಗದತ್ತ ಬಂಡೆಗಳ ಮರೆಯಲ್ಲಿ ಹುಣಿಸೆ ,ಸೀಗೆ, ಬಿದಿರು, ಬೇಲ, ಆಲೆ, ಬೆಪ್ಪಾಲೆ, ಆಲ ಕಲ್ಲುತೇಗ, ದಿಂಡಿಗ, ಗಂಧ, ಬಾಡುಬಕ್ಕ, ಲಾಂಟಾನ ನೇರಳೆ, ಮಾವು ಬೇವು, ಚುಜ್ಜಲಿ

ಮರಾಳ, ಅಂಟುವಾಳ ಮುಂತಾದ ಮರಗಳಿಂದ ಕೂಡಿದ ವನಪ್ರದೇಶ,ಕುಮುದ್ವತಿ, ಕಣ್ವ ಅರ್ಕಾವತಿ ನದಿಗಳಿಗೆ ಸೇರುವ ಹಳ್ಳಕೊಳ್ಳಗಳು,ಉಪನದಿಗಳು ವಿಶಾಲವಾದ ಅರೆಬಂಡೆಗಳ ಮೇಲೆ ನಿಸರ್ಗದತ್ತವಾಗಿ ನಿರ್ಮಾಣಗೊಂಡ ಸೊಣೆ ಅಥವಾ ಕೊಳಗಳು ಇರುವ ಅಂದರೆ ನೀರಿಗೆ ಅನುಕೂಲಕರವಾದ ಪ್ರದೇಶಗಳೇ ಇವರ ವಾಸಸ್ಥಳಗಳು.

ಸಂಸ್ಕೃತೀಕರಣ, ನಗರೀಕರಣ, ಔದ್ಯೋಗಿಕರಣ, ಪಾಶ್ಚಾತೀಕರಣ, ಇತ್ಯಾದಿ ಬುಡಕಟ್ಟು ಸಮುದಾಯಗಳ ಮೇಲೆ ದಿನೆ ದಿನೆ ತನ್ನದೆಯಾದ ಪ್ರಭಾವ ಬೀರಿ ಬುಡಕಟ್ಟುಗಳನ್ನು ಸ್ಥಿತ್ಯಂತರಗೊಳಿಸುತ್ತಿವೆ. ಕಸುಬು, ಊಟೋಪಚಾರ, ಭಾಷೆ, ಉಡುಗೆ, ತೊಡಿಗೆ ಇತ್ಯಾದಿಗಳು ಬುಡಕಟ್ಟು ಸಮುದಾಯ ಬದುಕಿನಲ್ಲಿ ಬದಲಾವಣೆ ತರುತ್ತಿವೆ. ಸಂಸ್ಕೃತಿ, ಸಮಾಜ ರಚನೆ, ಸಾಮಾಜಿಕ ಜವಾಬ್ದಾರಿಗಳು,ಲೋಕರೂಢಿ, ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳಲ್ಲಿಯೂ ಬದಲಾವಣೆಯ ಅಲೆಗಳು ಅನಿವಾರ್ಯವಾಗಿವೆ.

ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳು ಕಳೆದ ೩೦-೪೦ ವರ್ಷಗಳ ಹಿಂದೆ ಇದ್ದಂತಹ ಹಲವಾರು ರೀತಿ–ನೀತಿಗಳು ಇಂದು ಇಲ್ಲವಾಗಿದೆ ಎಂದು ಹೇಳಬಹುದು. ಗವಿಗಳಲ್ಲಿ ವಾಸವಾಗಿದ್ದ ಇರುಳಿಗರು ಇಂದು ಗವಿಯನ್ನು ತೊರೆದು ಊರುಗಳಲ್ಲಿ ಮತ್ತು ಬೆಟ್ಟಗುಡ್ಡಗಳಲ್ಲಿ ಹಾಗೂ ಹೆಂಚಿನ ಮನೆಗಳಲ್ಲಿ ವಾಸಿಸುತ್ತಿರುವುದನ್ನು ನೋಡಬಹುದಾಗಿದೆ. ಆಹಾರ, ಉದ್ಯೋಗದಲ್ಲಿ ಸಾಕಷ್ಟು ಸ್ಥಿತ್ಯಂತರಗಳು ಹೊಂದಿರುವ ಅಂಶ ಕ್ಷೇತ್ರಕಾರ್ಯದಸಂಧರ್ಭದಲ್ಲಿ ಗುರುತಿಸಿ ದಾಖಲಿಸಲಾಗಿದೆ.

ಗಿರಿಜನರು ಸ್ವೇಚ್ಛೆಯಾಗಿ ಅಲೆದಾಡುತ್ತಾ, ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸುತ್ತಾ, ಸಾಧ್ಯವಾದಲ್ಲಿ 'ಕಮರಿ' ಬೇಸಾಯ ಮಾಡುತ್ತಾ ಒಂದಿಷ್ಟು ಬೆಳೆಯನ್ನು ಬೆಳೆಯುತ್ತಿದ್ದಾರೆ,ತಮ್ಮ ಪಾಡಿಗೆ ತಾವು ನಿಜವಾದ ಅಡವಿಕುಮಾರರಾಗೀಯೇ ಇದ್ದವರು. ಬ್ರಿಟೀಷರ ಈ ತಂತ್ರದಿಂದಾಗಿ ಭೂಮಾಲಿಕರ, ಪಟ್ಟಭದ್ರರ ಹಿಡಿತದಲ್ಲಿ ಸಿಲುಕಿಕೊಂಡರು. ಕಾಡುಗಳು ಕ್ರಮೇಣ ಕಾಫಿ, ಏಲಕ್ಕಿ, ಎಸ್ಟೇಟುಗಳಾಗಿ, ಅಡಿಕೆ ತೋಟಗಳಾಗಿ, ಬತ್ತ, ಕಬ್ಬಿನ ಗದ್ದೆಗಳಾಗಿ ಬದಲಾಗತೊಡಗಿದವು. ಕಾಡಿನ ಉತ್ಪನ್ನಗಳಿಂದ ವಂಚಿತರಾದುದಲ್ಲದೆ, ಮೇಲ್ವರ್ಗದ ದೌರ್ಜನ್ಯಕ್ಕೆ ಒಳಗಾದ ಈ ಜನ ಅನಿವಾರ್ಯವಾಗಿ ಇವರ ತೊತ್ತುಗಳಾಗಿಬಿಟ್ಟರು. ಹೀಗೆ ಅತಂತ್ರರನ್ನಾಗಿಸಿದ ಗಿರಿಜನರನ್ನು ಆಸೆ ತೋರಿಸಿ ಮತಾಂತರಗೊಳಿಸುವುದು ಬ್ರಿಟೀಷರಿಗೆ ಸುಲಭವಾಗುತಿತ್ತು. ನಿಸರ್ಗವನ್ನು ವಿಜ್ಞಾನ ನಿಯಂತ್ರಿಸುತ್ತದೆ ಅನ್ನುವ ಮಾತು ಬೇರೆ.ಆದರೆ ನಿಸರ್ಗವನ್ನು ನಮ್ಮ ಸುಡುಗಾಡು ವ್ಯವಸ್ಥೆಯೇ ಹೇಗೆ ನಿಯಂತ್ರಿಸುತ್ತಿದೆ ಎನ್ನುವುದು ಗಿರಿಜನರ ದೃಷ್ಠಿ ಯಿಂದ ಇಲ್ಲಿ ಮುಖ್ಯ. ಇದು ನಿಯಂತ್ರಣ ಅಲ್ಲ ನಾಶ. ಈ ನಾಶ ಕೂಡ ಎರಡು ರೀತಿಯಲ್ಲಿ ಸಂಭವಿಸುತ್ತದೆ, ಒಂದು ಗಿರಿಜನರ ಆತ್ಮ ಸ್ಥೈರ್ಯ ನಾಶ, ಎರಡು ನಿರ್ಸಗದ ನೇರ ನಾಶ.

ಒಂದು ಕಾಲಕ್ಕೆ ತಮ್ಮ ಕುಲ ಹಾಗೂ ಪಂಗಡಗಳಿಗೆ ಗಿಡಮರಗಳ ಹೆಸರನ್ನೆ ಇಟ್ಟುಕೊಂಡು ಅವುಗಳ ಮೂಲಕವೇ ತಮ್ಮ ಅಸ್ತಿತ್ವನ್ನು ಗುರಿತಿಸಿಕೊಂಡ ಹತ್ತಾರು

ಬುಡಕಟ್ಟು ಸಮುದಾಯಗಳು ಇಂದಿಗೂ ಆ ಸಂಪ್ರದಾಯವನ್ನು ಅನುಸರಿಸುತ್ತಿವೆ. ದೇವರ ಹೆಸರಿನಲ್ಲಿ .ಮೀಸಲಿಟ್ಟ ಕಾಡುಗಳು ಇಂದಿಗೂ ದೇವರ ಕಾಡುಗಳಾಗಿ ಉಳಿದು ಬಂದಿರುವುದನ್ನು ನಾವು ನೋಡುತ್ತಿದ್ದೇವೆ. ಮೀಸಲಿಲ್ಲದ ಕಾಡಿನಲ್ಲೂ ಒಂದು ಮರ ಕಡಿಯಬೇಕಾದ ಪ್ರಸಂಗ ಬಂದರೆ ಅದನ್ನು ಪೂಜಿಸಿ ಅತ್ಯಂತ ಗೌರವದಿಂದ ಮರಗಳನ್ನು ಕಡಿಯುತ್ತಿದ್ದ ಬುಡಕಟ್ಟುಗಳ ಮೌಲ್ಯ ಆದರ್ಶಪ್ರಾಯ. ಹೀಗೆ ಕಾಡಿನ ಆಸರೆಯಲ್ಲಿ ಅದರ ಮಗುವಿನಂತೆ ಬೆಳೆದ ಮನುಷ್ಯ ಅದು ನೀಡುವ ಜೇನು, ಗೆಡ್ಡೆ, ಗಣಸು, ಹಣ್ಣು ಹಂಪಲು ಹಾಗೂ ಅದರೊಳಗಿನ ಪ್ರಾಣಿ ಪಕ್ಷಿಗಳನ್ನು ಅಗತ್ಯವಿದ್ದಷ್ಟು ಸೇವಿಸಿ, ಬಿದಿರು, ಹಾಗೂ ಹೊಂಬು ಬಳ್ಳಿಗಳಲ್ಲಿ ತಯಾರಿಸಿದ ವಸ್ತುಗಳನ್ನು ಕಾಡಿನಾಚೆಯ ಸಂತೆಗಳಲ್ಲಿ ಮಾರಿ ತನಗೆ ಬೇಕಾದ ಅಗತ್ಯ ವಸ್ತುಗಳನ್ನು ಕೊಳ್ಳುತ್ತಿದ್ದ. ಇಷ್ಟರಮಟ್ಟಿಗೆ ಮಾತ್ರ ಹೊರ ಜಗತ್ತಿನೊಂದಿಗೆ ಸಂಪರ್ಕ ಇಟ್ಟುಕೊಂಡು ತನ್ನ ಪಾಡಿಗೆ ತಾನು ಕಾಡಿನ ಕುವರನಾಗಿ ಇದ್ದ ಅವನಿಗೆ ಬಹುಶಃ ನಮ್ಮ ದೇಶ ಸ್ವಾತಂತ್ರ್ಯ ಕಳೆದುಕೊಂಡಿದೆ ಎಂದಾಗಲೀ ಗೊತ್ತಿರಲಿಲ್ಲ. ಆದರೆ ಕ್ರಮೇಣ ವಸಾಹತುಶಾಹಿಯ ಪಭಾವದಿಂದಾಗಿ ದೇಶವನ್ನು ಪರಕೀಯರು ನಿಯಂತ್ರಿಸುತ್ತಿದಾರೆ ಎಂಬ ವಾಸ್ತವ ಅವನಿಗೆ ಗೊತ್ತಾಗತೊಡಗಿದ್ದು ನಮ್ಮ ಸ್ವಾತಂತ್ರ್ಯ ಬಂದ ಮೇಲೆಯೆ ಆದರೆ ಕಾಡಿನ ಆ ಜನರಿಗೆ ಸರ್ವಸ್ವವನ್ನು ಕೊಡುವ ಕಲ್ಪವೃಕ್ಷವಾಗಿದ್ದ ಕಾಡೇ ಇಂದು ಅವರಿಗೆ ನಾನಾ ಸಮಸ್ಯೆಗಳ ಆಗರವಾಗಿ ಪರಿಣಮಿಸಿದೆ. ಸ್ವಚ್ಛಂದವಾಗಿ ಬದುಕುತ್ತಿದ್ದ ಅವರ ಆ ಪಾವಿತ್ರ್ಯವನ್ನು ಭಗ್ನಗೊಳಿಸಿ ಆಧುನಿಕ ವ್ಯವಹಾರಗಳಲ್ಲಿ ಅದ್ದಿ ಮಲೀನಗೊಳಿಸಲಾಗಿದೆ. ಈ ವ್ಯವಸ್ಥೆ ಅವರು ಬದುಕುವ ಜಾಗದಿಂದ ಆಚೆದೂಡಿದೆ ನೆಲದಿಂದ ವಂಚಿಸಿದೆ. ಬೇಟೆ ನಿಷೇಧಿಸಿ ಅವರ ಪ್ರಿಯ ಆಹಾರ ಕಿತ್ತುಕೊಂಡಿದೆ. ಕೂಲಿಗೆ ಹಚ್ಚಿ ಅವರ ಪ್ರಿಯ ಪಾನೀಯವನ್ನೂ ಕಸಿದು ಕೊಡಿದೆ. ಕೂಲಿಗೆ ಹಚ್ಚಿ ಅವರ ಸಮೂಹಗಳನ್ನು ಒಡೆಯಲಾಗಿದೆ. ೪

ಕಾಡು ಹೊರನೋಟಕ್ಕೆ ಸಂಸ್ಕೃತಿಯ ಸಂಚಾರಿ ರೂಪವಾಗಿ ಕಾಣಿಸುತ್ತದೆ. ಯಾಕೆಂದರೆ ಅಲ್ಲಿರುವ ಮನುಷ್ಯ ಒಂದು ಕಡೆ ನೆಲೆಯೂರಿದ ಬದುಕಿನವನಲ್ಲ. ಕೆಲವೊಮ್ಮೆ ಕಾಡಿನೊಳಗೇ ನೆಲೆಯೂರಿದ ನಿಲ್ದಾಣಗಳೂ ಇರುತ್ತವೆಯೆನ್ನುವುದು ನಿಜ. ಇಷ್ಟಾಗಿಯೂ ಕಾಡಿನಲ್ಲಿರುವ ಮತ್ತು ಕಾಡು ಸಂಸ್ಕೃತಿಯ ಸಮೇತ ಹೊರಬಂದಿರುವ ಅನೇಕರು ಅಲೆಮಾರಿಗಳೇ ಆಗಿದ್ದಾರೆ. ಹೀಗಾಗಿ ಹೊರನೋಟಕ್ಕೆ 'ಕಾಡು' ಒಂದು ಸಂಸ್ಕೃತಿಯ ಸಂಚಾರಿ ರೂಪವಾಗಿ ಕಾಣಿಸಿದರೆ ಅದು ಸ್ವಾಭಾವಿಕ. ಆದರೆ ಕಾಡಿನ ಒಳಹೊಕ್ಕಾಗ ಸಂಸ್ಕೃತಿಯ ಸ್ಥಾಯೀರೂಪ ಪ್ರಧಾನವಾಗಿ ಕಾಣಿಸುತ್ತದೆ. ಈ ಸಂಸ್ಕೃತಿಯಲ್ಲಿ ಬದುಕುತ್ತಿರುವ ಜನರು ಬದಲಾವಣೆಗೆ ಒಡ್ಡಿಕೊಳ್ಳಲು ಅಸಾಧ್ಯವಾದ ಸ್ಥಿತಿಯಲ್ಲಿ ಹಿಂದಿನದೇ ಆದ ಆಹಾರ-ಆಚಾರಗಳಲ್ಲಿ, ಕಾಲ ತಳ್ಳುವ ಸಮುದಾಯವಾಗಿದ್ದಾರೆ. ಸಂಸ್ಕೃತಿಯ ಸ್ಥಾಯಿರೂಪಗಳು ಇಂಥವರ ಬದುಕಿನ ಭಾಗವಾಗಿರುತ್ತವೆ. ಆದ್ದರಿಂದ 'ಕಾಡು ಸಂಸ್ಕೃತಿ'ಯ ಜನ ಕಾಡಿನಲ್ಲೇ ಇರಲಿ, ಊರಾಚೆಯ ಅಂಚಿನಲ್ಲಿರಲಿ, ಸಂಸ್ಕೃತಿಯ ಸ್ಥಾಯೀ ರೂಪಿಕೆಗಳನ್ನು ಅಳವಡಿಸಿಕೊಂಡಿರುತ್ತಾರೆ. ಈ ಅಳವಡಿಕೆಯ ಪ್ರಮಾಣದಲ್ಲಿ ವ್ಯತ್ಯಾಸವಿರುವುದು ಸಹಜ. ಯಾಕೆಂದರೆ ಊರೊಳಗಿನ ಹಾಗೂ ಊರಾಚೆಯ ಅಂಚಿನ ಜನರಿಗೆ ಅಲ್ಪ ಸ್ವಲ್ಪವಾದರೂ

ಪರಿವರ್ತನೆಯ ಸ್ಪರ್ಶ ಸಾಧ್ಯವಾಗಿರುತ್ತದೆ. ಆದರೆ ಕಾಡೊಳಗಿನ ಹಾಗೂ ಕಾಡಂಚಿನ ಜನರಿಗೆ ಪರಿವರ್ತನೆಯ ಸ್ಪರ್ಶ ಸಾಧ್ಯವಾಗದೆ ತಾವೇ ಸಂಸ್ಕೃತಿಯ ಸ್ಥಾಯೀ ರೂಪಿಕೆಯಾಗಿ ಬಿಡುವ ಸಂಭವ ಹೆಚ್ಚಾಗಿರುತ್ತದೆ. ೫

**ಕೃಷಿ:**

ಭಾರತ ಒಂದು ಕೃಷಿ ಪ್ರಧಾನ ರಾಷ್ಟ್ರ. ಭಾರತದ ಆರ್ಥಿಕ ಪ್ರಗತಿಗೆ ಕೃಷಿ ಅಭಿವೃದ್ಧಿ ಬೆನ್ನು ಮೂಳೆಯಂತಿದೆ. ಅದೇ ರೀತಿ ಬುಡಕಟ್ಟು ಸಮುದಾಯಗಳು ಸಹ ರಾಷ್ಟ್ರದ ಅಭಿವೃದ್ಧಿಗೆ ಕಂಕಣಬದ್ಧರಾಗಿ ಕೃಷಿಯಲ್ಲಿ ದುಡಿಯುತ್ತಿದ್ದಾರೆ. ಕೃಷಿ ಉತ್ಪಾದನೆಯಲ್ಲಿ ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯಗಳು ಸಹ ತಮ್ಮದೇ ಆದ ಮಹತ್ವದ ಪಾತ್ರ ವಹಿಸುತ್ತಿದ್ದಾರೆ. ಕೃಷಿ ಉತ್ಪಾದನೆಯಲ್ಲಿ ಹೆಚ್ಚಳ ಸಾಧಿಸಲು ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯ ಪರಿಸರದಲ್ಲಿ ಕೃಷಿಯನ್ನು ಅಳವಡಿಸಿಕೊಂಡು ಅಭಿವೃದ್ಧಿಯನ್ನು ಸಾಧಿಸಲು ಭಾರತ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಸರ್ಕಾರವು ಹಲವಾರು ಯೋಜನೆಗಳನ್ನು ರೂಪಿಸಿಕೊಡುತ್ತಿವೆ. ಬಂಜರಾಗಿದ್ದ ಸಾವಿರಾರು ಎಕರೆ ಜಮೀನನ್ನು ಕೃಷಿಗೆ ಅಳವಡಿಸಿಕೊಳ್ಳಲಾಯಿತು. ಅದು ಬಹು ಜನರ ಉದ್ಯೋಗವಾಗಿರುವುದರಿಂದ (ಶೇ. ೬೮) ರಾಷ್ಟ್ರದ ಆದಾಯದಲ್ಲಿ ಅರ್ಧದಷ್ಟು ಭಾಗವನ್ನು ಒದಗಿಸುತ್ತದೆ. ಎಂದಮೇಲೆ ಸರ್ಕಾರದ ಹಣಕಾಸಿನ ಪರಿಸ್ಥಿತಿ ಕೃಷಿಯನ್ನು ಹೆಚ್ಚು ಅವಲಂಬಿಸಿದೆ. ಕೃಷಿ ಭಾರತದಲ್ಲಿ ಅನೇಕ ಸಲ ಮಾನ್‌ಸೂನ್ ಮಳೆಯೊಂದಿಗೆ ನಡೆಸುವ ಜೂಟಾಟವಾಗಿ ಅಪಾರ ನಷ್ಟ ಅನುಭವಿಸುತ್ತ ಬಂದಿದೆ. ಉಳಿದ ದೇಶಗಳಿಗೆ ಹೋಲಿಸಿದಾಗ ಭಾರತದ ಕೃಷಿ ಉತ್ಪಾದನೆ ಅದರ ವಿಸ್ತೀರ್ಣ ಹೋಲಿಸಿದರೆ ಬಹು ಕಡಿಮೆಯೆಂದೇ ಹೇಳಬೇಕು. ಇದಕ್ಕೆ ಪ್ರಮುಖವಾಗಿ ಮೂರು ಕಾರಣಗಳಿವೆ.

೧. ನೈಸರ್ಗಿಕ ಕಾರಣಗಳು (Natural Causes)

೨. ತಾಂತ್ರಿಕ–ಆರ್ಥಿಕ ಕಾರಣಗಳು (Techno-Economic Causes)

೩. ಸಾಮಾಜಿಕ–ಆರ್ಥಿಕ ಕಾರಣಗಳು (Socio-Economic Causes)

ಭಾರತದ ರೈತರು ಮತ್ತು ಬುಡಕಟ್ಟು ಸಮುದಾಯಗಳು ತಮ್ಮ ಕೃಷಿಗೆ ಪ್ರಕೃತಿಯನ್ನೇ ಅವಲಂಬಿಸಿರುವುದರಿಂದ ಅದು ಅವರು ಮಾನ್‌ಸೂನ್ ಮಳೆಯ ಜೊತೆ ನಡೆಸುವ ಜೂಟಾಟವೆಂದು ಪರಿಗಣಿಸಲಾಗಿದೆ. ಜೊತೆಗೆ ಕುಟುಂಬದ ಜನ ಹೆಚ್ಚಾದಂತೆ ಭೂ–ಹಿಡುವಳಿಗಳು ಕೂಡ ತುಂಡುತುಂಡಾಗಿ ಪರಿವರ್ತನೆಗೊಂಡು ಉತ್ಪಾದನೆ ಕುಸಿಯುತ್ತಿದೆ. ಸಾವಯವ ಗೊಬ್ಬರ, ರಾಸಾಯನಿಕ ಗೊಬ್ಬರ ಹಾಗೂ ಸುಧಾರಿತ ಬೀಜಗಳ ಕೊರತೆ, ಹಳೆಯ ಸಲಕರಣೆಗಳು ಕೃಷಿ ಉತ್ಪಾದನೆಯನ್ನು ಕ್ಷೀಣಿಸುತ್ತಿವೆ. ಹೊಸ ಮಾದರಿಯ ಕೃಷಿ ವ್ಯವಸ್ಥೆ ಅಳವಡಿಸಿಕೊಳ್ಳಲು ರೈತನಿಗೆ ಬಂಡವಾಳದ ಕೊರತೆ ಅಪಾರವಾದುದ್ದಾಗಿದೆ. ಭಾರತದ ರೈತ ಲೇವಾದೇವಿ ವ್ಯವಹಾರಗಾರನಿಂದ ಹಣ ಪಡೆಯುತ್ತಿದ್ದು (೧೯೫೧ರ ಸಮೀಕ್ಷೆಯ ಪ್ರಕಾರ ೧೦೦ಕ್ಕೆ ೯೦ರಷ್ಟು ರೈತರು) ಅವರ ದುಡಿಮೆಯೆಲ್ಲ ಸಾಲ ಹಾಗೂ ಬಡ್ಡಿಯ ತೀರಿಸುವಿಕೆಗೆ ಹರಿದು ಹೋಗುತ್ತಿದೆ. ಇದನ್ನು

ಮನಗಂಡ ಸರಕಾರ ರೈತರ ಬಂಡವಾಳ ಕೊರತೆಯನ್ನು ನೀಗಿಸಲು ಸಹಕಾರ ಸಂಘಗಳು, ಬ್ಯಾಂಕುಗಳು ಮುಂತಾದ ಹಣಕಾಸು ಸಂಸ್ಥೆಗಳನ್ನು ಸ್ಥಾಪಿಸಿ ಸಾಲ ನೀಡಲು ಸೂಕ್ತ ಕ್ರಮ ಕೈಗೊಳ್ಳುತ್ತಿದೆ.

ದೇಶದ ಎಲ್ಲ ಬಗೆಯ ಅಭಿವೃದ್ಧಿಗೂ ಕೃಷಿ ಉತ್ಪನ್ನಗಳಾದ ಆಹಾರ ಮತ್ತು ಕಚ್ಚಾ ಸಾಮಾಗ್ರಿ ಅತ್ಯವಶ್ಯಕವಾಗಿದೆ. ಇದರ ಪ್ರಾಮುಖ್ಯತೆಯನ್ನು ಅರಿತೇ ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಗೆ ಪ್ರಥಮ ಆದ್ಯತೆಯನ್ನು ನೀಡಲಾಗಿದೆ. ಅನಂತರದ ಯೋಜನೆಗಳಲ್ಲೂ ಕೂಡ ಅದನ್ನು ನಿರ್ಲಕ್ಷಿಸದೆ ಸೂಕ್ತ ಪ್ರಾಧಾನ್ಯ ನೀಡಲಾಗಿದೆ. ಕೃಷಿ ಅಭಿವೃದ್ಧಿ ಮತ್ತು ನೀರಾವರಿ, ಶಕ್ತಿ ಅಥವಾ ವಿದ್ಯುಚ್ಛಕ್ತಿ ಅವಲಂಬಿಸಿರುವುದರಿಂದ ಅದಕ್ಕೂ ಸಹ ಆದ್ಯತೆಯನ್ನು ನೀಡಲಾಗಿದೆ.

೧೯೬೦ರ ನಂತರ ಕೃಷಿ ಉತ್ಪಾದನೆಯಲ್ಲಿ ಹಿಂದೆಂದೂ ಕಂಡರಿಯದ ಆಧುನೀಕರಣವನ್ನು ಜಾರಿಗೊಳಿಸಲಾಗಿದೆ. ಜಪಾನ್ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ. ಉತ್ತಮ ತಳಿಯ ಬೀಜಗಳನ್ನು ಆವಿಷ್ಕರಿಸಿ ರೈತರಿಗೆ ಒದಗಿಸಲಾಗಿದೆ. ಬೆಳೆಗಳನ್ನು ಕೀಟ ಹಾಗೂ ರೋಗಗಳಿಂದ ಸಂರಕ್ಷಿಸಲು ವಿವಿಧ ಔಷಧಿಗಳನ್ನು ಮೊದಲು ಕಡಿಮೆ ದರದಲ್ಲಿ ಸರಬರಾಜು ಮಾಡಲಾಗಿದೆ. ರಾಸಾಯನಿಕ ಗೊಬ್ಬರವನ್ನು ಪರಿಚಯಿಸಿ ಉತ್ಪನ್ನದಲ್ಲಿ ಇಳುವರಿ ಅಧಿಕಗೊಳಿಸಲಾಗಿದೆ. ಕೃಷಿ ಇಲಾಖೆಯ ವತಿಯಿಂದ ತಜ್ಞರನ್ನು ನಿಯಮಿಸಿ ರೈತರಿಗೆ ಸೂಕ್ತ ಮಾರ್ಗದರ್ಶನ ಸಿಗುವಂತೆ ಮಾಡಲಾಗಿದೆ. ಕೃಷಿಯಲ್ಲಿ ಯಂತ್ರಗಳ ಬಳಕೆಗೆ ಪ್ರೋತ್ಸಾಹ ಹಾಗೂ ನೆರವು ನೀಡಿರುವುದು ಹಸಿರು ಕ್ರಾಂತಿಗೆ ದಾರಿ ಮಾಡಲಾಗಿದೆ. ಕೃಷಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲಾಗಿದ್ದು ಕೃಷಿ ತಜ್ಞರನ್ನು ತಯಾರುಮಾಡುವುದಲ್ಲದೆ ಆ ಕ್ಷೇತ್ರದಲ್ಲಿ ಸಂಶೋಧನೆಗೆ ಪ್ರಾಶಸ್ತ್ಯ ಕೂಡ ನೀಡಲಾಗಿದೆ. ಹೊಸ ತಳಿಗಳನ್ನು ಅಭಿವೃದ್ಧಿ ಪಡಿಸುವಲ್ಲಿ ಇವುಗಳು ಪ್ರಮುಖ ಪಾತ್ರ ವಹಿಸಿವೆ. ಜೊತೆಗೆ ಕೃಷಿ ತಂತ್ರಜ್ಞಾನದ (Agricultural Technology) ಅಳವಡಿಕೆಗೂ ಗಮನಹರಿಸಲಾಗಿದೆ. ಕೃಷಿ ಸೇವೆಗಾಗಿಯೇ ಈ ಕೆಳಕಂಡ ಸಾರ್ವಜನಿಕ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ.

೧. ದಿ ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರೀಸರ್ಚ್
೨. ದಿ ನ್ಯಾಷನಲ್ ಸೀಡ್ಸ್ ಕಾರ್ಪೊರೇಷನ್
೩. ದಿ ನ್ಯಾಷನಲ್ ಕೋ-ಆಪರೇಟಿವ್ ಡೆವಲಪ್‌ಮೆಂಟ್ ಕಾರ್ಪೊರೇಷನ್
೪. ದಿ ಅಗ್ರಿಕಲ್ಚರಲ್ ರಿ ಫೈನಾನ್ಸ್ ಕಾರ್ಪೊರೇಷನ್
೫. ದಿ ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್
೬. ದಿ ಆಗ್ರೋ-ಇಂಡಸ್ಟ್ರಿಯಲ್ ಕಾರ್ಪೊರೇಷನ್
೭. ದಿ ರೂರಲ್ ಎಲೆಕ್ಟ್ರಿಫಿಕೇಶನ್ ಕಾರ್ಪೊರೇಷನ್

ಅಂತರ್ಜಾಲದ ಸೂಕ್ತ ಬಳಕೆಗಾಗಿ ಎ ಸೆಂಟ್ರಲ್ ಗ್ರೌಂಡ್ ವಾಟರ್ ಬೋರ್ಡ್ ಅಸ್ತಿತ್ವಕ್ಕೆ ಬಂದಿದೆ. ವಿಶ್ವಸಂಸ್ಥೆಯೊಡನೆ ವ್ಯವಹರಿಸಿ ಆರ್ಥಿಕ ನೆರವನ್ನು ಪಡೆದ ಈ ಸಂಸ್ಥೆ

ರಾಜಾಸ್ಥಾನ, ಗುಜರಾತ್, ತಮಿಳುನಾಡು ಮೊದಲಾದ ಕಡೆ ಹಲವು ಯೋಜನೆಗಳನ್ನು ಕೈಗೊಳ್ಳಲಾಗಿದೆ.

ರೈತರ ಮತ್ತು ಬುಡಕಟ್ಟು ಸಮುದಾಯಗಳ ಹಿತಚಿಂತನೆಗಾಗಿ ಅಸ್ತಿತ್ವಕ್ಕೆ ಬಂದಿರುವ 'ಕೃಷಿಕ್ ಸಮಾಜ್'ಗೆ ಸರ್ಕಾರ ಆದ್ಯತೆ ನೀಡಲಾಗಿದೆ. ರೈತರ ಅಹವಾಲುಗಳಿಗೆ ಸ್ಪಂದಿಸುವುದಾಗಿದೆ. ಹಾಗಾಗಿ ೧೯೫೦ ಮತ್ತು ೧೯೬೫ರ ಅವಧಿಯಲ್ಲಿನ ಅಕ್ಕಿ ಉತ್ಪನ್ನ ಶೇ.೭೫ರಷ್ಟು, ಹತ್ತಿ ಶೇ.೭೫, ಗೋಧಿ ಶೇ,೮೬. ಸೆಣಬು ಶೇ,೭೧ರಷ್ಟು ಹೆಚ್ಚಾಗಿತ್ತು. ಒಟ್ಟು ಕರಷಿ ಉತ್ಪನ್ನದ ವಿವರ ಹೀಗಿದೆ : ೧೯೬೫ರಲ್ಲಿ ೬ ಕೋಟಿ ೮೦ ಲಕ್ಷ ಟನ್‌ಗಳಷ್ಟಿದ್ದ ಆಹಾರ ಪದಾರ್ಥಗಳ ಉತ್ಪನ್ನ ೧೯೬೧ರಲ್ಲಿ ೭ ಕೋಟಿ ೬೦ ಲಕ್ಷ ಟನ್‌ಗಳಿಗೂ, ೧೯೬೫ರಲ್ಲಿ ೮೮೦ ಲಕ್ಷ ಟನ್‌ಗಳಿಗೂ (೧೯೬೬ರಲ್ಲಿ ಇಳಿಯಿತು), ೧೯೭೪ರಲ್ಲಿ ೧೨೯೦ ಲಕ್ಷ ಟನ್‌ಗಳಷ್ಟು ಏರಿದೆ. ಮುಂದೆ ಇದು ೪.೨೦ರ ದರದಲ್ಲಿ ಹೆಚ್ಚುತ್ತಲೇ ಬಂದಿದೆ.

೧೯೫೦ರ ಮೊದಲ ಯೋಜನೆಯ ಆರಂಭದಲ್ಲಿ ನೀರಾವರಿಗೊಳಪಟ್ಟ ಒಟ್ಟು ಕೃಷಿ ಭೂಮಿ ೨೬ ಮಿಲಿಯನ್ ಹೆಕ್ಟೇರ್ (೧ ಹೆಕ್ಟೇರ್=೨೧/೨ ಎಕರೆ) ಇದ್ದದ್ದು ೧೯೯೦ರಲ್ಲಿ ೭೬ಮಿ. ಹೆಕ್ಟೇರ್‌ಗೆ ಏರಿದೆ. ಎಂಟನೇ ಯೋಜನೆಯ ಕೊನೆಯಲ್ಲಿ (೧೯೯೭) ನೀರಾವರಿ ಭೂಮಿ ೯೦ಮಿ. ಹೆಕ್ಟೇರ್‌ಗೆ ಏರಿದೆ.

## ಉತ್ಪಾದನೆ ಕಡಿಮೆಯಾಗಲು ಕಾರಣಗಳು

ಕೃಷಿ ಕ್ಷೇತ್ರದಲ್ಲಿ ನಿರೀಕ್ಷಿತ ಪ್ರಗತಿಯಾಗದೆ ಇರಲು ಆಸ್ತಿ ಹಂಚಿಕೆ ವ್ಯವಸ್ಥೆಯಲ್ಲಿ ಭೂ ಹಿಡುವಳಿಗಳು ಛಿದ್ರ ಛಿದ್ರಗೊಂಡಿರುವುದೇ ಕಾರಣವಾಗಿದೆ. ೨೫ ಎಕರೆಗಿಂತ ಹೆಚ್ಚು ನೀರಾವರಿ ಜಮೀನುಳ್ಳ ರೈತರ ಪ್ರಮಾಣ ಶೇಕಡ ೨ ಇದೆ. ೨೫ ಎಕರೆಗಿಂತ ಕಡಿಮೆ ಇರುವ ರೈತರ ಸಂಖ್ಯೆ ೯೮% ಇದೆ. ಪಕ್ಕಾ ಪೂರ್ಣ ನೀರಾವರಿಗೊಳಪಟ್ಟಿರುವ ಭೂಮಿ ೩೪ ಮಿಲಿಯನ್ ಹೆಕ್ಟೇರ್ ಮಾತ್ರ.

ಒಟ್ಟು ಸಾಗುವಳಿ (ಕೃಷಿ ಭೂಮಿ) ಭೂಮಿ ೧,೪,೪೦,೦೦೦೦೦ (ಒಂದು ಸಾವಿರದ ನಾಲ್ಕು ನೂರ ನಲವತ್ತು ಲಕ್ಷ) ಲಕ್ಷ ಹೆಕ್ಟೇರ್. ಅದರಲ್ಲಿ ಶೇ. ೮೦% (ಅಂದರೆ ೧೧೫೦ ಲಕ್ಷ ಹೆಕ್ಟೇರ್) ಸಾಗುವಳಿ ಭೂಮಿ ಪ್ರತಿವರ್ಷ ಮಳೆ, ಗಾಳಿ, ನದಿಪ್ರವಾಹಗಳಿಂದ ಸವಕಲಾಗುತ್ತಿದೆ ಎಂದು ಅಂದಾಜು ಮಾಡಲಾಗಿದೆ. ಆರು ನೂರು ಮಿಲಿಯನ್ ಟನ್ ಮೆಕ್ಕಲು ಮಣ್ಣು ಅಣೆಕಟ್ಟು ಮತ್ತು ಕೆರೆಗಳಲ್ಲಿ ಬಂದು ಶೇಖರವಾಗಿ ನೀರು ನಿಲುಗಡೆ ಕೂಡ ಕಡಿಮೆಯಾಗುತ್ತಿದೆ.

ಪ್ರತಿ ವ್ಯಕ್ತಿಗೆ ದೊರೆಯುತ್ತಿರುವ ಸಾಗುವಳಿ ಭೂಮಿ (Per capita land under cultivation)೦.೧೫ ರಷ್ಟಿದೆ. ಅಂದರೆ ೧/೬ ಎಕರೆಗೂ (ಸು. ೬ ಕುಂಟೆ) ಕಡಿಮೆ ಇದೆ.

ಹತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ (೨೦೦೨-೨೦೦೭) ಕೃಷಿ ಮತ್ತು ಅದರ ಸಂಬಂಧಿ ಕ್ಷೇತ್ರಗಳಲ್ಲಿ ಸರಾಸರಿ ವಾರ್ಷಿಕ ಬೆಳವಣಿಗೆ ಶೇ.೨ ರಷ್ಟಿದೆ. ಇಷ್ಟಾದರೂ

ಕೊರತೆ ನೀಗಲು ೫೫ ಲಕ್ಷ (೫.೫ ಮಿಲಿಯನ್) ಟನ್ ಗೋಧಿಯನ್ನು ಆಮದು ಮಾಡಿಕೊಳ್ಳಬೇಕಾಗಿದೆ. ಹನ್ನೊಂದನೇ ಪಂಚವಾರ್ಷಿಕ ಯೋಜನೆ (೨೦೦೭-೧೨)ಯ ಮೊದಲನೇ ವರ್ಷದಲ್ಲೇ ಕೃಷಿ ಕ್ಷೇತ್ರದಲ್ಲಿ ಶೇ.೪ರಷ್ಟು ಬೆಳವಣಿಗೆ ಕಂಡುಬಂದುದರಿಂದ ಆಹಾರಧಾನ್ಯದ ಕೊರತೆ ನೀಗಿದ್ದಲ್ಲದೆ-ನೇಪಾಳ ಮತ್ತು ಬರ್ಮಾದೇಶಗಳಿಗೆ ಗೋಧಿ ರಫ್ತು ಮಾಡಲು ಸಾಧ್ಯವಾಗಿದೆ. ಅಲ್ಲದೆ ಈ ಯೋಜನೆಯಲ್ಲಿ ಬಾಸ್ಮತಿ ಅಕ್ಕಿ, ದ್ವಿದಳ ಧಾನ್ಯ, ಎಣ್ಣೆ ಬೀಜಗಳ ಉತ್ಪಾದನೆಗೆ ಉತ್ತೇಜನ ನೀಡಲಾಗಿದೆ.

## ಕೈಗಾರಿಕೆ :

ಕೃಷಿ ಪ್ರಧಾನ ದೇಶವಾದ ಬಾರತದ ಮೇಲೆ ಕೈಗಾರಿಕಾ ಪ್ರಧಾನ ದೇಶವಾದ ಬ್ರಟನ್ ಆಳ್ವಿಕೆ ನಡೆಸಲು ಆರಂಭಿಸಿದಾಗ ಸಹಜವಾಗಿಯೇ ಕೆಲವೊಂದು ಬದಲಾವಣೆಗಳು ಉಂಟಾದವು. ಬ್ರಟಿಷರು ಭಾರತದಲ್ಲಿ ಕೃಷಿ ಅಥವಾ ಕೈಗಾರಿಕೆಯನ್ನು ಅಭಿವೃದ್ಧಿ ಪಡಿಸಬೇಕೆನ್ನುವ ಉದ್ದೇಶವನ್ನು ಇಟ್ಟುಕೊಂಡು ಬಂದವರಲ್ಲ. ಅವರಿಗಿದ್ದ ಉದ್ದೇಶವೆಂದರೆ ಭಾರತದಲ್ಲಿ ಬ್ರಿಟೀಷ್ ಸಾಮ್ರಾಜ್ಯವನ್ನು ಕಟ್ಟುವುದು ಹಾಗೂ ವ್ಯಾಪಾರ ಕ್ಷೇತ್ರದಲ್ಲಿ ಲಾಭವನ್ನು ಗಳಿಸುವುದು ಮತ್ತು ಏಕಸ್ವಾಮ್ಯವನ್ನು ಸ್ಥಾಪಿಸುವುದು. ಈ ಉದ್ದೇಶಗಳಿಗೆ ಪೂರಕವಾದ ಕೃಷಿ ಹಾಗೂ ಕೈಗಾರಿಕಾ ನೀತಿಯನ್ನು ಬ್ರಟಿಷರು ಜಾರಿಗೊಳಿಸಿದರು. ಪ್ರಸ್ತುತ ಅಧ್ಯಾಯನದಲ್ಲಿ ಕರ್ನಾಟಕದ ಕೈಗಾರಿಕ ಪ್ರಕ್ರಿಯೆ ನಗರೀಕರಣ ಪ್ರಕ್ರಿಯೆ ಮೇಲೆ ಬೀರಿದ ಪ್ರಭಾವ, ಪರಿಣಾಮಗಳನ್ನು ವಿಶ್ಲೇಸುವ ಉದ್ದೇಶವನ್ನು ಹೊಂದಿದೆ. ಅದೇ ರೀತಿ ಸ್ಥಳೀಯ ಕೈಗಾರಿಕೆಗಳ ನಾಶದ ಕುರಿತು ಸಾಮ್ರಾಜ್ಯಶಾಹಿಗಳು ಮತ್ತು ರಾಷ್ಟ್ರೀಯವಾದಿಗಳು ನಡಸಿದ ಪರಸ್ಪರವಾದ ಪ್ರತಿವಾದಿಗಳನ್ನು ಹಾಗೂ ಅದರ ಹಿಂದಿದ್ದ ಧೋರಣೆಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನೂ ಮಾಡಲಾಗಿದೆ.

ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತಾ ಬಂದಿದೆ. ಬ್ರಿಟಿಷರ ಆಳ್ವಕೆಗೆ ಮೊದಲು ಬುಡಕಟ್ಟು ಸಮುದಾಯಗಳ ಸ್ವಾತಂತ್ರ್ಯಕ್ಕೆ ಯಾವ ರೀತಿಯಲ್ಲಿಯೂ ಧಕ್ಕೆ ಬಂದಿರಲಿಲ್ಲ ಮುಸಲ್ಮಾನರ ಹಲವಾರು ಶತಮಾನಗಳ ಆಳ್ವಿಕೆಯ ಕಾಲದಲ್ಲಿಯೂ ಬುಡಕಟ್ಟು ಸಮುದಾಯಗಳು ಸ್ವತಂತ್ರವಾಗಿದ್ದವು. ಬ್ರಿಟಿಷರು ಬಂದನಂತರ ಭಾರತದಾದ್ಯಂತ ಏಕರೀತಿಯ ಆಳ್ವಿಕೆಯ ಕ್ರಮ ಜಾರಿಗೆ ಬಂತು. ಕಾಲಕ್ರಮೇಣ ಕೈಗಾರಿಕಾ ಕ್ರಾಂತಿಯಿಂದಾಗಿ ಬ್ರಿಟಿಷರು ಭಾರತದಾದ್ಯಂತ ರೈಲ್ವೆ ಸಂಪರ್ಕ ಏರ್ಪಡಿಸಲು, ರಸ್ತೆಗಳನ್ನು ಮಾಡಿಸಲು ಆರಂಭಿಸದರು. ಇದರಿಂದಾಗಿ ಕಾಡುಗಳನ್ನು ಕಡಿಯಬೇಕಾಯಿತು. ಸಂಪರ್ಕ ಸಾಧನೆಗಳು ಹೆಚ್ಚಾದಂತೆಲ್ಲಾ ಪರ್ವತಾರಣ್ಯಗಳಲ್ಲಿ ವಾಸವಾಗಿದ್ದ ಬುಡಕಟ್ಟು ಸಮುದಾಯ ಜನ ಅನಿವಾರ್ಯವಾಗಿ ಇತರ ಜನಗಳ ಸಂಪರ್ಕಕ್ಕೆ ಬರಬೇಕಾಯಿತು. ಈ ಮಧ್ಯೆ ಕ್ರಿಶ್ಚಿಯನ್ ಪಾದ್ರಿಗಳು ಬುಡಕಟ್ಟು ಜನರಿಗೆ ಕ್ರೈಸ್ತಧರ್ಮದ ಬೋಧನೆಯನ್ನು ಮಾಡುವುದರ ಮೂಲಕ ಅವರನ್ನು ತಮ್ಮ ಧರ್ಮಕ್ಕೆ

ಪರಿವರ್ತಿಸಲು ಯತ್ನಿಸಿದರು. ಬುಡಕಟ್ಟು ಸಮುದಾಯದ ಕೆಲವು ಜನ ಕ್ರಿಶ್ಚಿಯನರಾಗಿ ಪರಿವರ್ತಿತರಾದುದೂ ಉಂಟು. ೬

**ಕೈಗಾರಿಕಾ ಅಭಿವೃದ್ಧಿ :**

ಇಂದು ಅಭಿವೃದ್ಧಿ ಹೊಂದಿರುವ ಎಲ್ಲ ರಾಷ್ಟ್ರಗಳೂ ಕೈಗಾರೀಕರಣದಲ್ಲಿ ಮುಂದುವರಿದಿರುವುದನ್ನು ಕಾಣಬಹುದು. ಕೃಷಿ ಪ್ರಧಾನ ರಾಷ್ಟ್ರಗಳು ಹಿಂದುಳಿದಿವೆ. ದೇಶದ ಹಾಗೂ ತಲಾ ವರಮಾನ ಹೆಚ್ಚಲು ಕೈಗಾರೀಕರಣ ಇಂದು ಅವಶ್ಯಕವಾಗಿದೆ. ಭಾರತ ಕೇವಲ ಕೃಷಿಯೊಂದನ್ನೇ ಅವಲಂಬಿಸಿದರೆ ಯಾವ ಪ್ರಗತಿಯನ್ನೂ ಸಾಧಿಸಲಾರದು. ಏಕೆಂದರೆ ಕೈಗಾರಿಕೆಗಳು ಕೃಷಿಗಿಂತಲೂ ಹೆಚ್ಚು ಲಾಭದಾಯಕವಾಗಿವೆ. ಕೈಗಾರಿಕೆಗಳನ್ನು ಸ್ಥಾಪಿಸುವುದರಿಂದ ಉಳಿದ ಕ್ಷೇತ್ರಗಳ ಉತ್ಪಾದನಾ ಸಾಮರ್ಥ್ಯ ಹೆಚ್ಚುವುದಲ್ಲದೆ ರಾಷ್ಟ್ರೀಯ ವರಮಾನ ಹಾಗೂ ತಲಾ ವರಮಾನ ಕೂಡ ಅಧಿಕವಾಗುತ್ತದೆ. ನಿರುದ್ಯೋಗವನ್ನು ತೊಡೆದುಹಾಕಲು ಇದೊಂದು ಮುಖ್ಯ ಸಾಧನ ಎಂದು ನಂಬಿದ್ದ ನೆಹರು ಬೃಹತ್ ಕೈಗಾರಿಕೆಗಳಿಗೆ ಆದ್ಯತೆ ನೀಡಿದರು. ಗೃಹ ಮತ್ತು ಸಣ್ಣ ಕೈಗಾರಿಕೆಗಳನ್ನೂ ಅಭಿವೃದ್ಧಿಗೊಳಿಸಲು ಹಲವು ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವು:

೧. ಕೇಂದ್ರ ಸಣ್ಣ ಕೈಗಾರಿಕೆಗಳ ಸಂಸ್ಥೆ (Central Small Industries Organisation). ಈ ಸಂಸ್ಥೆ ಕುಶಲ ಕಾರ್ಮಿಕರಿಗೆ ಮತ್ತು ಸಣ್ಣ ಉದ್ದಿಮೆದಾರರಿಗೆ ಮಾರ್ಗದರ್ಶನ ನೀಡುತ್ತದೆ.

೨. ರಾಷ್ಟ್ರೀಯ ಸಣ್ಣ ಕೈಗಾರಿಕಾ ಕಾರ್ಪೋರೇಷನ್ (National Small Industries Corporation) : ೧೯೫೫ರಲ್ಲಿ ಸ್ಥಾಪಿತವಾದ ಇದರ ಮುಖ್ಯ ಉದ್ದೇಶ ಕೈಗಾರಿಕಾಭಿವೃದ್ಧಿಯನ್ನು ತೀವ್ರಗೊಳಿಸುವುದು. ವಿವಿಧ ಕೈಗಾರಿಕಾ ಸಂಸ್ಥೆಗಳಿಂದ ಸರಕು, ಕಚ್ಚಾವಸ್ತು ಮತ್ತು ಬಿಡಿಭಾಗಗಳನ್ನು ಪಡೆದು ಸರ್ಕಾರದ ವಿವಿಧ ಇಲಾಖೆಗಳಿಗೆ ಪೂರೈಸುವುದು ಇದರ ಕಾರ್ಯ. ದೇಶಾದ್ಯಂತ ಔದ್ಯೋಗಿಕ ಕೇಂದ್ರಗಳನ್ನು (Industrial Estates) ಸ್ಥಾಪಿಸಲಾಗಿದೆ.

ಕೈಗಾರಿಕೆಗಳ ಅಭಿವೃದ್ಧಿಗಾಗಿ ಸರ್ಕಾರ ಇನ್ನೂ ಕೆಲವು ಅಖಿಲ ಭಾರತ ಮಂಡಲಗಳನ್ನು ಸ್ಥಾಪಿಸಿದೆ. ಉದಾ:

೧. ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ (Khadi and Village Indusries Board)

೨. ಗೃಹ ಉದ್ದಿಮೆಗಳ ಮಂಡಳಿ (Cottage Industries Board)

೩. ಸಣ್ಣ ಪ್ರಮಾಣದ ಕೈಗಾರಿಕೆಗಳ ಮಂಡಳಿ (Small Scale Industries Board)

೪. ಅಖಿಲ ಭಾರತ ಕೈಮಗ್ಗದ ಮಂಡಳಿ (All India Handloom Board)

೫. ಅಖಿಲ ಭಾರತ ಕುಶಲ ಕೈಗಾರಿಕೆಗಳ ಮಂಡಳಿ (All India Handicrafts Board)

೬. ತೆಂಗಿನ ನಾರು ಮಂಡಳಿ (Coir Board)

೭. ಕಾಫಿ ಮಂಡಳಿ (Coffee Board)

೮. ಕೇಂದ್ರ ರೇಷ್ಮೆ ಮಂಡಳಿ (Central Silk Board)

೯. ಭಾರತೀಯ ಚರ್ಮ ಉದ್ದಿಮೆ ಅಭಿವೃದ್ಧಿ ಯೋಜನೆ (ILDP) ಇತ್ಯಾದಿ.

ಇವುಗಳಿಗೆ ಧನಸಹಾಯ ನೀಡಲು ಪ್ರತಿಯೊಂದು ರಾಜ್ಯದಲ್ಲಿ ಇರುವ ಬ್ಯಾಂಕುಗಳ ಜೊತೆಗೆ 'ರಾಜ್ಯ ಹಣಕಾಸು ಸಂಸ್ಥೆ'ಗಳು (State Financial Corporation) ಅಸ್ತಿತ್ವಕ್ಕೆ ಬಂದಿವೆ. ಸಣ್ಣ ಕೈಗಾರಿಕೆಗಳಿಗೆ ರಕ್ಷಣೆ ನೀಡಲು ದೊಡ್ಡ ಕೈಗಾರಿಕೆಗಳ ಉತ್ಪಾದನೆಯ ಮೇಲೆ ಹೆಚ್ಚಿನ ಕರವನ್ನು ವಿಧಿಸಲಾಗುತ್ತಿದೆ; ಇದರಿಂದ ಬಂದ ಹಣವನ್ನು ಸಣ್ಣ ಕೈಗಾರಿಕೆಗಳ ಅಭೀವೃದ್ಧಿಗೆ ವಿನಿಯೋಗಿಸಲಾಗುತ್ತಿದೆ. ಹೂಡುವ ಬಂಡವಾಳ ಮತ್ತು ಅವುಗಳಲ್ಲಿ ಕೆಲಸ ಮಾಡುವ ಕಾರ್ಮಿಕರ ಸಂಖ್ಯೆಯ ಆಧಾರದ ಮೇಲೆ ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳನ್ನು ವಿಂಗಡಿಸಲಾಗಿದೆ.

ಬ್ರಿಟೀಷರು ಭಾರತದಲ್ಲಿ ಕೈಗಾರಿಕಾ ಅಭಿವೃದ್ಧಿಗೆ ಗಮನಹರಿಸಲಿಲ್ಲ. ೧೮೫೫ರಲ್ಲಿ ಮುಂಬಯಿಯಲ್ಲಿ ಸ್ಥಾಪಿಸಲಾದ ವ್ಯವಸ್ಥಿತ ಹತ್ತಿ ಗಿರಣಿಯೇ (Organised industry) ಭಾರತದ ಪ್ರಪ್ರಥಮ ಕೈಗಾರಿಕೆ. ಯೋಜನಾಪೂರ್ಣ ಅಭಿವೃದ್ಧಿಯ ಕಾರ್ಯಕ್ರಮವನ್ನು ಪಂಚವಾರ್ಷಿಕ ಯೋಜನೆಯಲ್ಲಿ ಆರಂಭಿಸಲಾಗಿದೆ. ಕೃಷಿ ಕ್ಷೇತ್ರದ ಪ್ರಗತಿಗೆ ಕೈಗಾರಿಕಾ ಉತ್ಪನ್ನಗಳೂ ಬೇಕಿದ್ದುದರಿಂದ ಯೋಜನೆಗಳಲ್ಲಿ ಕೃಷಿ ನಂತರದ ಸ್ಥಾನ ಕೈಗಾರಿಕೆಗೆ ನೀಡಲಾಯಿತು.

## ೩. ವರ್ತಮಾನದ ಬದಲಾವಣೆಗಳಲ್ಲಿ ಐ.ಟಿ. ಬಿ.ಟಿ ಪ್ರಭಾವ

ವಿಜ್ಞಾನ ಮತ್ತು ತಂತ್ರಜ್ಞಾದ ಬೆಳವಣಿಗೆಯೊಂದಿಗೆ ಪಶ್ಚಿಮದ ದೇಶಗಳು ಆಧುನೀಕರಣಗೊಂಡು ಅಭಿವೃದ್ಧಿ ಹೊಂದಿದವು. ಆ ಕಾರಣದಿಂದಲೇ ಆಧುನಿಕ ತಂತ್ರಜ್ಞಾನಗಳನ್ನು ಯಾವುದೇ ಸಾಮಾಜಿಕ ಪರಿಸರದಲ್ಲಿ ಅಳವಡಿಸುವ ಮೂಲಕ ಆ ಸಮಾಜಗಳನ್ನು ಮೂಲಭೂತವಾಗಿ ಪರಿವರ್ತಿಸಬಹುದು. ಎಂಬ ಗ್ರಹಿಕೆ ಆಧುನೀಕರಣದ ಚಿಂತನೆಯಲ್ಲಿ ಅಡಕವಾಗಿದೆ. ಬಂಡವಾಳ ಸಂಗ್ರಹಕ್ಕೆ ಒತ್ತು ಕೊಡುವ ಅಭಿವೃದ್ಧಿ ನೀತಿ ಅದರಲ್ಲಿ ಮಾರುಕಟ್ಟೆ ಮತ್ತು ಅದಕ್ಕೆ ಸಂಬಂಧಿಸಿದ ಮೌಲ್ಯಗಳು ಮುಖ್ಯವಾಹಿನಿಯ ಮೌಲ್ಯಗಳಾದವು. ವಿವಿಧ ರೂಪದಲ್ಲಿ ಸಂಪತ್ತನ್ನು ಸಂಗ್ರಹಿಸಿದ.ಹಣ, ಭೂಮಿ, ಕಾರು, ಬಂಗ್ಲೆ, ಟೀವಿ, ಫ್ರಿಡ್ಜ್ ಇತ್ಯಾದಿಗಳು ಮುಖ್ಯವಾಹಿನಿ ಜನರ ಸುಖದ ಅನುಭವದ ವಸ್ತುಗಳಾದವು. ಈ ಅನುಭವದ ಸುಖವನ್ನು ಪಡೆಯುವುದು ಮುಖ್ಯವಾಹಿನಿಗೆ ಬುಡಕಟ್ಟು ಸಮುದಾಯಗಳನ್ನು ತಂದು ತಾಂತ್ರಿಕ ಆಧುನೀಕರಣದ ಲಾಭ ಪಡೆಯುವಂತೆ ಆಧುನಿಕ ತಂತ್ರಜ್ಞಾನದ ಉದ್ದೇಶವಾಗಿದೆ. ಆಧುನಿಕ ವ್ಯವಸ್ಥೆಯಲ್ಲಿ

ಕಾನೂನು, ಬ್ಯಾಕಿಂಗ್ ವ್ಯವಹರಿಸಲು ಅಗತ್ಯವಿರುವ ಜ್ಞಾನ ಬಂಡವಾಳ ಇದ್ದವರು ತಮ್ಮ ಹಣದ ಶಕ್ತಿಯಿಂದ ಆಧುನಿಕ ತಂತ್ರಜ್ಞಾನವನ್ನು ಖರೀದಿಸುವರು.

ಆಧುನಿಕತೆಯ ಎದುರು ಕರಕುಶಲ ಸಮುದಾಯಗಳು ನಿರುಪಯುಕ್ತಗೊಂಡವು. ಜಾತಿಯು ಉಂಟು ಮಾಡುವಷ್ಟೇ ಅಪಾಯವನ್ನು ತಂತ್ರಜ್ಞಾನವು ಮತ್ತು ಅದರಿಂದ ಉಂಟಾಗುವ ಆಧುನಿಕತೆಯು ಮಾಡಬಲ್ಲದು. ತಾಂತ್ರೀಕೃತ ಆರ್ಥಿಕ ವ್ಯವಸ್ಥೆಯ ಜಾಗತಿಕತೆಗಳು ಸ್ಥಳೀಯ ಸಂಸ್ಕೃತಿಗಳ ಆರ್ಥಿಕ ಸಂಬಂಧಗಳನ್ನು ಹೀಗಾಗಿಯೇ ಭಗ್ನಗೊಳಿಸಲು ಸುಲಭವಾಗುವುದು.

ಸಂಸ್ಕೃತಿಯನ್ನು ಆಧುನಿಕತೆಯ ಪ್ರಕ್ರಿಯೆಗೆ ಒಳಪಡಿಸುವಲ್ಲಿ ಅನೇಕ ಬಗೆಯ ಗೊಂದಲಗಳಿವೆ. ಆಧುನಿಕತೆಗೆ ಒಳಗಾಗುವುದಾದರೆ ಸಂಸ್ಕೃತಿಯ ಪರಂಪರೆಯಿಂದ ದೂರವಾಗುವುದೆಂದಲ್ಲ. ಪ್ರತಿಯೊಂದು ಸಂಸ್ಕೃತಿಯ ಉತ್ಪಾದನೆಯ ನೆಲೆಯಲ್ಲೇ ವಿಕಾಸಗೊಂಡಿರುವುದು ಮಾರ್ಕ್ಸವಾದಿ ಚಿಂತನೆಯು ಈ ನಿಲುವನ್ನು ಸಮರ್ಥವಾಗಿ ತೋರಿಸಿ ಕೊಟ್ಟಿದ್ದರೂ ಕೈಗಾರಿಕಾ ಕ್ರಾಂತಿಯ ಪ್ರಭಾವದಿಂದ ತಪ್ಪಿಸಿಕೊಳ್ಳದ ಕಾರಣವಾಗಿ ಕಾರ್ಮಿಕ ಪ್ರಭುತ್ವದ ಆಧುನಿಕ ಉತ್ಪಾದನಾ ಕ್ರಮಗಳಿಗೆ ಹೆಚ್ಚಿನ ಮಾನ್ಯತೆ ನೀಡುವುದರಿಂದ ಸಂಸ್ಕೃತಿಯ ಸೂಕ್ಷ್ಮ ಭಾವನೆಗಳು ಕಳೆದು ಹೋಗುತ್ತದೆ ಶ್ರಮ ಸಂಸ್ಕೃತಿಯನ್ನು ಆಧುನಿಕತಂತ್ರಜಾನೆಲ್ಲವು ಕಿರಿದುಗೊಳಿಸುತ್ತಲೇ ಇರುತ್ತದೆ.

ಇರುಳಿಗರು ಮತ್ತು ಹಕ್ಕಿಪಿಕ್ಕಿ ಬುಡಕಟ್ಟ ಸಮುದಾಯಗಳು ಗುಡಿಸಲು ಮತ್ತು ಗುಹೆಗಳನ್ನು ಬಿಟ್ಟು ಬಂದು ಆಧುನಿಕವಾಗಿ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಮಣ್ಣಿನ ಪಾತ್ರೆಗಳಿಗೆ ಬದಲಾಗಿ ಅಲ್ಯುಮಿನಿಯಮ್ ಸ್ಟೀಲ್ ಪಾತ್ರೆಗಳು ಆಕ್ರಮಿಸಿವೆ. ವ್ಯವಾಸಾಯ, ಉಡುಗೆ –ತೊಡಿಗೆ ಇತ್ಯಾದಿಗಳ ಮೇಲೆ ವಿಜ್ಞಾನ ಮತ್ತು ತಂತ್ರಜ್ಞಾನಗಳು ಬಹಳಷ್ಟು ಪ್ರಭಾವ ಬೀರಿವೆ.

## ೪. ತೀವ್ರ ಬದಲಾವಣೆಯ ತವಕದಲ್ಲಿ ಬುಡಕಟ್ಟು ಸಮುದಾಯಗಳು

**"ಜಾಗತೀಕರಣ"** [Globalization] ಎಂಬ ಪರಿಕಲ್ಪನೆಯನ್ನು ಭಾರತದ ಖ್ಯಾತ ಸಮಾಜಶಾಸ್ತ್ರಜ್ಞರುಗಳಲ್ಲೊಬ್ಬರಾದ ಎಂ.ಎನ್. ಶ್ರೀನಿವಾಸ್‌ರವರು ತಮ್ಮ "ಸೋಶಿಯಲ್ ಚೇಂಜ್ ಇನ್ ಮಾಡರ್ನ್ ಇಂಡಿಯಾ" [೧೯೬೬] ಎಂಬ ಗ್ರಂಥದಲ್ಲಿ ಮೊದಲ ಬಾರಿಗೆ ಪರಿಚಯಿಸಿದ್ದು ಈ ಪರಿಕಲ್ಪನೆಯು ಆಧುನಿಕ ಭಾರತದ ಸಾಮಾಜಿಕ–ಸಾಂಸ್ಕೃತಿಕ ಪರಿವರ್ತನೆಗಳನ್ನು ವಿಶ್ಲೇಷಿಸುವಲ್ಲಿ ಬಹಳಷ್ಟು ಸಹಾತಕವಾಗಿದೆ. ಪಾಶ್ಚಿಮಾತ್ಯ ದೇಶಗಳ ಜನರ ಜೀವನ ವಿಧಾನ, ಮೌಲ್ಯಗಳು ಹಾಗೂ ಆಚಾರ–ವಿಚಾರಗಳನ್ನು ಪಾಶ್ಚಿಮಾತ್ಯೇತರ ವ್ಯಕ್ತಿ/ಸಮೂಹವು ಅನುಕರಿಸುವ ಕ್ರಿಯೆಯನ್ನು ಸಂಕೇತಿಸುವ ಪ್ರಕ್ರಿಯೆಯನ್ನು "ಜಾಗತೀಕರಣ"ವೆಂದು ಸರಳವಾಗಿ ಅರ್ಥವಿಸಬಹುದಾಗಿದೆ.

ಈ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಾವು ಗುರುರಿಸಬಹುದಾದ ಕೆಲವು ಲಕ್ಷಣಗಳು ಹೀಗಿವೆ :

(೧) ಜಾಗತೀಕರಣದ ಪರಿಕಲ್ಪನೆಯು ತಾಂತ್ರಿಕತೆ, ಸಂಸ್ಥೆಗಳು ಹಾಗೂ ಮೌಲ್ಯಗಳ ಕ್ಷೇತ್ರದಲ್ಲಿ ಉಂಟಾಗಿರುವ ಪರಿವರ್ತನೆಗಳ ಬಗ್ಗೆ ಬೆಳಕು ಚೆಲ್ಲುವುದು.

(೨) ಇದೊಂದು ಸರ್ವಾವ್ರತವಾದ, ಸಂಕೀರ್ಣವಾದ ಮತ್ತು ಬಹುಪದರಗಳುಳ್ಳ ಪರಿಕಲ್ಪನೆಯಾಗಿದೆ.

(೩) ಜಾಗತೀಕರಣದ ರೂಪ ಹಾಗೂ ವೇಗ ಇವು ಭಾರತದ ಬೇರೆ ಬೇರೆ ಭೂ-ಭಾಗಗಳಲ್ಲಿ ಹಾಗೂ ಜನಸಮುದಾಯಗಳಲ್ಲಿ ಬೇರೆ ಬೇರೆಯಾಗಿವೆ.

(೪) ಶ್ರೀನಿವಾಸ್‌ರವರ ಪ್ರಕಾರ ಇದೊಂದು ನೀತಿನಿರಪೇಕ್ಷವಾದ ಪರಿಕಲ್ಪನೆಯಾಗಿದೆ.

(೫) ಜಾಗತೀಕರಣದ ಪ್ರಕ್ರಿಯೆಯು ಶ್ರೀನಿವಾಸ್‌ರವರೇ ಪರಿಚಯಿಸಿದ ಇನ್ನೊಂದು ಪರಿಕಲ್ಪನೆಯಾದ ಸಂಸ್ಕೃತಾನುಕರಣಕ್ಕೆ ಹೋಲಿಸಿದಾಗ ಬಹಳ ಸರಳವಾದ ಪ್ರಕ್ರಿಯೆ ಎನ್ನಿಸುವುದು. ಜೊತೆಗೆ ಜಾಗತೀಕರಣದ ಹೆಚ್ಚಳವು ಸಂಸ್ಕೃತಾನುಕರಣದ ವೇಗೋತ್ಕರ್ಷಕ್ಕೂ ಕಾರಣವಾಗುವುದು.

(೬) ಜಾಗತೀಕರಣದ ಪ್ರಕ್ರಿಯೆಯು ಸಾಮಾಜಿಕ ಸುಧಾರಣಾ ಆಂದೋಲನಗಳಿಗೆ ಸ್ಫೂರ್ತಿ ನೀಡಿದೆ.

ಭಾರತೀಯ ಸಮಾಜದ ದೃಷ್ಟಿಯಿಂದ ಹೇಳುವುದಾದರೆ, ಜಾಗತೀಕರಣದ ಪ್ರಕ್ರಿಯೆಯು ಭಾರತೀಯರ ಸಾಮಾಜಿಕ-ಸಾಂಸ್ಕೃತಿಕ ಜೀವನದ ಮೇಲೆ ಬಹಳಷ್ಟು ಪ್ರಭಾವ ಬೀರಿದ್ದು ಹಲವಾರು ಬಗೆಯ ಪರಿಣಾಮಗಳಿಗೆ ಕಾರಣವಾಗಿದೆ. ಅಂತಹ ಕೆಲವು ಪರಿಣಾಮಗಳು ಇಲ್ಲಿ ಉಲ್ಲೇಖಿಸಲ್ಪಟ್ಟಿವೆ :

(೧) ಜಾಗತೀಕರಣದಿಂದಾಗಿ ತಾಂತ್ರಿಕತೆ, ಸಾಂಸ್ಥಿಕ ವ್ಯವಸ್ಥೆ, ತತ್ವಾದರ್ಶಗಳು ಹಾಗೂ ಮೌಲ್ಯಗಳು ಪರಿವರ್ತನೆಗೆ ಒಳಗಾಗಿವೆ. ಮಾನವತಾವಾದ, ವಿಚಾರವಾದ, ಸಮಾನತಾವಾದ, ಮತೇತರವಾದ [humanitarianism, rationalism, egalitarianism, secularism] ಮುಂತಾದ ತತ್ವಾದರ್ಶಗಳು ಇದರಿಂದಾಗಿ ಚಲಾವಣೆಗೆ ಬಂದಿವೆ.

(೨) ಜಾಗತೀಕರಣವು ಸಾಮಾಜಿಕ ಸುಧಾರಣಾ ಆಂದೋಲನಗಳಿಗೆ ಸ್ಫೂರ್ತಿ ನೀಡಿದೆ.

(೩) ಜಾಗತೀಕರಣದಿಂದಾಗಿ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆ ಹಾಗೂ ಸ್ಫೂರ್ತಿ ಲಭಿಸಿದೆ.

(೪) ಈ ಪ್ರಕ್ರಿಯೆಯು ನವೀನ ಜೀವನಶೈಲಿಯ ಪ್ರಸಾರಕ್ಕೆ ಕಾರಣವಾಗಿದೆ. ಊಟೋಪಚಾರ, ಉಡುಗೆ-ತೊಡುಗೆ, ಅಭ್ಯಾಸ-ಹವ್ಯಾಸ, ಮನೋಭಾವ-ಮನೋರಂಜನೆ, ಮನೆಯೊಳಗಿನ ಹಾಗೂ ಹೊರಗಿನ ವ್ಯವಹಾರಗಳಲ್ಲಿ ಪಾಶ್ಚಿಮಾತ್ಯ

ಪ್ರಭಾವ ಒಂದೇ ಸಮನೆ ಹೆಚ್ಚುತ್ತಲೇ ಹೋಯಿತು. ಭಾರತೀಯರನೇಕರು ಬ್ರಿಟೀಷ್ ಮಾದರಿಯ ಸಜ್ಜನರಾಗತೊಡಗಿದರು.

(೫) ಬ್ರಾಹ್ಮಣರ ಜಾಗತೀಕರಣದಿಂದಾಗಿ ಹೊಸ ಮಾದರಿಯ ಮತೇತರ ಸ್ವರೂಪದ ಜಾತಿ ವ್ಯವಸ್ಥೆಯೊಂದು ರೂಪುಗೊಳ್ಳತೊಡಗಿತೆಂದು ಶ್ರೀನಿವಾಸ್ ಅಭಿಪ್ರಾಯಪಟ್ಟಿದ್ದಾರೆ.

(೬) ಜಾಗತೀಕರಣವು ಪಶ್ಚಿಮದ ಅಂಧಾನುಕರಣೆಗೆ ಕಾರಣವಾಗತೊಡಗಿ ಕೆಲವೊಂದು ಹಾನಿಕರ ಪರಿಣಾಮಗಳಿಗೂ ಕಾರಣವಾಯಿತು. ಪಶ್ಚಿಮದ ದೋಷ–ದೌರ್ಬಲ್ಯ–ದುಶ್ಚಟಗಳು ಇಲ್ಲಿ ವಿಜೃಂಭಿಸತೊಡಗಿದವು. ಇದರಿಂದ ರಾಷ್ಟ್ರೀಯ ಸ್ವಾಭಿಮಾನ ಹಾಗೂ ಸ್ವದೇಶಾಭಿಮಾನದ ಬೆಳವಣಿಗೆ ಹಿನ್ನಡೆಯುಂಟಾಯಿತು.

ಜಾಗತೀಕರಣದ ಪರಿಕಲ್ಪನೆಯ ಮಹತ್ವದ ಹೊರತಾಗಿಯೂ ಅದರ ಬಗ್ಗೆ ಕೆಲವು ಟೀಕೆಗಳನ್ನು ಮಾಡಲಾಗಿದ್ದು ಅವುಗಳಲ್ಲಿ ಈ ಮುಂದಿನವು ಉಲ್ಲೇಖನೀಯ :

(೧) ಶ್ರೀನಿವಾಸ್‌ರವರು ನೀಡಿರುವ ಜಾಗತೀಕರಣದ ಪರಿಕಲ್ಪನೆಯು ಜಾತ್ಯಾಧಾರಿತವಾದ ಭಾರತೀಯ ಸಮಾಜದಲ್ಲಾಗುತ್ತಿರುವ ಸಾಮಾಜಿಕ ಪರಿವರ್ತನೆಯನ್ನು ಮಾತ್ರ ವ್ಯಾಖ್ಯಾನಿಸಬಲ್ಲುದು. ಆದರೆ ಅದನ್ನು ಇತರ ಸಮಾಜಗಳ ಅಧ್ಯಯನಕ್ಕೆ ಬಳಸಲಾಗದೇ ಇರುವುದು ಅದರ ಕೊರತೆಗಳಲ್ಲೊಂದು ಎಂದಿದ್ದಾರೆ ಪ್ರೊ. ರಾಮ್ ಅಹುಜಾ.

(೨) ಜಾಗತೀಕರಣದ ಪರಿಕಲ್ಪನೆಯು ನೀತಿ ನಿರಪೇಕ್ಷವಾದುದು ಹಾಗೂ ಮೌಲ್ಯಗಳ ಹಿಡಿತದಿಂದ ಮುಕ್ತವಾದುದು ಎಂಬ ಶ್ರೀನಿವಾಸ್‌ರವರ ನಿಲುವನ್ನು ಪ್ರೊ. ಯೊಗೇಂದ್ರ ಸಿಂಗ್‌ರವರು ಪ್ರಶ್ನಿಸಿದ್ದಾರೆ.

(೩) ಡೇನಿಯಲ್ ಲರ್ನರ್ ಹಾಗೂ ಯೋಗೇಂದ್ರ ಸಿಂಗ್‌ರವರು "ಜಾಗತೀಕರಣದ"ದ ಪರಿಕಲ್ಪನೆಗಿಂತಲೂ "ಆಧುನಿಕೀಕರಣ"ದ ಪರಿಕಲ್ಪನೆಯ ಬಳಕೆಯು ಹೆಚ್ಚು ಸಮಂಜಸವಾದುದು ಎಂದು ವಾದಿಸಿರುತ್ತಾರೆ.

(೪) ಜಾಗತೀಕರಣವು ಬ್ರಿಟೀಷ್ ಯುಗದ ಭಾರತದಲ್ಲಾಗುತ್ತಿದ್ದ ಸಾಮಾಜಿಕ – ಸಾಂಸ್ಕೃತಿಕ ಪರಿವರ್ತನೆಗಳನ್ನು ಅರ್ಥೈಸಿಕೊಳ್ಳಲು ಹೆಚ್ಚು ಸಹಾಯಕವಾಗಿದೆಯೇ ವಿನಃ ಸ್ವಾತಂತ್ರ್ಯೋತ್ತರ ಭಾರತದ ಪರಿವರ್ತನೆಗಳನ್ನಲ್ಲ.

(೫) "ಪಶ್ಚಿಮದ ಪ್ರಭಾವಕ್ಕೊಳಪಡುತ್ತಿರುವ ಪಶ್ಚಿಮೇತರ ದೇಶಗಳಲ್ಲಿ ತಾವು ಪಶ್ಚಿಮದ ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ಒಳಪಟ್ಟಾಗಿನ ನೋವು ಹಾಗೂ ಯಾತನೆ ಇನ್ನೂ ಜೀವಂತವಾಗಿರುವುದರಿಂದ ಜಾಗತಿಕರಣದ ಪ್ರಕ್ರಿಯೆಯು ಶ್ರೀನಿವಾಸ್‌ರವರು ತಿಳಿಸಿರುವಂತೆ ಮೌಲ್ಯಗಳಿಂದ ಮುಕ್ತವಾಗಿಲ್ಲ, ಆದರೆ ಬಂಧಿತವಾಗಿದೆ" ಎಂಬುದಾಗಿ ಪ್ರೊ. ಯೋಗೇಂದ್ರ ಸಿಂಗ್‌ರವರು ಟೀಕಿಸಿದ್ದಾರೆ.

**ಜಾಗತೀಕರಣದ ಅಂಶಗಳು :**

೧. ಆರ್ಥಿಕ ಯೋಜನೆಗಳು ಮತ್ತು ಉದ್ಯಮಗಳ ಶಾಖೆಗಳನ್ನು ವಿಶ್ವದ ವಿವಿಧ ರಾಷ್ಟ್ರಗಳಲ್ಲಿ ಸ್ಥಾಪಿಸುವುದು.

೨. ಸ್ಥಳೀಯ ಮಾರುಕಟ್ಟೆ ಮತ್ತು ವಿದೇಶಿ ಮಾರುಕಟ್ಟೆಗಳಿಗೂ ಇರುವ ಅಂತರವನ್ನು ಕಡಿಮೆ ಮಾಡುವುದು.

೩. ಸರಕು, ಕುಶಲ ಸೇವಾ ಸೌಲಭ್ಯಗಳನ್ನು ದೇಶ ವಿದೇಶಗಳಿಂದ ವಿನಿಮಯ ಮಾಡಿಕೊಳ್ಳುವುದು.

೪. ಉದ್ದಿಮೆಗಳ ಉತ್ಪಾದನಾ ಮತ್ತು ವಿತರಣಾ ಕೇಂದ್ರಗಳನ್ನು ರಾಷ್ಟ್ರೀಯತೆಉ ಬೇಧ ಭಾವವಿಲ್ಲದೆ ವಿಶ್ವಾದ್ಯಂತ ಸ್ಥಾಪಿಸುವುದು. ಆ ಮೂಲಕ ಅಂತರ ರಾಷ್ಟ್ರೀಯತೆ ಮತ್ತು ವಿಶ್ವ ಭ್ರಾತೃತ್ವ ಬೆಳೆಯುತ್ತದೆ.

೫. ಉತ್ಪಾದನೆ ಮತ್ತು ಅಭಿವೃದ್ಧಿ ಯೋಜನೆಗಳನ್ನು ವಿಶ್ವ ಮಾರುಕಟ್ಟೆಯ ಬೇಡಿಕೆಗನುಗುಣವಾಗಿ ರೂಪಿಸುವುದು.

೬. ಸ್ಥಳೀಯ ಮತ್ತು ರಾಷ್ಟ್ರೀಯ ಮಾರುಕಟ್ಟೆಗಳಿಗೆ ಸೀಮಿತಗೊಳ್ಳದೆ ಇಡೀ ವಿಶ್ವವೇ ಒಂದು ಮಾರುಕಟ್ಟೆ ಎಂದು ಪರಿಗಣಿಸಿ ಉತ್ಪಾದನೆ ಮತ್ತು ವಿತರಣೆ ಮಾಡುವುದು.

೭. ಜಾಗತೀಕರಣದ ಮತ್ತೊಂದು ಲಕ್ಷಣವೆಂದರೆ : ವಿಶ್ವವಿದ್ಯಾಲಯ ಮತ್ತು ಕಾಲೇಜುಗಳಲ್ಲಿ ವಿವಿಧ ದೇಶಗಳ ಪರಿಣಿತರು ಹಾಗೂ ವಿದ್ವಾಂಸರನ್ನು ವಿನಿಮಯ ಮಾಡಿಕೊಂಡು ಆಯಾ ಸಂಸ್ಕೃತಿ, ಸಮಾಜ, ಧರ್ಮ, ವೈದ್ಯಶಾಸ್ತ್ರ, ತಂತ್ರಶಾಸ್ತ್ರಗಳನ್ನು ಬೋಧಿಸುವುದು. ಆ ಮೂಲಕ ವಿಶ್ವಧರ್ಮ ಮತ್ತು ಸಂಸ್ಕೃತಿಗಳ ಹಾಗೂ ಮೌಲ್ಯಗಳ ಅಧ್ಯಯನದಿಂದ ಸೌಹಾರ್ಧತೆ ಮತ್ತು ಸಹಿಷ್ಣುತೆ ಬೆಳೆಸುವುದು.

೮. ಎಸ್.ಇ.ಜಡ್. (Special Economic Zone-SEZ) : ೧೯೫೫ರಲ್ಲಿ ಸ್ಪೆಷಲ್ ಎಕನಾಮಿಕ್ ಜೋನ್ ಯೋಜನೆಯನ್ನು ಜಾಗತೀಕರಣದ ಅಂಗವಾಗಿ ರೂಪಿಸಲಾಗಿದೆ.

೯. ವಿವಿಧ ದೇಶಗಳ ಹವಾಮಾನಗಳಿಗನುಗುಣವಾಗಿ ಉತ್ಪಾದನೆಗಳನ್ನು ಸಿದ್ಧಪಡಿಸುವುದು.

## ಜಾಗತೀಕರಣದ ಸಂದರ್ಭದಲ್ಲಿ ಬುಡಕಟ್ಟು ಅಭಿವೃದ್ಧಿ

ಎಪ್ಪತ್ತರ ದಶಕದಲ್ಲಿ ಬುಡಕಟ್ಟು ಅಭಿವೃದ್ಧಿಗೆ ಸಂಬಂಧಿಸಿದ ಬಹು ದೊಡ್ಡ ಚರ್ಚೆ ನಡೆಯಿತು. ಬುಡಕಟ್ಟು ಸಮುದಾಯದ ಜನರು ಮುಖ್ಯವಾಹಿನಿಗೆ ಸೇರಬೇಕೇ? (ಬೇಡವೇ?) ಎನ್ನುವುದು ಆ ಚರ್ಚೆಗೆ ಮುಖ್ಯ ವಸ್ತುವಾಗಿತ್ತು. ಕೆಲವರ ಪ್ರಕಾರ ಆ ಚರ್ಚೆ ಅಥವಾ ಆ ಪ್ರಶ್ನೆ ಎಂದೋ ಮುಗಿದು ಹೋದ ಅಧ್ಯಾಯ. ಆದುದರಿಂದ ಪುನಃ ಅದನ್ನು ಕೆದಕುವ ಅವಶ್ಯಕತೆಯಿಲ್ಲ. ಅವರು ಸರಿ ಇರಲೂಬಹುದು. ಆದರೆ ಆ ಕುರಿತು ಕೆಲವು ಸಂದೇಹ ಗಳಿವೆ. ಆ ಸಂದೇಹಗಳು ಬಲಗೊಳ್ಳಲು ಮುಖ್ಯ ಕಾರಣ ಜಾಗತೀಕರಣದ ಸಂದರ್ಭದಲ್ಲಿ ನಡೆಯುತ್ತಿರುವ ಚರ್ಚೆಗಳು. ಹಲವಾರು ವಿಚಾರಗಳು ಜಾಗತೀಕರಣಕ್ಕೆ ಸಂಬಂಧಿಸಿದಂತೆ ಚರ್ಚೆಯಲ್ಲಿವೆ. ಅವುಗಳಲ್ಲಿ ಕೆಲವೊಂದು ಹಿಂದೆ ಬುಡಕಟ್ಟು ಅಭಿವೃದ್ಧಿಗೆ ಸಂಬಂಧಿಸಿದಂತೆ ನಡೆದ ಚರ್ಚೆಯಲ್ಲಿ ಬೆಳಕಿಗೆ ಬಂದವು.

ಉದಾಹರಣೆಗೆ ನಾವು ಜಾಗತೀಕರಣ ಪ್ರಕ್ರಿಯೆಯಲ್ಲಿ ಭಾಗವಹಿಸಬೇಕೆ? ನಮ್ಮ ಅಭಿವೃದ್ಧಿಯನ್ನು ನಮ್ಮ ಬೇಕು ಬೇಡಗಳಿಗೆ ಅನುಸಾರ ನಿರ್ಧರಿಸಲು ಸಾಧ್ಯವಿಲ್ಲವೇ? ನಾವು ಯಾಕೆ ಪಶ್ಚಿಮದ ಮಾದರಿಯನ್ನು ಅನುಸರಿಸಬೇಕು? ಇತ್ಯಾದಿಗಳು. ಅಂದರೆ ಇಲ್ಲೂ ಹಿಂದೆ ಬುಡಕಟ್ಟು ಅಭಿವೃದ್ಧಿಯನ್ನು ಕಾಡಿದಂತೆ ಮುಖ್ಯವಾಹಿನಿಗೆ ಸೇರಿಕೊಳ್ಳಬೇಕೆ? ಅಥವಾ ಅದರಿಂದ ದೂರ ಇರಬೇಕೆ/ ಎನ್ನುವ ಪ್ರಶ್ನೆ ನಮ್ಮೆಲ್ಲರನ್ನೂ ಕಾಡುತ್ತಿದೆ. ಇದು ಒಂದು ಕಡೆಯಿಂದ ನಮ್ಮ ಬುಡಕಟ್ಟು ಜನರ ಸ್ಥಿತಿಗತಿಯನ್ನು ಮತ್ತು ಅವರ ಅಭಿವೃದ್ಧಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಒಳಗೊಂಡರೆ ಮತ್ತೊಂದು ಕಡೆಯಿಂದ ಮುಖ್ಯವಾಹಿನಿಯಲ್ಲಿ ಇದ್ದೇವೆ ಎಂದು ಕೊಂಡವರ ಸಮಸ್ಯೆಯನ್ನೂ ಒಳಗೊಳ್ಳುತ್ತದೆ.

ಇನ್ನು ಬುಡಕಟ್ಟುಗಳು ಮುಖ್ಯವಾಹಿನಿಗೆ ಸೇರಬೇಕೆ? ಎನ್ನುವ ಪ್ರಶ್ನೆ. ಇದಕ್ಕೆ ಬೇಕು ಅಥವಾ ಬೇಡ ಎನ್ನುವ ಒಂದು ಪದದ ಉತ್ತರ ಕೊಡುವುದು ಕಷ್ಟ. ಸೇರಬೇಕು ಅಂದರೆ ಯಾಕೆ? ಅಥವಾ ಬೇಡ ಅಂದರೆ ಯಾಕೆ? ಎನ್ನುವ ವಿಚಾರಗಳತ್ತ ನಾವು ಗಮನ ಹರಿಸಬೇಕಾಗಿದೆ. ಆದುದರಿಂದ ಇದು ಸ್ವಲ್ಪ ವಿಸ್ತಾರವಾಗಿ ಚರ್ಚೆಯಾಗಬೇಕಾಗಿದೆ. ಈ ಪ್ರಶ್ನೆ ಇದೇ ಮೊದಲ ಬಾರಿಗೆ ಕೇಳಿ ಬರುವುದಿಲ್ಲ. ವಸಾಹತು ಸಂದರ್ಭದಲ್ಲಿ, ನಂತರ ನಮ್ಮ ಆಧುನೀಕರಣದ ಸಂದರ್ಭದಲ್ಲಿ ಮತ್ತು ಈಗ ಹೀಗೆ ಹಲವು ಬಾರಿ ಬಂದಿದೆ. ಪ್ರತಿ ಬಾರಿಯೂ ಬೇರೆ ಬೇರೆ ಕಾರಣಗಳನ್ನು ಮುಂದಿಡಲಾಗುತ್ತಿದೆ. ವಸಾಹತು ಸಂದರ್ಭದಲ್ಲಿ ಬುಡಕಟ್ಟಿನವರನ್ನು ಮಾತ್ರ ಯಾಕೆ ಭಾರತದ ಎಲ್ಲ ಸಮುದಾಯಗಳನ್ನೂ ನಾಗರಿಕನ್ನಾಗಿಸುವ ಬಹುದೊಟ್ಟ ಜವಾಬ್ದಾರಿ ಹೊತ್ತು ಮುಖ್ಯವಾಹಿನಿಗೆ ಸೇರಿಸುವ ಪ್ರಶ್ನೆ ಚರ್ಚೆಗೆ ಬಂದಿದೆ. ಬುಡಕಟ್ಟಿನವರಿಗೆ ಸಂಬಂಧಿಸಿದಂತೆ ಈ ಪ್ರಶ್ನೆ ಚರ್ಚೆಗೆ ಬರಲು ಕಾರಣ ವಸಾಹತು ಸರಕಾರದ ಆರ್ಥಿಕ ಪ್ರಶ್ನೆಗಳು. ಅರಣ್ಯ ಇಲಾಖೆಯವರ ವ್ಯವಹಾರಕ್ಕೆ ಅಡ್ಡಿ ಆತಂಕ ಆಗದಂತೆ ಬುಡಕಟ್ಟು ಸಮುದಾಯಗಳನ್ನು ನಿರ್ವಹಿಸುವುದು ಮುಖ್ಯ ಕಾರಣವಾಗಿತ್ತು. ಅದರ ಜತೆಗೆ ಕಾನೂನು ಮತ್ತು ಶಿಸ್ತು ಕಾಪಾಡುವ ದೃಷ್ಟಿಯಿಂದಲೂ ಅಗತ್ಯವಾಗಿತ್ತು. ಟೀ, ಕಾಫಿ ಪ್ಲಾಂಟರುಗಳ ಉದ್ಯಮ, ಊರಿನ ವ್ಯಾಪಾರಿಗಳ ವ್ಯವಹಾರಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳುವುದು ಕೂಡ ಅಂದಿನ ವಸಾಹತು ಸರಕಾರದ ಜವಾಬ್ದಾರಿಯಾಗಿತ್ತು. ಅದಕ್ಕಾಗಿ ಅದು ಬುಡಕಟ್ಟು ಸಮುದಾಯಗಳನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವ ಪ್ರಶ್ನೆ ಎತ್ತಿತು. ನಂತರ ಆಧುನೀಕರಣ ಸಂದರ್ಭದಲ್ಲಿ ನಮ್ಮದೇ ಸರಕಾರ ನಮ್ಮೆಲ್ಲರನ್ನೂ 'ಆಧುನೀಕರಣಗೊಳಿಸುವ' ಉದ್ದೇಶದಿಂದ ಮುಖ್ಯವಾಹಿನಿಗೆ ಸೇರಿಸಬೇಕೆನ್ನುವ ಪ್ರಶ್ನೆಯನ್ನು ಮುಂದೆ ಇಟ್ಟಿತ್ತು. ಶಾಲೆ, ರಸ್ತೆ, ಅಭಿವೃದ್ಧಿ ಯೋಜನೆಗಳಲ್ಲಿ ಪಾಲು ಇತ್ಯಾದಿಗಳು ಮುಖ್ಯವಾಹಿನಿಯಲ್ಲಿ ಸೇರಿಕೊಳ್ಳುವ ಸುಲಭ ಮಾರ್ಗಗಳಾದವು. ಮೇಲಿನ ಎರಡೂ ಸಂದರ್ಭದಲ್ಲೂ ಅದಕ್ಕೆ ತುಂಬಾ ವಿರೋಧ ಬಂದಿದೆ. ಬುಡಕಟ್ಟಿನವರಿಂದ ನೇರ ವಿರೋಧ ಬಂದಿರುವುದು ಅವರ ಜೀವನವೇ ಅಸಾಧ್ಯ ಎನ್ನುವ ಸ್ಥಿತಿ ತಲುಪಿದಾಗ. ಆ ಸಂದರ್ಭದಲ್ಲಿ ಮುಖ್ಯವಾಹಿನಿಗೆ ಬುಡಕಟ್ಟು ಜನರು ಸೇರಬೇಕೆ ಎನ್ನುವ ಚರ್ಚೆ ಬಲಗೊಂಡಿತು. ಯಾಕೆ ಸೇರಬಾರದು ಎನ್ನುವ ವಾದಗಳು ಸ್ಥೂಲವಾಗಿ ಎರಡು ವಿಚಾರಗಳನ್ನು ಒಳಗೊಂಡಿವೆ. ಒಂದು, ಅವರನ್ನು (ಬುಡಕಟ್ಟು ಜನರನ್ನು) ಉದ್ಧಾರ ಮಾಡುವ ಕಾರ್ಯಕ್ರಮಗಳು ನಿಜವಾಗಿಯೂ ಅವರನ್ನು ಉದ್ಧಾರ ಮಾಡುತ್ತಿಲ್ಲ. ಬದಲಿಗೆ ಅವರನ್ನು ಶೋಷಣೆ

ಮಾಡುತ್ತಿವೆ. ಬುಡಕಟ್ಟು ಜನರಿಗೆ ಅವರದ್ದೇ ಆದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಬದುಕು ಇದೆ. ಚಾರಿತ್ರಿಕವಾಗಿ ಅವರು ರೂಢಿಸಿಕೊಂಡು ಬಂದ ಬದುಕಿಗೆ ಅನುಗುಣವಾಗಿ ಅವರನ್ನು ಬದುಕಲು ಬಿಡಿ ಎನ್ನುವುದು ಎರಡನೆ ವಾದ. ನನ್ನ ಪ್ರಕಾರ ಈ ಎರಡು ವಾದಗಳು ಬೇರೆ ಬೇರೆ ಅಲ್ಲ. ಒಂದೇ ಸಮಸ್ಯೆಯ ಎರಡು ಮುಖಗಳು. ಒಂದು ವೇಳೆ ಅವರನ್ನು ಉದ್ಧಾರ ಮಾಡುವ ಯೋಜನೆಗಳನ್ನು ನಿಜವಾಗಿಯೂ ಅವರನ್ನು ಉದ್ಧಾರ ಮಾಡುತ್ತಿದ್ದರೆ ಎರಡನೆ ಪ್ರಶ್ನೆಯೇ ಉದ್ಭವ ಆಗುತ್ತಿರಲಿಲ್ಲ. ಎರಡನೇ ಪ್ರಶ್ನೆ ಯಾಕೆ ಉದ್ಭವ ಆಗಿದೆ ಎಂದರೆ ಮೊದಲಿನ ಕೆಲಸ ಪರಿಪೂರ್ಣವಾಗಿ ಆಗಿಲ್ಲ ಎನ್ನುವ ಕಾರಣದಿಂದ.

ಬುಡಕಟ್ಟು ಜನರಿಗೆ ಅವರದ್ದೇ ಆದ ಒಂದು ಬದುಕಿದೆ, ಅದರ ಪ್ರಕಾರ ಬದುಕಲಿ ಬಿಡಿ ಎನ್ನುವ ವಾದವನ್ನು ಮುಂದಿಟ್ಟ ಕೂಡಲೇ ಕೆಲವು ಪ್ರಶ್ನೆಗಳು ಹುಟ್ಟುತ್ತವೆ. ಒಂದು ಅದು ಸಾಧ್ಯವೇ? ಈಗ ಬೇಡ ಹಿಂದೆ ಅದು ಸಾಧ್ಯವಾಗಿತ್ತೇ? ಹಿಂದೆ ಅನ್ನುವಾಗ ವಸಾಹತು ಕಾಲ ಅಥವಾ ಪರದೇಶಿ ಆಳ್ವಿಕೆ ನಮ್ಮ ಕಣ್ಣ ಮುಂದೆ ಬರುತ್ತದೆ. ವಸಾಹತು ಆಳ್ವಿಕೆಗೆ ನಮ್ಮಲ್ಲಿನ ಎಲ್ಲವೂ ಸರಕುಗಳೇ. ಸರಕನ್ನಾಗಿ ಪರಿವರ್ತಿಸುವ ಅವರ ಕಾಯಕದಲ್ಲಿ ಕಾಡು, ನಾಡು ಎನ್ನುವ ವ್ಯತ್ಯಾಸ ಇಲ್ಲ. ಯಾವುದರಿಂದ ಹೆಚ್ಚು ಲಾಭ ಬರುತ್ತದೋ ಅದನ್ನು ಅವರು ನಿರ್ದಾಕ್ಷಿಣ್ಯವಾಗಿ ವಶಪಡಿಸಿಕೊಂಡಿದ್ದಾರೆ. ಕೆಲವು ಪ್ರದೇಶದ ಕಾಡುಗಳು ಕಾಫಿ, ಟೀ, ತೋಟಗಳಾಗಿ ಪರಿವರ್ತನೆಯಾದರೆ ಇನ್ನೂ ಕೆಲವು ಪ್ರದೇಶದ ಕಾಡುಗಳು ರೈಲ್ವೆ ಹಳಿಗಳಿಗಾಗಿ ನಾಶವಾದವು. ಹೀಗೆ ಎಲ್ಲವನ್ನು ಸರಕನ್ನಾಗಿಸುವ ವಸಾಹತು ಆಳ್ವಿಕೆ ಬಗ್ಗೆ ನಮಗೆಲ್ಲರಿಗೂ ಸಾಕಷ್ಟು ತಿಳಿದಿದೆ. ಈ ಬಗ್ಗೆ ಬೇಕಾದಷ್ಟು ಚರ್ಚೆಗಳು ನಡೆದಿವೆ. ಮತ್ತು ಬುಡಕಟ್ಟು ಬದುಕು ನಾಶವಾಗುವುದರಲ್ಲಿ ಅದೇ ಪ್ರಮುಖ ಪಾತ್ರ ವಹಿಸಿದೆ ವಹಿಸಿದೆ ಎನ್ನುವುದು ಒಂದು ಸಾರ್ವಕಾಲಿಕ ಸತ್ಯವಾಗಿ ನಮ್ಮ ಮುಂದೆ ಇದೆ. ನನ್ನ ಉದ್ದೇಶ ಪುನಃ ಅದನ್ನೇ ಕೆದಕುವುದಿಲ್ಲ. ಅದಕ್ಕಿಂತ ಮುಖ್ಯವಾದ ಹಲವಾರು ಪ್ರಶ್ನೆಗಳು ಪ್ರತಿ ಬಾರಿ ಬುಡಕಟ್ಟು ಅಥವಾ ನಮ್ಮ ಸಮಾಜದ ಕೆಳವರ್ಗದ ಶೋಷಣೆ ಬಗ್ಗೆ ಚರ್ಚೆ ಆದಾಗಲೆಲ್ಲಾ ನನ್ನ ತಲೆ ತಿನ್ನುತ್ತಿವೆ. ಒಂದು, ವಸಾಹತು ಪೂರ್ವದಲ್ಲಿ ನಮ್ಮ ಬುಡಕಟ್ಟಿನವರ ಬದುಕು ಹೇಗಿತ್ತು? ಎರಡು, ನಮ್ಮ ಸಮಾಜದ ಮೇಲ್‌ವರ್ಗದವರಿಂದ ಬುಡಕಟ್ಟು ಬದುಕಿಗೆ ತೊಂದರೆಯಾಗಿಲ್ಲವೇ? ಒಂದು ವೇಳೆ ಬ್ರಿಟೀಷರು ಬರದಿದ್ದರೆ ನಮ್ಮ ಬುಡಕಟ್ಟು ಅಥವಾ ಸಮಾಜದ ಕೆಲವರ್ಗದವರ ಸ್ಥಿತಿ ಈಗಿರುವುದಕ್ಕಿಂತ ಉತ್ತಮ ಇರುತ್ತಿತ್ತೇ? ಈ ಎಲ್ಲ ಪ್ರಶ್ನೆಗಳು ಹೆಚ್ಚು ಕಡಿಮೆ ನಮ್ಮ ಮುಖ್ಯವಾಹಿನಿ ಮತ್ತು ಬುಡಕಟ್ಟು ಜನರ ಸಂಬಂಧ ಸುತ್ತ ಇವೆ. ಜತೆಗೆ ಈ ಎಲ್ಲವೂ ಚರಿತ್ರೆಗೆ ಸೇರಿದವು. ನಿಖರವಾಗಿ ಇದು ಹೀಗೆ ಎಂದು ತೀರ್ಮಾನಕ್ಕೆ ಬರುವುದು ಕಷ್ಟ. ಚರಿತ್ರೆಯಲ್ಲಿ ನಡೆದಿದೆ ಎನ್ನುವ ಪ್ರತಿಯೊಂದು ವಿವರಣೆ ಕೂಡ ಪ್ರಶ್ನಿಸಲ್ಪಡಬಹುದು. ಹಾಗೆಂದು ಈ ಪ್ರಶ್ನೆಗಳನ್ನು ಚರ್ಚಿಸದೆ ಬಿಡುವುದು ಸರಿಯಲ್ಲ. ಯಾಕೆಂದರೆ ಬುಡಕಟ್ಟು ಬದುಕಿನ ಬಗ್ಗೆ ಚರ್ಚೆ ನಡೆಯುತ್ತಿರುವುದೇ ಕೆಲವೊಂದು ಗೃಹಿತಗಳನ್ನು ಇಟ್ಟುಕೊಂಡು. ಹಲವಾರು ಕಾರಣಗಳಿಂದ ಅವರ ಬದುಕು ಸುಖವಾಗಿ ಇಲ್ಲ ಮತ್ತು ಅವರು ಸುಖದಿಂದ ಇರಲು ಕೆಲವೊಂದು ಮೂಲಭೂತ ಸುಧಾರಣೆಗಳು ಆಗಬೇಕಾಗಿದೆ ಎನ್ನುವುದು ಅವುಗಳಲ್ಲಿ ಪ್ರಾಮುಖ್ಯ ಗೃಹಿತ. ವಸಾಹತುಪೂರ್ವದ

ಬುಡಕಟ್ಟು ಬದುಕಿನ ಬಗ್ಗೆ ಹಲವಾರು ಮೂಲಗಳಿಂದ ನಾವು ತಿರ್ಮಾನಕ್ಕೆ ಬರಬಹುದು. ನಮ್ಮ ಸಂಸ್ಕೃತಿಯ ಅಡಿಪಾಯವೆಂದು ಪ್ರಚಾರ ಪಡೆದಿರುವ ರಾಮಾಯಣ, ಮಹಾಭಾರತಗಳಂತಹ ಪೌರಾಣಿಕ ಗ್ರಂಥಗಳಿಂದ ಈ ವಿಶ್ಲೇಷಣೆಯನ್ನು ಆರಂಭಿಸುವ. ರಾಮಾಯಣದ ಸರಿ ಅರ್ಧದಷ್ಟು ಘಟನೆಗಳು ನಡೆಯುವುದೇ ಅರಣ್ಯದಲ್ಲಿ. ಹಾಗೆಂದು ರಾಮಾಯಣದ ಮುಖ್ಯ ಪಾತ್ರಧಾರಿಗಳನ್ನು ಬುಡಕಟ್ಟು ಜನರೆಂದು ಕರೆಯಲು ಸಾಧ್ಯವಿಲ್ಲ. ಯಾಕೆಂದರೆ ಅವರು ಊರಿನ ಮೇಲ್‌ವರ್ಗಕ್ಕೆ ಸೇರಿದವರೆಂದು ರಾಮಾಯಣ ತುಂಬಾ ಸ್ಪಷ್ಟವಾಗಿ ತಿಳಿಸುತ್ತದೆ. ಊರಿನ ಸಮಸ್ಯೆ ಹಿಡಿದುಕೊಂಡು ಅರಣ್ಯವಾಸಿಗಳಾಗುತ್ತಾರೆ ಮತ್ತು ಆ ಸಮಸ್ಯೆ ಪರಿಹಾರಕ್ಕೆ ಅರಣ್ಯವಾಸಿಗಳನ್ನು ಬಳಸಿಕೊಳ್ಳುತ್ತಾರೆ. ವಾಲಿ ಮತ್ತು ಸುಗ್ರೀವ ಅಣ್ಣ ತಮ್ಮಂದಿರು. ಬುಡಕಟ್ಟು ನಿಯಮದ ಪ್ರಕಾರ ನಡೆದಿರುವ ಅವರ ನಡುವಿನ ಸಂಬಂಧವನ್ನು ತಮ್ಮ ಊರಿನ ನೀತಿಯ ಮಾನದಂಡದಿಂದ ಅಳೆದು ನ್ಯಾಯ ತೀರ್ಮಾನಕ್ಕೆ ರಾಮ ಹೋಗುತ್ತಾನೆ. ಊರಿನ ನೀತಿಯಿಂದ ಅರಣ್ಯವಾಸಿಗಳ ತಕರಾರು (ಬುಡಕಟ್ಟು ನಿಯಮಗಳ ಪ್ರಕಾರ ಅದು ತಕರಾರು ಅಲ್ಲದಿರಬಹುದು) ಪರಿಹರಿಸಿ ಅವರನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವ ಉದ್ದೇಶ ಇದ್ದರೆ ಅದನ್ನು ಬೇರೆ ರೀತಿಯಲ್ಲಿ ನೋಡಬಹುದಾಗಿತ್ತು. ಆದರೆ ಅಲ್ಲಿ ರಾಮನ ತಕ್ಷಣದ ಉದ್ದೇಶ ತನ್ನ ಪತ್ನಿಯನ್ನು ರಾವಣನ ಹಿಡಿತದಿಂದ ಬಿಡಿಸಲು ಸುಗ್ರೀವ ಮತ್ತು ಆತನ ಸಹಚರರ ಬೆಂಬಲ ಪಡೆಯುವುದು. ಅದಕ್ಕೋಸ್ಕರ ಯಾವುದೋ ಸಮುದಾಯದ ಮೌಲ್ಯಗಳ ದೃಷ್ಟಿಯಿಂದ ಸಹಜವಾಗಿ ನಡೆದ ಕ್ರಿಯೆಯನ್ನು ಮತ್ತೊಂದು ಸಮುದಾಯದ ಮೌಲ್ಯದಿಂದ ಅಳೆದು ತಪ್ಪೆಂದು ತೀರ್ಮಾನಕ್ಕೆ ಬರುವುದು ಸ್ವಾರ್ಥ ಸಾಧನೆ ಅಲ್ಲದೆ ಬೇರೆನೂ ಆಗಲು ಸಾಧ್ಯವಿಲ್ಲ. ಇಲ್ಲೆಲ್ಲಾ ನಾಡಿನ ಸಮಸ್ಯೆ ಪರಿಹಾರಕ್ಕೆ ಕಾಡನ್ನು ಬಳಸಿಕೊಳ್ಳಲಾಗಿದೆ. ನಾಡಿನ ಜನರು ತಮ್ಮ ಮೌಲ್ಯಗಳಿಂದ ಬುಡಕಟ್ಟು ಜನರ ಬದುಕನ್ನು ಅಳೆದು ತೀರ್ಮಾನಕ್ಕೆ ಬರುವ ಕ್ರಮ ರೂಢಿಯಾಗಿತ್ತು. ಅದು ಅನಿವಾರ್ಯವಾಗಿ ಅಂದಿನ ಅರಣ್ಯವಾಸಿಗಳಿಗೆ ಸಮಸ್ಯೆ ಸೃಷ್ಟಿಸಿದೆ. ಅವರ ಬದುಕನ್ನು ಸ್ಥಿತ್ಯಂತರಗೊಳಿಸಿದೆ.

ಇನ್ನು ಚರಿತ್ರೆ ಸಂದರ್ಭದಲ್ಲಿ ಬುಡಕಟ್ಟು ಬದುಕನ್ನು ಬುಡಮೇಲುಗೊಳಿಸಿದ ಸಾಕಷ್ಟು ಉದಾಹರಣೆಗಳು ನಮ್ಮ ಮುಂದಿವೆ. ಊರಿನಲ್ಲಿ ಜನಸಂಖ್ಯೆ ಹೆಚ್ಚಿ ಕೃಷಿಗೆ ಭೂಮಿ ಅಗತ್ಯವಿದೆ ಎಂದ ಕೂಡಲೇ ಪಕ್ಕದ ಕಾಡು ನಾಡಾಗಬೇಕಾಗಿತ್ತು. ಅದಕ್ಕೆ ಕಾಡು ಕಡಿಯುವುದು ಮತ್ತು ಆ ಸಂದರ್ಭದಲ್ಲಿ ಬುಡಕಟ್ಟು ಜನರು ಅದನ್ನು ವಿರೋಧಿಸುವುದು ಸಾಮಾನ್ಯವೋ ಎನ್ನುವಷ್ಟರ ಮಟ್ಟಿಗೆ ನಮ್ಮ ಚರಿತ್ರೆಯಲ್ಲಿ ನಡೆದಿದೆ. ಖಾಸಗಿ ಆಸ್ತಿಯ ಕಲ್ಪನೆ ನಮ್ಮ ಚರಿತ್ರೆಯಲ್ಲಿ ಬಹು ಹಿಂದಿನಿಂದಲೇ ಇತ್ತು. ಆ ಕಾರಣಕ್ಕಾಗಿ ಎಷ್ಟೋ ರಾಜರುಗಳಿಗೆ ತಮಗೆ ಇಷ್ಟ ಬಂದ ಹಾಗೆ ದಾನ ಮಾಡಲು ಭೂಮಿ ಕೊರತೆ ಇತ್ತು. ಆ ಸಂದರ್ಭಗಳಲ್ಲಿ ಸಣ್ಣ ಭೂಪ್ರದೇಶಗಳು ಮತ್ತು ಅದಕ್ಕೆ ಸೇರಿದ ಕಾಡನ್ನು ದಾನವಾಗಿ ಕೊಡುವ ಪ್ರವೃತ್ತಿ ನಡೆದಿತ್ತು. ಅಂತಹ ಸಂದರ್ಭಗಳು ಕೂಡ ಕಾಡನ್ನು ತಮ್ಮ ಬದುಕಿನ ಆಸರೆಯಾಗಿ ನಂಬಿದ್ದ ಬುಡಕಟ್ಟು ಜನೆ ಬದುಕನ್ನು ಸ್ಥಿತ್ಯಂತರಗೊಳಿಸಿವೆ. ಹೀಗೆ ಬುಡಕಟ್ಟು ಜನರ ಬದುಕನ್ನು ಆವರಿಸಿಕೊಳ್ಳುವ ಪ್ರವೃತ್ತಿ ನಮ್ಮ ಸಂಸ್ಕೃತಿಯ ಭಾಗವೂ ಆಗಿತ್ತು. ನಂತರದ ವಸಾಹತು ಕಾಲದಲ್ಲಿ ಅರಣ್ಯ ಪ್ರದೇಶದ ಅಳತೆ ನಡೆಯಿತು. ವ್ಯಾಪ್ತಿ

ನಿರ್ಧಾರವಾಯಿತು ಮತ್ತು ಅರಣ್ಯ ವಸಾಹತು ಸರಕಾರದ ಸೊತ್ತಾಯಿತು. ಸುತ್ತಲಿನ ಜನರು ಅರಣ್ಯ ಪ್ರವೇಶ ಮಾಡುವುದು ನಿಷೇಧವಾಯಿತು. ಸಾವಿರಾರು ವರ್ಷಗಳಿಂದ ಅರಣ್ಯದಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನರು ಕಾನೂನು ಬಾಹಿರವಾಗಿ ಅರಣ್ಯ ಪ್ರದೇಶದಲ್ಲಿ ಇರುವವರು ಎಂದಾಯಿತು. ಹಲವಾರು ಅರಣ್ಯಗಳು ಟೀ, ಕಾಫಿ, ರಬ್ಬರ್ ತೋಟಗಳಾಗಿ ಪರಿವರ್ತನೆಗೊಂಡವು. ಅರಣ್ಯ ಪ್ರದೇಶ ವಿಸ್ತಾರವಾಗಿ ಇದ್ದಕಡೆ ಆ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನರು ಇನ್ನೂ ಹಿಂದಕ್ಕೆ ಸರಿದರು. ಆದರೆ ಎಷ್ಟೋ ಕಡೆ ಅಂತಹ ಸಾಧ್ಯತೆಗಳಿಲ್ಲದೆ ವಾಣಿಜ್ಯ ಬೆಲೆಗಳನ್ನು ಬೆಳೆಯುವ ತೋಟಗಳಲ್ಲಿ ಕೀಲಿಯಾಗಿ ದುಡಿಯುವುದು ಅನಿವಾರ್ಯವಾಯಿತು.

ವಸಾಹತು ಸರಕಾರ ಹೋದ ನಂತರ ಬುಡಕಟ್ಟು ಜನರು ನೆಮ್ಮದಿಯಿಂದ ಬದುಕಬಹುದು ಎನ್ನುವ ಒಂದು ನಂಬಿಕೆ ಇತ್ತು. ಈ ನಂಬಿಕೆಯ ಹಿಂದೆ ಹಲವಾರು ಇತರ ನಂಬಿಕೆಗಳು ಕೆಲಸ ಮಾಡಿವೆ. ಉದಾಹರಣೆಗೆ ನಮ್ಮವರೆ ಸರಕಾರ ನಡೆಸುತ್ತಿದ್ದಾರೆ, ಜತೆಗೆ ಅವರಿಗೆ ನಮ್ಮದೇ ಬುಡಕಟ್ಟು ಜನರ ಸಮಸ್ಯೆಯ ಅರಿವಿದೆ, ಆದುದರಿಂದ ಅವರು ತಾಳುವ ನಿರ್ಧಾರಗಳು ಬುಡಕಟ್ಟು ಜನರ ಬದುಕಿಗೆ ವಿರುದ್ಧ ಇರುವುದಿಲ್ಲ ಇತ್ಯಾದಿಗಳು. ಆದರೆ ಸ್ವಾತಂತ್ರ್ಯ ನಂತರದ ಕೆಲವೇ ವರ್ಷಗಳಲ್ಲಿ ಆ ಊಹೆಗಳೆಲ್ಲಾ ಅಡಿಮೇಲು ಆದವು. ವಸಾಹತು ಸರಕಾರ ತನ್ನ ಬೊಕ್ಕಸ ತುಂಬಿಸಲು ಎಗ್ಗಿಲ್ಲದೆ ಅರಣ್ಯ ನಾಶಮಾಡಿದರೆ, ಸ್ವಾತಂತ್ರ್ಯನಂತರ ನಮ್ಮ ಸರಕಾರ ಅಭಿವೃದ್ಧಿ ಹೆಸರಿನಲ್ಲಿ ಅದೇ ಕೆಲಸವನ್ನು ಮಾಡಿತು. ರೈಲ್ವೆ ಹಳಿಗಳನ್ನು ಹಾಕುವುದು, ಡಿಫೆನ್ಸ್ ಉದ್ದೇಶಕ್ಕಾಗಿ, ಬೃಹತ್ ಅಣೆಕಟ್ಟೆಗಳಿಗಾಗಿ ಹೀಗೆ ಹತ್ತು ಹಲವು ಯೋಜನೆಗಳಿಗೆ ಸಾವಿರಾರು ಎಕರೆ ಅರಣ್ಯ ನಾಶವಾಯಿತು. ಅಷ್ಟು ಮಾತ್ರವಲ್ಲ ಆ ಅರಣ್ಯಗಳನ್ನು ನಂಬಿಕೊಂಡು ಬಂದ ಲಕ್ಷಾಂತರ ಬುಡಕಟ್ಟು ಜನರು ನೆಲೆ ಕಳೆದುಕೊಂಡರು. ಆ ರೀತಿ ನೆಲೆ ಕಳೆದುಕೊಂಡವರಲ್ಲಿ ಕೆಲವರು ಯೋಜನೆ ಮುಕ್ತಾಯದ ನಂತರ ಉದ್ಯೋಗ ಅರಸಿ ನಗರ ಪ್ರದೇಶಗಳಿಗೆ ವಲಸೆ ಹೋಗುವುದು ಮತ್ತು ಅಲ್ಲಿನ ಜೋಪಡಿ ಪಟ್ಟಿಗಳಲ್ಲಿ ನೆಲೆ ಕಾಣುವುದು ಸಾಮಾನ್ಯವಾಯಿತು. ಈ ಪರಿಯ ಆಧುನೀಕರಣ ಮತ್ತು ಅದರಿಂದ ಬುಡಕಟ್ಟು ಜನರನ್ನು ಈ ಕ್ರಮದ ಆಧುನೀಕರಣ ಪ್ರಕ್ರಿಯೆಯಿಂದ ದೂರ ಇರಿಸಬೇಕು. ಯಾಕೆಂದರೆ ಈ ಕ್ರಮದ ಆಧುನೀಕರಣ ಒಂದು ಕಡೆಯಿಂದ ಚಾರಿತ್ರಿಕವಾಗಿ ರೂಪುಗೊಂಡ ಅವರ ಬದುಕನ್ನು ಕಿತ್ತುಕೊಂಡರೆ ಮತ್ತೊಂದು ಕಡೆಯಿಂದ ಬದಲೀ ಬದುಕನ್ನು ಕೊಡಲು ಸಫಲವಾಗಿಲ್ಲ. ಆದುದರಿಂದ ಸರಕಾರ ಅವರ ಸುದ್ದಿಗೆ ಹೋಗದೆ ಅವರನ್ನು ಅವರ ಪಾರಂಪರಿಕ ಬದುಕಿಗೆ ಅನುಗುಣವಾಗಿ ಬದುಕಲು ಬಿಡಬೇಕು. ವಾರಿಯರ್ ಎಲ್ವಿನ್ ತರಹದ ಹಲವಾರು ಸಂಶೋಧಕರು, ಗಾಂಧೀಜಿಯವರ ಗ್ರಾಮೀಣ ಬದುಕಿನ ಸೂತ್ರಗಳಿಂದ ಪ್ರಭಾವಿತರಾದ ಸ್ವಯಂಸೇವಕರು, ಮುಂತಾದವರು ಈ ಬಗೆಯ ವಾದಗಳನ್ನು ಮುಂದಿಟ್ಟವರಲ್ಲಿ ಪ್ರಮುಖರು. ಇದಕ್ಕೆ ವಿರುದ್ಧವಾದ ಮತ್ತೊಂದು ವಾದ ಕುಡ ಇತ್ತು. ಅದು ಬುಡಕಟ್ಟು ಮುಖ್ಯವಾಹಿನಿಯೊಂದಿಗೆ ಸೇರಿಸಿಕೊಳ್ಳಬೇಕು. ಬುಡಕಟ್ಟು ಜನರ ಅಭಿವೃದ್ಧಿಗೆ ಪೂರಕವಾದ ಕಾರ್ಯಕ್ರಮಗಳನ್ನು ಸರಕಾರ ಹಮ್ಮಿಕೊಳ್ಳಬೇಕು ಎನ್ನುವ ವಾದವನ್ನು ಮುಂದಿಟ್ಟಿತು. ಇಂದು ಸರಕಾರದ ಬುಡಕಟ್ಟು ಅಭಿವೃದ್ಧಿಗೆ ಸಂಬಂಧಿಸಿದ ನೀತಿಗಳು ಈ ಎರಡೂ ವಾದಗಳಿಂದಲೂ ಪ್ರಭಾವಿತವಾಗಿವೆ.

ಕೆಲವೊಂದು ವಿಚಾರಗಳಲ್ಲಿ ಮತ್ತು ಕೆಲವೊಂದು ಪ್ರದೇಶಗಳಲ್ಲಿ ಸರಕಾರ ಬುಡಕಟ್ಟು ಜನರ ಪಾರಂಪರಿಕ ಹಕ್ಕುಗಳನ್ನು ಮನ್ನಿಸಿ ಅದಕ್ಕೆ ಅನುಗುಣವಾದ ನೀತಿಗಳನ್ನು ಜಾರಿಗೆ ತಂದಿದೆ. ಉದಾಹರಣೆಗೆ ನಾಗಾಲ್ಯಾಂಡ್, ಮಣಿಪುರ ಮುಂತಾದ ಕಡೆಗಳಲ್ಲಿ; ಸರಕಾರದ ರಕ್ಷಿತ ಅರಣ್ಯ ಕಾನೂನು ಶೇಕಡಾ ಹತ್ತರಷ್ಟು ಅರಣ್ಯ ಪ್ರದೇಶಗಳನ್ನು ಒಳಗೊಂಡಿಲ್ಲ. ಶೇಕಡಾ ತೊಂಬತ್ತರಷ್ಟು ಅರಣ್ಯ ಪ್ರದೇಶ ಬುಡಕಟ್ಟು ಜನರ ಸಮುದಾಯ ನೀತಿಗೆ ಅನುಸಾರ ನಿರ್ವಹನೆಗೊಳ್ಳುತ್ತದೆ. ಹಾಗೆಂದು ಇದೇ ನೀತಿ ಭಾರತದ ಎಲ್ಲ ಕಡೆ ಇದೆ ಎನ್ನಲು ಸಾಧ್ಯವಿಲ್ಲ. ಉದಾಹರಣೆಗೆ ಕರ್ನಾಟಕದ ಪಶ್ಚಿಮ ಘಟ್ಟಗಳಲ್ಲಿ ಹಲವಾರು ಬುಡಕಟ್ಟುಗಳು ಶತಮಾನಗಳಿಂದ ಇವೆ. ಅವು ಯಾವುವು ಕೂಡ ತಾವು ಶತಮಾನಗಳಿಂದ ಬದುಕುತ್ತಿರುವ ಅರಣ್ಯ ಪ್ರದೇಶದ ಮೇಲೆ ಯಾವುದೇ ಹಕ್ಕನ್ನು ಹೊಂದಿಲ್ಲ. ಕೆಲವು ಕಡೆ ಬುಡಕಟ್ಟು ಪಂಚಾಯತ್ ವ್ಯವಸ್ಥೆ ಕೆಲಸ ಮಾಡಲು ಪೂರಕವಾದ ವ್ಯವಸ್ಥೆ ಇದ್ದರೆ ಇನ್ನು ಕೆಲವು ಕಡೆ ಅವರುಗಳು ಮುಖ್ಯವಾಹಿನಿಯ ನ್ಯಾಯ ತೀರ್ಮಾನದ ವ್ಯವಸ್ಥೆಗೆ ತಮ್ಮನ್ನು ಒಪ್ಪಿಸಿಕೊಳ್ಳಬೇಕಾಗಿದೆ. ಹೀಗೆ ಭಾರತದ ಎಲ್ಲ ಬುಡಕಟ್ಟುಗಳಿಗೆ ಅನ್ವಯವಗುವ ಅಭಿವೃದ್ಧಿ ನೀತಿ ನಮ್ಮಲ್ಲಿ ಇಲ್ಲ. ಒಂದು ವಿಧದಲ್ಲಿ ಇದು ಸರಿ ಕೂಡ. ಯಾಕೆಂದರೆ ಭಾರತದ ವಿವಿಧ ಪ್ರದೇಶಗಳಲ್ಲಿರುವ ಬುಡಕಟ್ಟುಗಳು ಒಂದೇ ಅಲ್ಲ. ಅವರ ಆಚಾರ, ಜೀವನ ಕ್ರಮ, ಲೋಕ ದೃಷ್ಟಿ ಇತ್ಯಾದಿಗಳು ಭಿನ್ನ ಆಗಿವೆ. ಹಾಗಿರುವಾಗ ಅವರಿಗೆಲ್ಲಾ ಒಂದೇ ಅಭಿವೃದ್ಧಿ ನೀತಿ ಇರುವುದು ಬುಡಕಟ್ಟು ಅಭಿವೃದ್ಧಿ ನಿತಿಗೆ ಪೂರಕವಲ್ಲ. ಆದರೆ ನೀತಿಯಲ್ಲಿನ ಈ ವಿವಿಧತೆ ಬುಡಕಟ್ಟು ಜನರ ವಿವಿಧತೆಯನ್ನು ಮನಗಂಡು ಆಗಿದೆ ಎನ್ನುವಂತಿಲ್ಲ. ಯಾವ ಕಡೆ ಬುಡಕಟ್ಟು ಜನರು ಸಂಘಟಿತರಾಗಿ ತಮ್ಮ ಹಕ್ಕಿಗೆ ಹೋರಾಡಿದ್ದಾರೆ ಅಂತಹ ಕಡೆ ಅವರಿಗೆ ಮುಖ್ಯವಾಹಿನಿಯ ಹಿಡಿತದಿಂದ ತಕ್ಕಮಟ್ಟಿನ ಬಿಡುಗಡೆ ದೊರಕಿದೆ. ಪುನಃ ಈ ಹೋರಾಟ ನಡೆಯಬೇಕಾದರೆ ಸಂಖ್ಯಾಬಲ ಅಗತ್ಯ. ಹೆಚ್ಚು ಸಂಖ್ಯೆಯಲ್ಲಿ ಬುಡಕಟ್ಟು ಜನರು ಇರುವ ಉತ್ತರ ಭಾರತದಲ್ಲಿ ಈ ಕ್ರಮದ ಪ್ರತ್ಯೇಕತೆ ಸಾಧ್ಯವಾಗಿದೆ. ಆದರೆ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಹಲವಾರು ಬುಡಕಟ್ಟು ಜನರಿದ್ದಾರೆ. ಆದರೆ ಅವರ ಅಭಿವೃದ್ಧಿಗೆ ಪ್ರತ್ಯೇಕ ನೀತಿ ಇಲ್ಲ. ಲ್ಯಾಂಪ್ಸ್ (ಬುಡಕಟ್ಟು ಜನರ ಅರಣ್ಯ ಉತ್ಪನ್ನಗಳನ್ನು ಮಾರಲು ಅನುಕೂಲ ಮಾಡಿಕೊಂಡ ಸಹಕಾರಿ ಸಂಘ), ಆಶ್ರಮ ಶಾಲೆ(ಬುಡಕಟ್ಟು ಮಕ್ಕಳಿಗೆ ಮೀಸಲಿರುವ ವಸತಿ ಶಾಲೆ) ಇತ್ಯಾದಿ ಅಭಿವೃದ್ಧಿ ಕಾರ್ಯಕ್ರಮಗಳು ಮಾತ್ರ ಕರ್ನಾಟಕದಲ್ಲಿ ಇವೆ. ಅಂದರೆ ಬುಡಕಟ್ಟು ಅಭಿವೃದ್ಧಿ ಎನ್ನುವುದು ತುಂಬಾ ಸಂಕೀರ್ಣ ಸಮಸ್ಯೆಯಾಗಿ ನಮ್ಮ ಮುಂದೆ ಇದೆ. ಅವರನ್ನು ಉದ್ಧಾರ ಮಾಡುವ ಕಾರ್ಯಕ್ರಮಗಳು ನಿಜವಾಗಿ ಅವರನ್ನು ಉದ್ಧಾರ ಮಾಡುತ್ತಿಲ್ಲ, ಬದಲಿಗೆ ಶೋಷಣೆ ಮಾಡುತ್ತಿವೆ. ಜತೆಗೆ ಚಾರಿತ್ರಿಕವಾಗಿ ಅವರು ರೂಢಿಸಿಕೊಂಡು ಬಂದ ಬದುಕಿಗೆ ಅನುಗುಣವಾಗಿ ಬದುಕಲು ಅಸಾಧ್ಯವಾದ ಸ್ಥಿತಿ ನಿರ್ಮಾಣವಾಗಿದೆ.

ಇವೆಲ್ಲ ಅರ್ಥವಾಗಬೇಕಾದರೆ ದೊಡ್ಡ ಸಂಶೋಧನೆಯ ಅಗತ್ಯವಿಲ್ಲ. ಬುಡಕಟ್ಟು ಜನರ ಬದುಕು ತುಂಬಾ ಹದಗೆಟ್ಟಿದೆ. ಅದು ಮೇಲ್ನೋಟಕ್ಕೆ ಕಾಣುವಷ್ಟು ಪ್ರಖರವಾಗಿದೆ. ಈಗ ನಮ್ಮ ಮುಂದಿರುವ ಪ್ರಶ್ನೆ ಯಾಕೆ ಹೀಗಾಯಿತು ಎನ್ನುವುದು ಒಂದಾದರೆ ಇದರಿಂದ ಹೇಗೆ ಬಿಡುಗಡೆ ಎನ್ನುವುದು ಮತ್ತೊಂದು. ಮೊದಲಿಗೆ ಯಾಕೆ ಹೀಗಾಯಿತು

ಎನ್ನುವರತ್ತ ಗಮನ ಹರಿಸುವ. ಅಭಿವೃದ್ಧಿ ಮಾಡುವ ಉದ್ದೇಶದಿಂದ ಇರುವ ನೀತಿಗಳು ಕೂಡ ಅವರನ್ನು ಉದ್ಧಾರ ಮಾಡಿಲ್ಲ ಎಂದರೆ ಎರಡು ಸಾಧ್ಯತೆಗಳಿವೆ. ಒಂದು ನೀತಿಯಲ್ಲೇ ದೋಷ ಇರುವುದು ಎರಡು, ನೀತಿ ಸರಿ ಇದ್ದು ಅದರ ಅನುಷ್ಠಾನದಲ್ಲಿ ಕೊರತೆ ಇರುವುದು. ಮೊದಲಿನ ಸಂದೇಹ ಪರಿಹಾರಕ್ಕೆ ನಮ್ಮ ಅಭಿವೃದ್ಧಿ ಪರಿಕಲ್ಪನೆ ಮತ್ತು ಅದರ ಹಿಂದಿರುವ ತಾತ್ವಿಕ ವಿಚಾರಗಳ ಕಿರು ಪರಿಚಯ ಅಗತ್ಯ. ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯೊಂದಿಗೆ ಪಶ್ಚಿಮದ ದೇಶಗಳು ಆಧುನೀಕರಣ ಗೊಂಡವು ಅಥವಾ ಅಭಿವೃದ್ಧಿ ಹೊಂದಿದವು. ಆ ಕಾರಣದಿಂದಲೇ ಆಧುನಿಕ ತಂತ್ರಜ್ಞಾನಗಳನ್ನು ಯಾವುದೇ ಸಾಮಾಜಿಕ ಪರಿಸರದಲ್ಲಿ ಅಳವಡಿಸುವ ಮೂಲಕ ಆ ಸಮಾಜಗಳನ್ನು ಮೂಲಭೂತವಾಗಿ ಪರಿವರ್ತಿಸಬಹುದು ಅಥವಾ ಈಗಾಗಲೇ ಆ ದಾರಿಯನ್ನು ತುಳಿದು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಪಡಿಯಚ್ಚು ಆಗಬಹುದು ಎನ್ನುವ ಗ್ರಹಿಕೆ ಆಧುನೀಕರಣ ಚಿಂತನೆಯಲ್ಲಿ ಕೆಲಸ ಮಾಡಿದೆ. ಈ ಕಾರಣಕ್ಕಾಗಿಯೇ ಪ್ರಪಂಚದ ಬಹುತೇಕ ರಾಷ್ಟ್ರಗಳು ಈ ಬಗೆಯ ಆಧುನೀಕರಣಕ್ಕೆ ತಮ್ಮನ್ನು ತಾವೇ ಒಡ್ಡಿಕೊಂಡಿವೆ. ಆದರೆ ಈ ಬಗೆಯ ಆಧುನೀಕರಣದ ಹಿಂದಿರುವ ಒಂದು ಮೂಲಭೂತ ಗುಣದ ಬಗ್ಗೆ ಯಾರು ವಿಶೇಷ ತಲೆಕೆಡಿಸಿಕೊಳ್ಳಲಿಲ್ಲ. ಅದೇನೆಂದರೆ ಏನನ್ನು ನಾವು ಆಧುನೀಕರಣವೆಂದು ಮತ್ತು ನಮ್ಮನ್ನು ಉದ್ಧಾರ ಮಾಡುವ ಮಾರ್ಗವೆಂದು ತುಂಬಾ ನಂಬಿಕೆಯಿಂದ ಅಪ್ಪಿಕೊಂಡೆವೋ ಅದು ಅಂತರ್‌ಗತದಲ್ಲಿ ಬಂಡವಾಳಶಾಹಿ ವ್ಯವಸ್ಥೆಯೇ ಆಗಿತ್ತು. ಆದುದರಿಂದ ಆಧುನೀಕರಣ ಅಥವಾ ಅಭಿವೃದ್ಧಿ ಎಂದರೆ ನಿಸ್ಸಂದೇಹವಾಗಿ ಬಂಡವಾಳದ ವಿಸ್ತರಣೆಯೇ ಆಗಿದೆ. ಈ ಕ್ರಮದ ಅಭಿವೃದ್ಧಿ ಮಾರುಕಟ್ಟೆ, ಲಾಭ, ಇತ್ಯಾದಿ ಬಂಡವಾಳಶಾಹಿ ವ್ಯವಸ್ಥೆಯ ಅಂಶಗಳಿಗೆ ಮಹತ್ವ ಕೊಡುತ್ತಿದೆ. ಇಲ್ಲಿ ಮಹತ್ವ ತಾಂತ್ರಿಕ ಪರಿಣಿತರಿಗೆ. ಸಾಂಪ್ರದಾಯಿಕ ಸಮಾಜವನ್ನು ಆಧುನೀಕಗೊಳಿಸುವುದು ಅಥವಾ ಬಂಡವಾಳಶಾಹಿಗೊಳಿಸುವುದೇ ಇವರ ಮುಖ್ಯ ಗುರಿ. ಅದಕ್ಕಾಗಿ ಆಧುನಿಕವಲ್ಲದ ಪ್ರತಿಯೊಂದು ನಿರುಪಯೋಗಿ ಮತ್ತು ಆದಷ್ಟು ಬೇಗ ನಾಶ ಹೊಂದಬೇಕಾಗಿರುವುದು ಎನ್ನುವ ನಂಬಿಕೆ ಇವರಿಗಿದೆ. ಇಂತಹ ಆಧುನೀಕರಣಕ್ಕೆ ನಿಜವಾಗಿಯೂ ಮಾನವ ನಿರ್ಮಿತ ಬಂಧನಗಳಿಂದ ಬಿಡಿಸುವ ಶಕ್ತಿಯಿಲ್ಲ. ಯಾಕೆಂದರೆ ಇದು ಅಂತರ್‌ಗತವಾಗಿಯೂ ಮೇಲು, ಕೀಳು, ಹಿಂದುಳಿದ, ಮುಂದುವರಿದ ಇತ್ಯಾದಿ ವಿಂಗಡನೆಗಳನ್ನು ಒಳಗೊಂಡಿದೆ. ನಾನು ಮತ್ತು ಇತರರು, ವ್ಯಕ್ತಿ ಮತ್ತು ವಸ್ತು, ಬರಹ ಮತ್ತು ಮಾತು, ಆಧುನಿಕ ಮತ್ತು ಸಂಪ್ರದಾಯ, ಸತ್ಯ ಮತ್ತು ಭ್ರಮೆ ಇತ್ಯಾದಿ ವಿರೋಧಭಾಸಗಳು ಎನ್‌ಲೈಟನ್ ಮೆಂಟ್‌ನ ಕೂಸಾದ ಆಧುನೀಕರಣದ ಭಾಗಗಳೇ. ಇದರಲ್ಲಿ ಪ್ರಥಮ ಭಾಗ ಸರಿ, ಪ್ರಗತಿಪರ, ವಿಶೇಷ ಎನ್ನುವ ಅರ್ಥವನ್ನು ಕೊಡುತ್ತವೆ. ಆದುದರಿಂದ ಅವು ಉಳಿಯ ಬೇಕು ಮತ್ತು ಬೆಳೆಯಬೇಕು. ಇದಕ್ಕೆ ವಿರುದ್ಧವಾದ ಅರ್ಥವನ್ನು ಎರಡನೇ ಭಾಗ ಕೊಡುತ್ತದೆ. ಆದುದರಿಂದ ಅದಕ್ಕೆ ಉಳಿಯುವ ಮತ್ತು ಬೆಳೆಯುವ ಹಕ್ಕಿಲ್ಲ. ಹೀಗೆ ಕೆಲವರ್ಗವನ್ನು ಮತ್ತು ಪ್ರಕೃತಿಯನ್ನು ಶೋಷಿಸುವ ಗುಣ ಆಧುನೀಕರಣದಲ್ಲಿ ಅಂತರ್‌ಗತವಾಗಿಯೇ ಇದೆ ಎಂದು ಆಧುನಿಕೋತ್ತರ ಮತ್ತು ಚಿಂತಕರು ವಾದಿಸುತ್ತಾರೆ.

ಇಂತಹ ಆಧುನೀಕರಣದಲ್ಲಿ ವ್ಯಕ್ತಿ ಮತ್ತು ಒಟ್ಟು ಪರಿಸರದ ನಡುವಿನ ಸಂಬಂಧ ತುಂಬಾ ಸೀಮಿತವಾಗಿದೆ. ಯಾಕೆಂದರೆ ಆಧುನೀಕರಣ ಅಮೂರ್ತ ಸ್ವರೂಪದ

ವ್ಯಕ್ತಿಯನ್ನು ರೂಪಿಸಿದೆ. ಅಮೂರ್ತ ಸ್ವರೂಪದ ವ್ಯಕ್ತಿ ಇತರರೊಂದಿಗೆ ಕೇವಲ ಒಪ್ಪಂದ ಆಧಾರಿತ ಸಂಬಂಧ ಇಟ್ಟುಕೊಳ್ಳುತ್ತಾನೆ. ಆ ಸಂಬಂಧ ಕೂಡ ತನ್ನ ವೈಯಕ್ತಿಕ ಲಾಭ ನಷ್ಟಗಳ ಲೆಕ್ಕಚಾರದಲ್ಲಿ ನಡೆಯುತ್ತದೆ. ಇದರಿಂದ ಸಾಮುದಾಯಿಕ ಬದುಕೇ ನಾಶವಾಗುತ್ತಿದೆ. ಆದರೆ ಈ ಅಮೂರ್ತ ವ್ಯಕ್ತಿಯ ಕಲ್ಪನೆ ಅಚಾರಿತ್ರಿಕವಾದುದು. ಯಾಕೆಂದರೆ ವ್ಯಕ್ತಿ ಕೇವಲ ಲಾಭ ನಷ್ಟಗಳನ್ನು ಲೆಕ್ಕಚಾರ ಹಾಕುವ ಪ್ರಾಣಿಯಲ್ಲ, ಆತ ಯಾವುದೋ ಕುಟುಂಬಕ್ಕೆ, ಜಾತಿಗೆ, ಧರ್ಮಕ್ಕೆ ಸೇರಿದವನು. ಅವುಗಳು ವ್ಯಕ್ತಿ ಬದುಕುವ ಪರಿಸರದ ಮೌಲ್ಯ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಹುಟ್ಟಿನಿಂದ ಸಾವಿನ ತನಕ ವ್ಯಕ್ತಿಯ ಅರಿವನ್ನು ರೂಪಿಸುವ ಕೆಲಸವನ್ನು ಅವು ಮಾಡುತ್ತವೆ. ಇತ್ಯಾದಿ ನಂಬಿಕೆಗಳನ್ನು ಸಮುದಾಯವಾದಿಗಳು ಮುಂದಿಡುತ್ತಾರೆ. ಆದರೆ ವಾಸ್ತವ ಬೇರೆ ಕತೆ ಹೇಳುತ್ತಿದೆ. ಅಂತಹ ಸಾಂಪ್ರದಾಯಿಕ ಚೌಕಟ್ಟುಗಳ ಹಿಡಿತ ವ್ಯಕ್ತಿವಾದಕ್ಕೆ ಮಹತ್ವ ಕೊಡುವ ತಾಂತ್ರಿಕ ಆಧುನೀಕರಣದಿಂದ ಸಡಿಲಗೊಂಡಿದೆ. ಇದರಿಂದಾಗಿ ಸಮುದಾಯ ಬದುಕು ನಶಿಸಿದೆ. ಜತೆಗೆ ಸಮುದಾಯ ಮೌಲ್ಯಗಳು ಕೂಡ ಇಂದು ಕೆಲಸ ಮಾಡುತ್ತಿಲ್ಲ ಎನ್ನುವ ಅಪವಾದ ಇದೆ. ಹೀಗೆ ನಮ್ಮ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಇದ್ದ ಅಥವಾ ಇತ್ತು ಎನ್ನಲಾದ ಅನುಕಂಪ, ಪರರ ಸಂಕಷ್ಟಕ್ಕೆ ಸ್ಪಂದಿಸುವ ಗುಣ, ಸಂಘ ಜೀವನ ಮೌಲ್ಯಗಳು ಇತ್ಯಾದಿಗಳು ನೆಲೆ ಕಳೆದುಕೊಳ್ಳುತ್ತಿವೆ. ಅದಕ್ಕೆ ಬದಲು ಆಧುನಿಕ ಸಮಾಜದ ಮೌಲ್ಯಗಳು (ಸಮಾನತೆ, ಪ್ರಜಾಪ್ರಭುತ್ವ, ಪಾರದರ್ಶಕತೆ, ಇತ್ಯಾದಿಗಳು) ಸಮಾಜದಲ್ಲಿ ನೆಲೆಗೊಂಡಿಲ್ಲ. ಮನುಷ್ಯತ್ವ ಕಳಕೊಂಡು ತಮ್ಮ ಲಾಭಕ್ಕಾಗಿ ಏನನ್ನೂ ಮಾಡಲು ಹೇಸದ ಜನರ ಗುಂಪುಗಳು ಮಾತ್ರ ವರ್ತಮಾನದಲ್ಲಿ ತುಂಬಾ ಪ್ರಖರವಾಗಿ ಕಾಣುತ್ತಿರುವುದು ಎಂದು ಸಮುದಾಯವಾದಿಗಳು ವಾದಿಸುತ್ತಾರೆ. ಇವರ ವಾದಗಳನ್ನು ಯಥಾ ರೀತಿಯಲ್ಲಿ ಒಪ್ಪದಿದ್ದರೂ ಅದರಲ್ಲಿ ಸಾಕಷ್ಟು ಸತ್ಯ ಇದೆ ಎನ್ನುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಬುಡಕಟ್ಟುಗಳ ಸ್ಥಿತಿ ಯಾಕೆ ಹೀಗಾಯಿತು ಎನ್ನುವುದನ್ನು ಮೇಲಿನ ವಾದಗಳು ತಕ್ಕಮಟ್ಟಿಗೆ ವಿವರಿಸುತ್ತವೆ. ಬಂಡವಾಳ ಸಂಗ್ರಹಕ್ಕೆ ಒತ್ತು ಕೊಡುವ ಅಭಿವೃದ್ಧಿ ನೀತಿ. ಅದರಲ್ಲಿ ಮಾರುಕಟ್ಟೆ ಮತ್ತು ಅದಕ್ಕೆ ಸಂಬಂಧಿಸಿದ ಮೌಲ್ಯಗಳು ಮುಖ್ಯವಾಹಿನಿಯ ಮೌಲ್ಯಗಳಾದವು. ವಿವಿಧ ರೂಪದಲ್ಲಿ ಸಂಪತ್ತಿನ ಸಂಗ್ರಹ (ಹಣ, ಭೂಮಿ, ಕಾರು, ಬಂಗ್ಲೆ, ಟೀವಿ, ಫ್ರಿಡ್ಜ್ ಇತ್ಯಾದಿಗಳು) ಮುಖ್ಯವಾಹಿನಿ ಜನರ ಸುಖದ ಕಲ್ಪನೆಗಳಾದವು. ಗುರಿಯಷ್ಟೇ ಮುಖ್ಯ ಅದನ್ನು ಸಾಧಿಸುವ ಮಾರ್ಗ ಕೂಡ ಮುಖ್ಯ ಎನ್ನುವ ಗಾಂಧೀಜಿ ಮಾತುಗಳನ್ನು ನಮ್ಮವರು ಧಿಕ್ಕರಿಸಿದರು. ಯಾವುದೋ ಬಗೆಯಲ್ಲಿ ತಮ್ಮ ಕಲ್ಪನೆಯ ಸುಖವನ್ನು ಪಡೆಯುವುದು ಮಾತ್ರ ಇಲ್ಲಿ ಮುಖ್ಯವಾಯಿತು. ಇದಕ್ಕಾಗಿ ನಮ್ಮ ಜನರನ್ನೇ ಶೋಷಣೆ ಮಾಡುವುದು, ಮೋಸ ಮಾಡುವುದು, ಇವು ಯಾವುವು ನಮ್ಮ ಮುಖ್ಯವಾಹಿನಿಗೆ ಅನೈತಿಕ ಅನ್ನಿಸಲಿಲ್ಲ.

ಇನ್ನು ಎರಡನೇ ವಿಚಾರದತ್ತ ಗಮನ ಹರಿಸುವ ಬುಡಕಟ್ಟು ಜನರು ಉದ್ಧಾರವಾಗಬೇಕಾದರೆ ಪ್ರತ್ಯೇಕವಾಗಿ ಉಳಿಯಬೇಕು ಎನ್ನುವ ವಾದದ ಹಿಂದೆ ಒಂದು ಬಗೆಯ ಆದರ್ಶ ಸಮಾಜದ ಕಲ್ಪನೆ ಇದೆ. ಇಂತಹ ಆದರ್ಶ ವ್ಯವಸ್ಥೆ ಮುಖ್ಯವಾಹಿನಿಯ ಜೊತೆ ಸೇರುವುದರಿಂದ ಎಲ್ಲಿ ಕಲುಷಿತಗೊಳ್ಳುತ್ತದೋ ಎನ್ನುವ ಭಯ ಇದೆ. ಈ ಎರಡೂ

ಆದರ್ಶ ಸಮಾಜದ ಇರುವಿಕೆ ಮತ್ತು ಅದರ ಕಲುಷಿತಗೊಳ್ಳುವಿಕೆ–ಎಷ್ಟು ಸರಿ? ಮೊದಲಿಗೆ ಬುಡಕಟ್ಟು ಜನರ ಸಾಮಾಜಿಕ/ಆರ್ಥಿಕ/ರಾಜಕೀಯ ಬದುಕು ಉತ್ತಮವಾಗಿದೆ ಎನ್ನುವ ತೀರ್ಮಾನಕ್ಕೆ ಹೇಗೆ ಬರುತ್ತೇವೆ ಎನ್ನುವುದರತ್ತ ಗಮನ ಹರಿಸುವ. ಬುಡಕಟ್ಟು ಜನರ ಬದುಕನ್ನು ಆಧುನಿಕ ಬದುಕಿಗೆ ಹೋಲಿಸಿ ನಾವು ಬುಡಕಟ್ಟು ಜನರ ಬದುಕು ಉತ್ತಮವಾಗಿತ್ತು ಎನ್ನುವ ತೀರ್ಮಾನಕ್ಕೆ ಬರುತ್ತೇವೆ. ಆದರೆ ಇದು ಎಷ್ಟು ಸರಿ? ಸಂಶೋಧನೆಯ ವಿಧಾನದ ದೃಷ್ಟಿಯಿಂದ ಇಲ್ಲೊಂದು ಮೂಲಭೂತ ಲೋಪ ಇದೆ. ಒಂದೇ ಕೆಟಗರಿಗೆ ಸೇರಿದ ಸಂಗತಿಗಳನ್ನು ಹೋಲಿಸಿ ಮೌಲ್ಯ ನಿರ್ಧಾರ ಮಾಡಬಹುದು. ಸಂಪೂರ್ಣವಾಗಿ ಭಿನ್ನ ಕೆಟಗರಿಗೆ ಸೇರಿದ ಸಂಗತಿಗಳನ್ನು ಹೋಲಿಸಿ ಮೌಲ್ಯ ನಿರ್ಧಾರ ಮಾಡಲಾಗುವುದಿಲ್ಲ. ಹೆಚ್ಚೆಂದರೆ ಒಂದು ಮತ್ತೊಂದಕ್ಕಿಂತ ಎಷ್ಟು ಭಿನ್ನ ಎಂದು ತೋರಿಸಬಹುದು. ಯಾವುದೋ ಜಾತಿಗೆ ಸೇರಿದ ಮಾವಿನ ಹಣ್ಣೊಂದು ಒಳ್ಳೆಯದೆ ಅಥವಾ ಕೆಟ್ಟದಿದೆ ಎನ್ನುವ ತೀರ್ಮಾನಕ್ಕೆ ಬರುವುದು ಹೇಗೆ? ಆ ಮಾವಿನ ಹಣ್ಣನ್ನು ಮತ್ತೊಂದು ಜಾತಿಯ ಮಾವಿನ ಹಣ್ಣಿನೊಂದಿಗೆ ಹೋಲಿಸಿ. ಮಾವಿನ ಹಣ್ಣನ್ನು ಸೇಬಿನೊಂದಿಗೆ ಹೋಲಿಸಿ ಮಾವಿನ ಹಣ್ಣು ಒಳ್ಳೆದಿದೆ ಅಥವಾ ಕೆಟ್ಟದಿದೆ ಎನ್ನುವ ತೀರ್ಮಾನಕ್ಕೆ ಬರುವುದು ಅಷ್ಟೊಂದು ಸರಿಯಾದ ವಿಧಾನವಲ್ಲ. ಅದೇ ರೀತಿ ಬುಡಕಟ್ಟು ಸಮುದಾಯವೊಂದರ ಸಾಮಾಜಿಕ ವ್ಯವಸ್ಥೆ ಒಳ್ಳೆಯದಿದೆ ಎನ್ನುವ ತೀರ್ಮಾನಕ್ಕೆ ಬರಲು ನಾವು ಅದನ್ನು ಮತ್ತೊಂದು ಬುಡಕಟ್ಟು ಸಮುದಾಯದ ಸಾಮಾಜಿಕ ವ್ಯವಸ್ಥೆಗೆ ಹೋಲಿಸಿ ತೀರ್ಮಾನಕ್ಕೆ ಬರಬೇಕು. ಅದು ಬಿಟ್ಟು ಬುಡಕಟ್ಟನ್ನು ಆಧುನಿಕ ವ್ಯವಸಾಯದೊಂದಿಗೆ ಹೋಲಿಸಿ ತೀರ್ಮಾನಕ್ಕೆ ಬರಲು ಸಾಧ್ಯ ಇಲ್ಲ. ಇದರಿಂದಾಗಿ ಬುಡಕಟ್ಟು ಸಾಮಾಜಿಕ ವ್ಯವಸ್ಥೆಯ ಒಳಗಿನ ವೈರುದ್ಯಗಳ ಮೇಲೆ ಬೆಳಕು ಚೆಲ್ಲಲು ಸಾಧ್ಯವಾಗುವುದಿಲ್ಲ. ಇತರ ಸಮುದಾಯಗಳಂತೆ ಬುಡಕಟ್ಟು ಸಮುದಾಯಗೊಳಗೂ ಏಣಿಶ್ರೇಣಿಗಳಿವೆ ಎನ್ನುವುದು ರ್‍ಯಾಡ್‌ಕ್ಲಿಫ್ ಬ್ರೌನ್ ಸಂಶೋಧನೆಯಿಂದ ಸಾಧಿತವಾಗಿದೆ. ಯಾಕೆಂದರೆ ಬುಡಕಟ್ಟುಗಳನ್ನು ಅಧ್ಯಯನ ಮಾಡಿಯೇ ಆತ ತನ್ನ ಸ್ಟ್ರಕ್ಚರಲ್ ಪಂಕ್ಷನಲಿಸಂ ವಿಧಾನವನ್ನು ಬಲಪಡಿಸಿಕೊಂಡಿರುವುದು. ಸ್ಟ್ರಕ್ಚರಲ್ ಪಂಕ್ಷನಲಿಸಂ, ಸಾಮಾಜಿಕ ವ್ಯವಸ್ಥೆಯನ್ನು ಮನುಷ್ಯ ದೇಹಕ್ಕೆ ಹೋಲಿಸುತ್ತದೆ. ಮಾನವ ದೇಹದಲ್ಲಿ ವಿವಿಧ ಅಂಗಗಳಿವೆ. ಪ್ರತಿಯೊಂದು ಅಂಗಕ್ಕೆ ಅದರದ್ದೇ ಆದ ಕ್ರಿಯೆಗಳಿವೆ. ಆ ಕ್ರಿಯೆಗಳನ್ನು ಅವುಗಳು ಮಾಡುವ ಮೂಲಕ ಸಾಮಾಜಿಕ ವ್ಯವಸ್ಥೆಯೊಂದು ಚಾಲನೆಯಲ್ಲಿ ಇರುತ್ತದೆ. ಒಂದು ಅಂಗದ ಕ್ರಿಯೆ ಮತ್ತೊಂದು ಅಂಗದ ಕ್ರಿಯೆಗೆ ಪೂರಕವಾಗಿರುತ್ತದೆ ಎನ್ನುವ ಗೃಹಿತಗಳು ಇವುಗಳ ಹಿಂದೆ ಇದೆ. ಈ ಮಾದರಿಯನ್ನು ಆತ ಜೀವ ಶಾಸ್ತ್ರದಿಂದಲೂ ಪಡೆದಿರಬಹುದು ಮತ್ತು ಆ ಮಾದರಿಯನ್ನು ಇಟ್ಟುಕೊಂಡು ಬುಡಕಟ್ಟುಗಳನ್ನು ಅಧ್ಯಯನ ಮಾಡಿರುವುದರಿಂದ ಬುಡಕಟ್ಟುಗಳಲ್ಲಿ ಏಣಿಶ್ರೇಣಿ ಎನ್ನುವ ತೀರ್ಮಾನಕ್ಕೆ ಬಂದಿರಬಹುದು ಎಂದು ಹೇಳಿ ಮೇಲಿನ ವಾದವನ್ನು ತಳ್ಳಿಹಾಕಬಹುದು. ಒಂದು ವೇಳೆ ಮಾದರಿಯದ್ದೇ ದೋಷ ಇದ್ದರೆ ಆ ಮಾದರಿಯನ್ನು ಬಲಪಡಿಸಕೊಂಡಿದ್ದಾನೆ. ಪ್ರತಿ ಬುಡಕಟ್ಟು ಸಮುದಾಯಕ್ಕೂ ಅದರದ್ದೇ ಆದ ಏಣಿಶ್ರೇಣಿಯ ಕಲ್ಪನೆ ಇದೆ ಎನ್ನುವುದು ಇತರ ಮಾನವಶಾಸ್ತ್ರಜ್ಞರ ಸಂಶೋಧನೆಗಳಿಂದಲೂ ತಿಳಿದು ಬರುತ್ತದೆ. ಜತೆಗೆ ಪ್ರತಿ ಸಮುದಾಯಕ್ಕೂ ಅದರದ್ದೇ

ಆದ ಸಂಪತ್ತಿನ ಕಲ್ಪನೆ, ಸೌಂದರ್ಯದ ಕಲ್ಪನೆ, ಮೇಲು ಕೀಳಿನ ಪ್ರಶ್ನೆಗಳು ಇವೆ. ಅವುಗಳ ಸರಿಯಾದ ಪರಿಚಯ ಆಗಬೇಕಾದರೆ ಒಂದು ಬುಡಕಟ್ಟು ಸಮುದಯವನ್ನು ಮತ್ತೊಂದು ಬುಡಕಟ್ಟು ಸಮುದಾಯದೊಂದಿಗೆ ಹೋಲಿಸಿ ನೋಡಬೇಕು.

ಪ್ರತಿ ಸಮುದಾಯಕ್ಕೂ ಅದರದ್ದೇ ಆದ ಭಾಷೆ, ಸಂಸ್ಕೃತಿ, ಜೀವನ ವಿಧಾನ, ಆಲೋಚನಾಕ್ರಮ, ಜೀವನ ಮೌಲ್ಯಗಳು ಇವೆ. ಪ್ರಪಂಚವನ್ನು ನೋಡುವ ದೃಷ್ಟಿಕೋನ, ಸುಖದ ಕಲ್ಪನೆ, ಇತ್ಯಾದಿಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನ. ಅವುಗಳನ್ನು ಅನುಭವಿಸಿದವರು ಮಾತ್ರ ಅರ್ಥಮಾಡಿಕೊಳ್ಳಲು ಸಾಧ್ಯ. ಸಮುದಾಯದಿಂದ ಹೊರಗಿನವರಿಗೆ ಅರ್ಥಮಾಡಿಕೊಳ್ಳಲು ಸಾಧ್ಯ ಇಲ್ಲ. ಯಾಕೆಂದರೆ ಅವರಿಗೆ ಆ ಬದುಕಿನ ಅನುಭವ ಇಲ್ಲ. ಹೀಗಿರುವಾಗ ಯಾವುದೇ ಯುನಿವರ್ಸಲ್ ಮಾದರಿ ಉಪಯೋಗಕ್ಕೆ ಬರುವುದಿಲ್ಲ ಎನ್ನುವುದು ಈ ತಾತ್ವಿಕ ದೃಷ್ಟಿಕೋನದಿಂದ ಒದಗುವ ತಾತ್ಪರ್ಯ. ಇದೊಂದು ಶಕ್ತಿಶಾಲಿಯಾದ ವಾದ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಇಲ್ಲಿ ಹಲವಾರು ದೋಷಗಳಿವೆ. ಒಂದು, ಯಾವುದೇ ಸಮುದಾಯ ಹಿಂದೆ ಅಥವಾ ಇಂದು ಸಂಪೂರ್ಣವಾಗಿ ಒಂದು ದ್ವೀಪದ ರೀತಿಯಲ್ಲಿ ಬದುಕಿಲ್ಲ. ಒಂದಲ್ಲ ಒಂದು ರೀತಿಯ ಸಂಬಂಧ ಸ್ವರೂಪದ ಬಗ್ಗೆ ತಕರಾರು ಇರಬಹುದು. ಆದರೆ ಸಂಬಂಧ ಇತ್ತು ಎನ್ನುವುದನ್ನು ಅಲ್ಲಗೆಳಯಲು ಸಾಧ್ಯ ಇಲ್ಲ. ಸಂಬಂಧ ಇದೆ ಎಂದ ಕೂಡಲೇ ಏನು ಸಾಧಿತವಾಗುತ್ತದೆ ಎನ್ನುವುದು ನಂತರದ ಪ್ರಶ್ನೆ. ಇಂತಹ ಸಂಬಂಧಗಳು ಪ್ರತೀ ಸಮುದಾಯದ, ಜೀವನ ವಿಧಾನವನ್ನು, ಆಲೋಚನಾ ಕ್ರಮಗಳನ್ನು ಸುಖದ ಕಲ್ಪನೆಯನ್ನು ಪ್ರಭಾವಿಸುತ್ತವೆ. ಬುಡಕಟ್ಟುಗಳ ಉದಾಹರಣೆ ತೆಗೆದುಕೊಂಡರೆ ಹಿಂದಿನ ರೀತಿಯಲ್ಲಿ ಅರಣ್ಯ ಅವರ ಮೂಲಭೂತ ಅವಶ್ಯಕತೆಗಳನ್ನು ಪುರೈಸುತ್ತಿಲ್ಲ. ತಮ್ಮ ಮೂಲಭೂತ ಅವಶ್ಯಕತೆಗಳ ಪೂರೈಕೆಗೆ ಅವರು ಹೊರಗಿನ ಲೋಕದೊಂದಿಗೆ ಸಂಪರ್ಕ ಹೊಂದುವುದು ಅನಿವಾರ್ಯ. ಹೀಗೆ ಮತ್ತೊಂದು ಲೋಕದ ಸಂಪರ್ಕ ಬುಡಕಟ್ಟು ಸಮುದಾಯಗಳ ಬದುಕಿನ ಕ್ರಮಗಳನ್ನೇ ಬದಲಾಯಿಸುತ್ತದೆ. ಈ ಎಲ್ಲಾ ಬದಲಾವಣೆಗಳು ಆಗುವುದು ಆ ಸಮುದಾಯಗಳು ಬಯಸಿ ಅಲ್ಲದಿರಬಹುದು. ಆದರೆ ಆ ಸಮುದಾಯಗಳಿಗೆ ಪ್ರತ್ಯೇಕತೆ ಇರಬೇಕೆಂದು ಬಯಸಿದರೂ ಇರಲು ಸಾಧ್ಯವಿಲ್ಲದ ಸ್ಥಿತಿ ನಿರ್ಮಾಣವಾಗಿದೆ ಎನ್ನುವುದು ನಮಗೆ ತಿಳಿದ ವಿಚಾರ. ಅಂದರೆ ದ್ವೀಪದಂತೆ ಬದುಕಬೇಕೆಂಬ ಆಶೆ ಇದ್ದರೂ ಬದುಕಲು ಸಾಧ್ಯವಿಲ್ಲದ ರೀತಿಯಲ್ಲಿ ಸಮುದಾಯಗಳು ಇಂದು ಸಂಪರ್ಕ ಹೊಂದಿವೆ. ಆದುದರಿಂದ ಸಂಪೂರ್ಣವಾಗಿ ಬೇರೆ ಇದ್ದು ತನ್ನದೇ ಪ್ರತ್ಯೇಕ ಎನ್ನುವ ರೀತಿಯಲ್ಲಿ ಜೀವನ ಕ್ರಮಗಳನ್ನು ರೂಢಿಸಿಕೊಳ್ಳಲು ಒಂದು ಸಮುದಾಯ ಬಯಸಿದರೂ ಸಾಧ್ಯವಿಲ್ಲದ ಸ್ಥಿತಿ ನಿರ್ಮಾಣ ಆಗಿದೆ.

ಜೊತೆಗೆ ಪ್ರತಿ ಸಮುದಾಯ ಕೂಡ ಅದರದ್ದೇ ಆದ ಜೀವನ ಮೌಲ್ಯಗಳನ್ನು ರೂಢಿಸಿಕೊಂಡಿದೆ. ಪ್ರತೀ ಸಮುದಾಯಕ್ಕೆ ಅದರದ್ದೇ ಆದ ಒಳಿತಿನ ಕಲ್ಪನೆಗಳಿವೆ. ಆದರೆ ಅವುಗಳು ಅನ್ವಯವಾಗುವುದು ಆಯಾಯ ಸಮುದಾಯಕ್ಕೆ ಸೇರಿದ ಸದಸ್ಯರಿಗೆ ಮಾತ್ರ. ಉದಾಹರಣೆಗೆ ಈ ಸಮುದಾಯ ಕೇಂದ್ರಿತ ಒಳಿತಿನ ದೃಷ್ಟಿಯಿಂದ ನೋಡಿದಾಗ ವ್ಯಾಪಾರಿಯೊಬ್ಬನಿಗೆ ತನ್ನ ಸಮುದಾಯಕ್ಕೆ ಸೇರಿದವನಿಗೆ ಮೋಸ ಮಾಡುವುದು

ಅನೈತಿಕ ಆಗಬಹುದು. ಆದರೆ ವ್ಯಾಪಾರಿ ಸಮುದಾಯದಿಂದ ಹೊರಗಿನವರಿಗೆ ಮೋಸ ಮಾಡುವುದು ಅನೈತಿಕ ಆಗುವುದಿಲ್ಲ. ಅಂದರೆ ವ್ಯಾಪಾರಿಯೊಬ್ಬ ಅಥವಾ ಭೂಮಾಲಿಕನೊಬ್ಬ ಬುಡಕಟ್ಟು ಸಮುದಾಯದವರೊಂದಿಗೆ ವ್ಯವಹರಿಸುವಾಗ ತನ್ನ ಸಮುದಾಯದವರೊಂದಿಗೆ ವ್ಯವಹರಿಸುವಾಗ ಅನುಸರಿಸುವ ನೀತಿ ನಿಯಮಗಳನ್ನು ಅನುಸರಿಸದಿದ್ದರೆ ಅದು ಅನೈತಿಕ ಆಗುವುದಿಲ್ಲ. ಇದು ಒಂದು ಕಡೆಯಿಂದ ಬುಡಕಟ್ಟು ಜನರ ಚಿಂತಾಜನಕ ಸ್ಥಿತಿಗೆ ಆ ಸಮುದಾಯವನ್ನೇ ಜವಾಬ್ದಾರಿಯಿಂದ ಮುಖ್ಯವಾಹಿನಿಯನ್ನು ಅಥವಾ ಮೇಲು ವರ್ಗವನ್ನು ಪಾರು ಮಾಡುತ್ತದೆ. ಹೀಗೆ ಈ ಸಮುದಾಯ ಕೇಂದ್ರಿತ ಮೌಲ್ಯಗಳ ಒಟ್ಟು ಪರಿಣಾಮ ಬುಡಕಟ್ಟು ಸಮುದಾಯದ ಒಳಿತಿನ ಪರ ಇಲ್ಲ. ಹಾಗೆಂದು ಯಾರು ಕೂಡ ತನ್ನ ಬೆಕ್ಕಿನ ಬಿಡಾರ ಬೇರೆ ಎಂದು ಪ್ರತ್ಯೇಕವಾಗಿ ಬದುಕಲು ಸಾಧ್ಯವಿಲ್ಲದ ಸ್ಥಿತಿ ನಿರ್ಮಾಣ ಆಗಿದೆ. ಸಮುದಾಯಗಳು ಕಲೆತು ಬದುಕುವುದು ಇಂದಿನ ಅನಿವಾರ್ಯತೆ. ಇದರಿಂದ ಯಾರು ತಪ್ಪಿಸಿಕೊಂಡು ಬದಕಲು ಸಾಧ್ಯವಿಲ್ಲ. ಆದರೆ ಈ ರೀತಿಯ ಸಮುದಾಯ ಕೇಂದ್ರಿತ ಒಳಿತಿನ ಕಲ್ಪನೆಗಳು ಮತ್ತು ಮೌಲ್ಯಗಳು ಸಮುದಾಯಗಳು ಪರಸ್ಪರ ಕಲೆತು ವ್ಯವಹರಿಸುವಲ್ಲಿ ದೊಡ್ಡ ತೊಡಕಾಗಿವೆ.

ಬುಡಕಟ್ಟು ಸಮುದಾಯದ ಜನರು ಉದ್ಧಾರವಾಗಬೇಕಾದರೆ ಪ್ರತ್ಯೇಕವಾಗಿ ಉಳಿಯಬೇಕು ಎನ್ನುವ ವಾದದ ಹಿಂದೆ ಒಂದು ಬಗೆಯ ಆದರ್ಶ ಸಮಾಜದ ಕಲ್ಪನೆ ಇದೆ ಮತ್ತು ಇಂತಹ ಆದರ್ಶ ವ್ಯವಸ್ಥೆ ಮುಖ್ಯವಾಹಿನಿಯ ಜತೆ ಸೇರುವುದರಿಂದ ಎಲ್ಲಿ ಕಲುಷಿತಗುಳ್ಳುತ್ತದೋ ಎನ್ನುವ ಭಯ ಇದೆ ಎಂದು ಮೇಲೆ ತಿಳಿಸಿದ್ದೆ. ಆಧುನಿಕ ಬದುಕಿಗೆ ಹೋಲಿಸಿ ಬರುವ ಬುಡಕಟ್ಟಿನ ಆದರ್ಶ ಸಮಾಜದ ಕಲ್ಪನೆ ಹೇಗೆ ಸರಿಯಲ್ಲ ಎಂದು ವಾದಿಸಿದ್ದೇನೆ. ಪ್ರಬಂಧದ ಈ ಭಾಗದಲ್ಲಿ ಪರಕೀಯ ಸಂಸ್ಕೃತಿಯ ಸಂಪರ್ಕದಿಂದ ಬುಡಕಟ್ಟು ಸಂಸ್ಕೃತಿ ಕಲುಷಿತಗೊಳ್ಳುವುದು ಎನ್ನುವ ವಾದ ಎಷ್ಟು ಸರಿ ಎಂದು ವಿಶ್ಲೇಷಿಸಿದ್ದೇನೆ. ಒಂದು ಕಾಲದಲ್ಲಿ ಅಂದರೆ ಆಧುನೀಕರಣದ ಆರಂಭದ ದಿನಗಳಲ್ಲಿ ಇದು ಕೇವಲ ಬುಡಕಟ್ಟು ಸಮುದಾಯಕ್ಕೆ ಅನ್ವಯವಾಗುವಂತೆ ಚರ್ಚೆ ಆಗುತ್ತಿತ್ತು. ಆದರೆ ಇಂದು ಎಲ್ಲ ಸಮುದಾಯಗಳಿಗೂ ಅನ್ವಯವಾಗುವಂತೆ ಚರ್ಚೆ ಆಗುತ್ತಿದೆ. ಆದುದರಿಂದ ಇಲ್ಲಿನ ಚರ್ಚೆ ಅನಿವಾರ್ಯವಾಗಿ ಇತರ ಸಮುದಾಯಗಳ ಸಂಸ್ಕೃತಿ ಕಲುಷಿತಗೊಳ್ಳುತ್ತದೆ ಅಥವಾ ನಾಶಗೊಳ್ಳುತ್ತದೆ ಎನ್ನುವ ಭಯಕ್ಕೂ ಅನ್ವಯವಾಗುತ್ತದೆ. ಆದರೆ ಈ ಭಯ ಎಷ್ಟು ಸರಿ? ವಸಾಹತು ಸಂದರ್ಭದಲ್ಲಿ ಇದೇ ರೀತಿ ಚರ್ಚೆ ಇತ್ತು. ಮುಖ್ಯವಾಗಿ ನಮ್ಮ ಸಮಾಜದ ಮೇಲು ವರ್ಗಕ್ಕೆ ಸೇರಿದವರು ಪರಕೀಯ ಸಂಪರ್ಕದಿಂದ ತಮ್ಮ ಸಮಾಜ/ಸಂಸ್ಕೃತಿ ಎಲ್ಲಿ ಕಲುಷಿತಗೊಳ್ಳುತ್ತದೋ ಎನ್ನುವ ಭಯವನ್ನು ವ್ಯಕ್ತ ಪಡಿಸಿದ್ದರು. ಆ ಸಮಸ್ಯೆ ಹೇಗೆ ಪರಿಹಾರ ಕಂಡಿತು ಎನ್ನುವುದನ್ನು ಪಾರ್ಥ ಚಟರ್ಜಿಯವರು ಬಂಗಾಳದ ಅನುಭವಗಳನ್ನು ಆಧರಿಸಿ ಈ ಕೆಳಗಿನಂತೆ ವಿವರಿಸಿದ್ದಾರೆ. ಬಂಗಾಳ ಯಾಕೆಂದರೆ ಬ್ರಿಟೀಷರು ತಮ್ಮ ವಸಾಹತು ಬದುಕಿನ ಆರಂಭದ ದಿನಗಳಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಬಂಗಾಳದಲ್ಲಿ ನೆಲೆಸಿದ್ದರು. ಬಂಗಾಳದ ಮೇಲುವರ್ಗಕ್ಕೆ ಎರಡು ರೀತಿಯ ಸಂಕಟ. ಒಂದು ಕಡೆ ಪರಕೀಯ ಸಂಸ್ಕೃತಿಯ ಯಜಮಾನಿಕೆ. ಮತ್ತೊಂದು ಕಡೆ ಪರಕೀಯ ಸಂಸ್ಕೃತಿ ಕೊಡಮಾಡುವ

ಕೆಲವೊಂದು ಸವಲತ್ತುಗಳು. ಅದರಲ್ಲೂ ಮುಖ್ಯವಾಗಿ ಇಂಗ್ಲೀಷ್ ಶಿಕ್ಷಣ ಮತ್ತು ಅದರಿಂದ ಸಾಧ್ಯವಾಗುವ ಬ್ರಿಟೀಷ್ ಕಚೇರಿಯ ಹುದ್ದೆಗಳು ಬೆಂಗಾಳಿ ಬಾಬುಗಳನ್ನು ತುಂಬಾ ಆಕರ್ಷಿಸಿದ್ದವು. ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಬೆಂಗಾಳಿ ಬಾಬುಗಳು ಎರಡು ಲೋಕಗಳನ್ನು ಸೃಷ್ಟಿಸಿ ಕೊಂಡರು. ಒಂದು ಖಾಸಗಿ ಲೋಕ ಅಥವಾ ಅಂತರಂಗ, ಇಲ್ಲಿ ತಲೆತಲಾಂತರದಿಂದ ರೂಢಿಸಿಕೊಂಡು ಬಂದ ತಮ್ಮ ಮೌಲ್ಯಗಳಿಗೆ ಅನುಗುಣವಾಗಿ ಬದುಕುವುದು. ಪೂಜೆ ಪುನಸ್ಕಾರಗಳು, ಕುಟುಂಬ ಸಂಬಂಧಗಳು, ನಂಬಿಕೆಗಳು, ಇತ್ಯಾದಿಗಳು ಇಲ್ಲಿ ತನ್ನ ಸಾಂಪ್ರದಾಯಿಕ ರೂಪದಲ್ಲಿ ಆಚರಣೆಗೆ ಬರಬಹುದು. ಇದು ಖಾಸಗಿ ಯಾಕೆಂದರೆ ಇದನ್ನು ಯಥಾ ರೀತಿಯಲ್ಲಿ ಅನುಭವಿಸಲು ಮನೆಯೊಳಗೆ ಅಥವಾ ತನ್ನ ಹತ್ತಿರದ ಸಂಬಂಧಿಗಳೊಂದಿಗೆ ಮಾತ್ರ ಸಾಧ್ಯ. ಮತ್ತೊಂದು ಸಾರ್ವಜನಿಕ ಲೋಕ ಅಥವಾ ಬಹಿರಂಗ. ಇದು ವಸಾಹತು ಸರಕಾರ ಕೊಡುವ ಸವಲತ್ತುಗಳನ್ನು ಉಪಯೋಗಿಸಲು ಸೃಷ್ಟಿಸಿದ ಲೋಕ. ಇಲ್ಲಿ ಇವರುಗಳು ಉತ್ತಮ ಇಂಗ್ಲೀಷ್ ಶಿಕ್ಷಣ ಪಡೆದು ವಸಾಹತು ಸರಕಾರದ ಹುದ್ದೆಗಳಲ್ಲಿ ಸೇರಿಕೊಂಡು ಸೇವೆ ಸಲ್ಲಿಸುವುದು, ಬ್ರಿಟೀಷ್ ವ್ಯಾಪಾರಿಗಳಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸುವುದು, ಇತ್ಯಾದಿಗಳು ಸೇರಿವೆ. ಈ ಸಾರ್ವಜನಿಕ ಲೋಕದಲ್ಲಿ ಬೆಂಗಾಳಿ ಬಾಬುಗಳು ದಿನ ನಿತ್ಯ ಬ್ರಿಟೀಷರ ಯಜಮಾನಿಕೆಯನ್ನು ಮತ್ತು ಅದರಿಂದ ಹುಟ್ಟುವ ಅವಮಾನಗಳನ್ನು ಅನುಭವಿಸಬೇಕಿತ್ತು. ಈ ಅವಮಾನಗಳಿಂದ ಬಿಡುಗಡೆಯನ್ನು ತಮ್ಮ ಖಾಸಗಿ ಲೋಕದಲ್ಲಿ ಪಡೆದುಕೊಳ್ಳುತ್ತಿದ್ದರು. ಹೀಗೆ ವಸಾಹತು ಸರಕಾರಕ್ಕೆ ಬೆಂಗಾಳಿ ಬಾಬುಗಳ ಸಂಸ್ಕೃತಿಯನ್ನು ನಾಶ ಮಾಡಲು ಸಾಧ್ಯವಾಗಿಲ್ಲ ಎಂದು ಪಾರ್ಥಚಟರ್ಜಿ ವಾದಿಸುತ್ತಾರೆ.

ಹೆಚ್ಚು ಕಡಿಮೆ ಇದೇ ರೀತಿಯ ವಾದವನ್ನು ಬುಡಕಟ್ಟು ಸಂಸ್ಕೃತಿಗೆ ಸಂಬಂಧಿಸಿದಂತೆ ಕರ್ನಾಟಕದ ಬುಡಕಟ್ಟು ಸಂಶೋಧಕರಲ್ಲಿ ಪ್ರಮುಖರೆಂದು ಗುರುತಿಸಿಕೊಳ್ಳುವ ಹಿ.ಚಿ.ಬೋರಲಿಂಗಯ್ಯನವರು ಮುಂದಿಡುತ್ತಾರೆ. ಇವರು ಪಾರ್ಥ ಚಟರ್ಜಿಯವರ ಖಾಸಗಿ ಮತ್ತು ಸಾರ್ವಜನಿಕ ಲೋಕಗಳ ಬದಲು ಪ್ರತಿ ಸಂಸ್ಕೃತಿಗೂ ಅದರದೇ ಆದ ಒಳ ತಿರುಳು ಮತ್ತು ಹೊರ ಪದರು ಇರುತ್ತದೆ ಎನ್ನುತ್ತಾರೆ. ಹೊರಗಿನ ಪೊರೆ ಪರಕೀಯ ಸಂಸ್ಕೃತಿಯಿಂದ ಬರುವ ಅಂಶಗಳನ್ನು ಪರಿಶೀಲಿಸುತ್ತದೆ. ಪರ ಸಂಸ್ಕೃತಿಯಿಂದ ಸ್ವೀಕರಿಸುವಾಗ ಅನಿವಾರ್ಯವಾದ ಸಂದರ್ಭದಲ್ಲಿ ಅದು ಕೆಲವೊಂದು ಅಂಶಗಳನ್ನು ಸ್ವೀಕರಿಸುತ್ತದೆ. ಹಾಗೆ ಸ್ವಿಕರಿಸುವಾಗ ಎರಡು ರೀತಿಯ ಪ್ರಕ್ರಿಯೆಗಳು ನಡೆಯುತ್ತವೆ. ಒಂದು, ಬುಡಕಟ್ಟು ಸಂಸ್ಕೃತಿ ತನ್ನ ಆಂತರಿಕ ತತ್ತ್ವಕ್ಕೆ ಅನುಗುಣವಾದ ಅಂಶಗಳನ್ನು ಮಾತ್ರ ಸ್ವೀಕರಿಸಲು ಪ್ರಯತ್ನಿಸುತ್ತದೆ. ಎರಡು, ಪರಕೀಯ ಸಂಸ್ಕೃತಿಯ ಅಂಶಗಳನ್ನು ಸ್ವೀಕರಿಸುವಾಗ ಅದನ್ನು ಅವುಗಳ ಮೂಲ ಸ್ವರೂಪದಲ್ಲಿ ಸ್ವೀಕರಿಸುವುದಿಲ್ಲ. ಬದಲಿಗೆ ತನ್ನ ಸಂಸ್ಕೃತಿಯ ತತ್ತ್ವಕ್ಕೆ ಅನುಗುಣವಾದ ರೂಪದಲ್ಲಿ ಸ್ವೀಕರಿಸುತ್ತದೆ. ಅಂದರೆ ಕೆಲವೊಂದು ಬಾರಿ ಬುಡಕಟ್ಟು ಸಂಸ್ಕೃತಿಗಳು ಪರ ಸಂಸ್ಕೃತಿಯ ಚೌಕಟ್ಟನ್ನು ಮಾತ್ರ ಸ್ವೀಕರಿಸಿ ಆ ಚೌಕಟ್ಟಿನೊಳಗೆ ತಮ್ಮದೇ ಸಂಸ್ಕೃತಿಯ ಅಂಶಗಳನ್ನು ಇಡಲು ಪ್ರಯತ್ನಿಸುತ್ತವೆ. ಇದಕ್ಕೆ ಅವರು ರಾಮಾಯಣದ ಉದಾಹರಣೆಯನ್ನು ಕೊಡುತ್ತಾರೆ. ಭಾರತದಲ್ಲಿ ಹಲವಾರು ರಾಮಾಯಣಗಳು ಚಾಲ್ತಿಯಲ್ಲಿವೆ. ಅವುಗಳು ಒಂದು ವಿಧದಲ್ಲಿ ಭಾರತದ ವಿವಿಧ ಸಮುದಾಯಗಳು ಮತ್ತು ಅವುಗಳು ಮುಖ್ಯವಾಹಿನಿಯೊಂದಿಗೆ

ಹೊಂದಿರುವ ಸಂಬಂಧವನ್ನು ಸೂಚಿಸುತ್ತವೆ. ಅಥವಾ ಮುಖ್ಯವಾಹಿನಿಯು ಪುರಾಣಗಳ ಮೂಲಕ ತನ್ನ ಮೌಲ್ಯಗಳನ್ನು ಅಂಚಿನಲ್ಲಿರುವ ಸಮುದಾಯಗಳ ಮೇಲೆ ಹೇಗೆ ಹೇರಲು ಪ್ರಯತ್ನಿಸುತ್ತವೆ ಎಂದು ಕೆಲವು ಉದಾಹರಣೆಗಳನ್ನು ಕೊಡುತ್ತಾರೆ. ಆದರೆ ಅಂಚಿನಲ್ಲಿರುವ ಸಮುದಾಯಗಳು ಮುಖ್ಯವಾಹಿನಿ ಮುಂದಿಡುವ ಪುರಾಣಗಳ ಚೌಕಟ್ಟನ್ನು ಮಾತ್ರ ತೆಗೆದುಕೊಂಡು ಅದರೊಳಗೆ ತಮ್ಮ ಸಂಸ್ಕೃತಿಯ ಕಥನಗಳನ್ನೇ ತುಂಬುತ್ತವೆ. ಉದಾಹರಣೆಗೆ ಗೊಂಡರ ರಾಮಾಯಣ. ಅದರಲ್ಲಿ ಬರುವ ರಾಮ ಅಥವಾ ಸೀತೆ ಅಥವಾ ಇತರ ಪಾತ್ರಗಳು ಮುಖ್ಯವಾಹಿನಿಯ ಪಾತ್ರಗಳಂತೆ ಹುಟ್ಟು ದೈವತ್ವ ಪಡೆದವರಲ್ಲ. ಅವರೆಲ್ಲ ತಮ್ಮ ದಿನ ನಿತ್ಯದ ಬದುಕಿನಲ್ಲಿ ಉಳಿದವರಂತೆ ಬದುಕಿ ದೈವತ್ವದತ್ತ ಚಲಿಸಿದವರು. ಹೀಗೆ ಹೊರಗಿನ ಸಂಪರ್ಕ ಒಂದು ಸಂಸ್ಕೃತಿಯನ್ನು ಮೂಲಭೂತವಾಗಿ ಬದಲಾಯಿಸುತ್ತದೆ ಎನ್ನುವುದು ಸರಿಯಲ್ಲ ಎಂದು ಬೋರಲಿಂಗಯ್ಯನವರು ವಾದಿಸುತ್ತಾರೆ. ಆದುದರಿಂದ ಪರಕೀಯ ಸಂಸ್ಕೃತಿಯ ಸಂಪರ್ಕದಿಂದ ಬುಡಕಟ್ಟು ಅಥವಾ ಮುಖ್ಯ ವಾಹಿನಿಯ ಸಂಸ್ಕೃತಿ ಕಲುಷಿತಗೊಳ್ಳುತ್ತದೆ ಎನ್ನುವುದು ಸರಿಯಲ್ಲ.

## ಬುಡಕಟ್ಟು ಸಮುದಾಯಗಳ ಅಭಿವೃದ್ಧಿಯಲ್ಲಿ ಪ್ರಚಲಿತದಲ್ಲಿರುವ ಯೋಜನೆಗಳು

### ಸ್ವರ್ಣ ಜಯಂತಿ ಗ್ರಾಮ ಸ್ವಉದ್ಯೋಗ ಯೋಜನೆ :

ಸ್ವರ್ಣ ಜಯಂತಿ (ಗ್ರಾಮ್ ಸ್ವರೋಜ್‌ಗಾರ್ ಯೋಜನೆ ಎಸ್‌ಜಿಎಸ್‌ವೈ) ಸ್ವರ್ಣ ಜಯಂತಿ ಗ್ರಾಮ ಸ್ವಉದ್ಯೋಗ ಯೋಜನೆಯು ಒಂದು ಸ್ವಉದ್ಯೋಗ ಯೋಜನೆಯಾಫಿದೆ. ಹಿಂದೆ ಜಾರಿಯಲ್ಲಿದ್ದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಅಥವಾ ಐಆರ್‌ಡಿಪಿ., ಸ್ವಉದ್ಯೋಗಕ್ಕಾಗಿ ಗ್ರಾಮೀಣ ಯುವಜನರ ತರಬೇತಿ ಅಥವಾ ಟ್ರೈಸಮ್ ಅಥವಾ ಟಿಆರ್‌ವೈಎಸ್‌ಇಎಮ್, ಗ್ರಾಮೀಣ ಭಾಗದ ಮಹಿಳೆ ಮತ್ತು ಶಿಶು ಅಭಿವೃದ್ಧಿ ಅಥವಾ ಡ್ವಕ್ರಾ ಅಥವಾ ಡಿಡಬ್ಲ್ಯೂಸಿಆರ್‌ಎ ಮತ್ತು ದಶಲಕ್ಷ ಬಾವಿ ಯೋಜನೆ ಅಥವಾ ಎಂಡಬ್ಲ್ಯೂಎಸ್‌ಗಳನ್ನು ೧೯೯೯ರ ಏಪ್ರಿಲ್ ಮಾಹೆಯಲ್ಲಿ ಒಂದುಗೂಡಿಸಿ ಸ್ವರ್ಣ ಜಯಂತಿ ಗ್ರಾಮ ಸ್ವಉದ್ಯೋಗ ಯೋಜನೆ ಅಥವಾ ಎಸ್‌ಜಿಎಸ್‌ವೈ ಎಂಬ ಯೋಜನೆಯನ್ನು ಈ ಕೆಳಗಿನ ಉದ್ದೇಶಗಳೊಂದಿಗೆ ಜಾರಿಗೊಳಿಸಲಾಗಿದೆ.

### ಉದ್ದೇಶಗಳು

೧. ಬಡತನ ನಿರ್ಮೂಲನೆಗೆ ಏಕ ರೀತಿಯ ಸಾಮಿಪ್ಯ ಮಾರ್ಗವನ್ನು ಅನುಸರಿಸುವುದು.

೨. ಸಾಂಘಿಕ ಸಾಲ ನೀಡಿಕೆಯ ಪ್ರಯೋಜನೆಗಳನ್ನು ಬಳಸಿಕೊಳ್ಳುವುದು.

೩. ಹಲವಾರು ಬಗೆಯ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದರಿಂದ ಉಂಟಾಗುವ ಸಮಸ್ಯೆಗಳನ್ನು ನಿವಾರಿಸುವುದು.

ಸ್ವರ್ಣ ಜಯಂತಿ ಗ್ರಾಮ ಸ್ವಉದ್ಯೋಗ ಯೋಜನೆಯನ್ನು ಗ್ರಾಮೀಣ ಬಡವರನ್ನು ಸ್ವಸಹಾಯ ಗುಂಪು ಅಥವಾ ಎಸ್‌ಹೆಚ್‌ಜಿಎಸ್‌ಗಳನ್ನಾಗಿ ಸಂಘಟಿಸುವ ಒಂದು ವಿಶಿಷ್ಟ ಯೋಜನೆ ಎಂಬುದಾಗಿ ಪರಿಗಣಿಸಲಾಗಿದೆ.

### ಜವಾಹರ್ ಗ್ರಾಮ ಸಮೃದ್ಧಿ ಯೋಜನೆ (ಜೆಜಿಎಸ್‌ವೈ) :

ಜವಾಹರ್ ಗ್ರಾಮ ಅಭಿವೃದ್ಧಿ ಯೋಜನೆಯು ಒಂದು ವೇತನ ಉದ್ಯೋಗ ಕಾರ್ಯಕ್ರಮವಾಗಿದೆ. ಇದನ್ನು ಹಿಂದಿನ ಜವಾಹರ್ ರೋಜ್‌ಗಾರ್ ಯೋಜನೆ ಅಥವಾ ಜೆ.ಆರ್.ವೈ. ಯೋಜನೆಯ ನೂತನ ಹೆಸರಾಗಿದ್ದು ಸಂಪೂರ್ಣ ಹೊಸ ರೂಪವನ್ನು ಪಡೆದಿರುವುದು. ಈ ಯೋಜನೆಯ ಉದ್ದೇಶಗಳು ಈ ಕೆಳಕಂಡಂತಿರುವುವು.

### ಉದ್ದೇಶಗಳು :

೧. ಗ್ರಾಮೀಣ ಬಡಜನರಿಗೆ ಸಂರಕ್ಷಿತ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಸಲುವಾಗಿ ಗ್ರಾಮೀಣ ಬೇಡಿಕೆ ಆಧಾರಿತ ಮೂಲ ಸೌಲಭ್ಯಗಳನ್ನು ನಿರ್ಮಿಸುವುದು ಮತ್ತು ಗ್ರಾಮ ಮಟ್ಟದಲ್ಲಿ ದೀರ್ಘಕಾಲಿಕ ಆಸ್ತಿಪಾಸ್ತಿಗಳನ್ನು ನಿರ್ಮಿಸುವುದು.
೨. ಗ್ರಾಮೀಣ ಭಾಗದ ನಿರುದ್ಯೋಗಿ ಬಡಜನರಿಗೆ ಹೆಚ್ಚುವರಿ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು.

ಈ ಯೋಜನೆಯಡಿ ವೇತನ ಆಧಾರಿತ ಉದ್ಯೋಗಗಳನ್ನು ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿರುವ ಕುಟುಂಬಗಳಿಗೆ ನೀಡಲಾಗುತ್ತದೆ. ಈ ಯೋಜನೆಯಲ್ಲಿ ಸಂಪನ್ಮೂಲಗಳ ವಲಯಾಧಾರಿತ ಹಂಚಿಕೆ ಇಲ್ಲವಾದರೂ ಸಹ, ವಾರ್ಷಿಕ ಹಂಚಿಕೆಯಲ್ಲಿ ಶೇ. ೨೨.೫ರಷ್ಟನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರೆಗೆ ಹಾಗೂ ಶೇ.೩ರಷ್ಟನ್ನು ಅಂಗವಿಕಲರಿಗೆ ವಿತರಣೆ ಮಾಡಬೇಕೆಂಬ ಷರತ್ತು ವಿಧಿಸಲಾಗುವುದು.

### ಉದ್ಯೋಗ ಭರವಸೆ ಯೋಜನೆ (ಎಂಪ್ಲಾಯ್‌ಮೆಂಟ್ ಅಶ್ಯೂರೆನ್ಸ್ ಸ್ಕೀಂ – ಇಎಎಸ್):

ಉದ್ಯೋಗ ಭರವಸೆ ಯೋಜನೆಯನ್ನು ಬರಗಾಲ ಪ್ರದೇಶ, ಮರುಭೂಮಿ ಪ್ರದೇಶ ಮತ್ತು ಗುಡ್ಡಗಾಡು ಪ್ರದೇಶಗಳ ೧೭೭೮ ಹಿಂದುಳಿದ ಕ್ಷೇತ್ರಗಳಲ್ಲಿ ೧೯೯೩ರ ಅಕ್ಟೋಬರ್ ಮಾಹೆಯಲ್ಲಿ ಜಾರಿಗೊಳಿಸಲಾಯಿತು.

ಈ ಯೋಜನೆಯು ಸಹ ಒಂದು ವೇತನ ಉದ್ಯೋಗ ಕಾರ್ಯಕ್ರಮವಾಗಿದ್ದು ಇದನ್ನು ೧೯೯೯ರ ಏಪ್ರಿಲ್‌ನಲ್ಲಿ ಒಂದು ನಿರ್ದಿಷ್ಟ ವಾರ್ಷಿಕ ಹಣಕಾಸು ಒದಗಿಸುವುದರ ಮೂಲಕ ಜಾರಿಗೆ ತರುವ ಒಂದು ವೇತನ ಉದ್ಯೋಗ ಕಾರ್ಯಕ್ರಮವನ್ನಾಗಿ ಪರಿಷ್ಕರಿಸಲಾಯಿತು. ಈ ಯೋಜನೆಯನ್ನು ಪ್ರಸ್ತುತವಾಗಿ ೫೪೪೮ ಗ್ರಾಮೀಣ ಬ್ಲಾಕ್‌ಗಳಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ.

ಈ ಯೋಜನೆಯ ಪ್ರಮುಖ ಉದ್ದೇಶವೆಂದರೆ, ವೇತನ ಆಧಾರಿತ ಉದ್ಯೋಗಗಳು ತೀವ್ರ ಕೊರತೆಯಿಂದ ಕೂಡಿರುವ ಸಂದರ್ಭದಲ್ಲಿ ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿರುವ ಗ್ರಾಮೀಣ ಬಡಜನರಿಗೆ ಶಾರೀರಿಕ ಶ್ರಮದ ಕೆಲಸದ ಮೂಲಕ ಹೆಚ್ಚುವರಿ ವೇತನ ಉದ್ಯೋಗಗಳನ್ನು ನೀಡುವುದೇ ಆಗಿರುವುದು.

ಈ ಯೋಜನೆಯ ಎರಡನೇ ಉದ್ದೇಶವೆಂದರೆ ಭವಿಷ್ಯದ ಉದ್ಯೋಗ ಮತ್ತು ಅಭಿವೃದ್ಧಿಯನ್ನು ಸಂರಕ್ಷಿಸುವಂತಹ ಸಾಮುದಾಯಿಕ, ಸಾಮಾಜಿಕ ಮತ್ತು ಆಸ್ತಿಪಾಸ್ತಿಗಳನ್ನು ನಿರ್ಮಿಸುವುದೇ ಆಗಿರುವುದು.

ಈ ಯೋಜನೆಯನ್ನು ಜಾರಿಗೊಳಿಸುವ ಜವಾಬ್ದಾರಿಯನ್ನು ಜಿಲ್ಲಾ ಪಂಚಾಯಿತಿಗಳಿಗೆ ವಹಿಸಲಾಗುವುದು.

ಈ ಯೋಜನೆಯನ್ನು ಅನುಷ್ಠಾನಗೊಳಿಸುವುದಕ್ಕಾಗಿ ಕೇಂದ್ರದ ಯೋಜನಾ ವೆಚ್ಚದಲ್ಲಿ ೧೯೯೮-೯೯ರಲ್ಲಿ ರೂ.೧೯೯೦ ಕೋಟಿ ಹಾಗೂ ೧೯೯೯-೨೦೦೦ರ ಸಾಲಿನಲ್ಲಿ ರೂ.೨೪೦೦ ಕೋಟಿ ಹಣವನ್ನು ಒದಗಿಸಲಾಗಿತ್ತು.

ಈ ಯೋಜನೆಯಡಿ ೧೯೯೮-೯೯ರಲ್ಲಿ ೪೧೬೫ ಲಕ್ಷ ಹಾಗೂ ೧೯೯೯–೨೦೦೦ರ ಸೆಪ್ಟಂಬರ್‌ವರೆಗೆ ೭೨೫ ಲಕ್ಷ ಮಾನವ ದಿನಗಳ ಉದ್ಯೋಗಾವಕಾಶಗಳನ್ನು ಸೃಷ್ಟಿಸಲಾಗಿತ್ತು.

**ಪ್ರಧಾನಮಂತ್ರಿ ರೋಜ್‌ಗಾರ್ ಯೋಜನೆ (ಪ್ರೈಮಿನಿಸ್ಟರ್ಸ್ ರೋಜ್‌ಗಾರ್ ಯೋಜನಾ – ಪಿಎಂಆರ್‌ವೈ) :**

ಪ್ರಧಾನ ಮಂತ್ರಿ ರೋಜ್‌ಗಾರ್ ಯೋಜನೆಯನ್ನು ನಗರ ಪ್ರದೇಶಗಳಲ್ಲಿ ೧೯೯೩-೯೪ರಲ್ಲಿ ಜಾರಿಗೊಳಿಸಲಾಯಿತು. ಅನಂತರ ಈ ಯೋಜನೆಯನ್ನು ೧೯೯೪-೯೫ರಲ್ಲಿ ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸಲಾಯಿತು.

ಈ ಯೋಜನೆಯು ಸುಶಿಕ್ಷಿತ ನಿರುದ್ಯೋಗಿಗಳಿಗೆ ಸ್ವಉದ್ಯೋಗ ಒದಗಿಸುವ ಗುರಿಯನ್ನು ಹೊಂದಿದೆ.

ಈ ಯೋಜನೆಯ ಮೂಲಕ ಎಂಟನೇ ಪಂಚವಾರ್ಷಿಕ ಯೋಜನೆಯ (೧೯೯೨-೯೭) ಅವಧಿಯಲ್ಲಿ ಏಳು ಲಕ್ಷ ಸೂಕ್ಷ್ಮ ಉದ್ಯಮಗಳನ್ನು ಸ್ಥಾಪಿಸುವ ಮೂಲಕ ಒಂದು ದಶಲಕ್ಷಕ್ಕಿಂತಲೂ ಅಧಿಕ ಮಂದಿ ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸುವ ಪ್ರಯತ್ನ ಮಾಡಲಾಯಿತು.

ಈ ಯೋಜನೆಯು ಒಂಬತ್ತನೇ ಪಂಚವಾರ್ಷಿಕ ಯೋಜನೆಯ ಅವಧಿಯಾದ ೧೯೯೭-೨೦೦೨ರ ಸಾಲಿನಲ್ಲೂ ಮುಂದುವರಿಯುತ್ತಿದೆ. ೧೯೯೯-೨೦೦೦ರ ಆರ್ಥಿಕ ವರ್ಷಕ್ಕೆ ೨.೨೦ ಲಕ್ಷ ಫಲಾನುಭವಿಗಳ ಗುರಿಯನ್ನು ನಿರ್ಧರಿಸಲಾಗಿತ್ತು. ೧೯೯೯ರ ಅಕ್ಟೋಬರ್

ಮಾಹೆಯ ವೇಳೆಗೆ ೫೫೪೫ ಸಾಲಗಳನ್ನು ಮಂಜೂರುಮಾಡಿ ೨೬೦೨೦ ರಷ್ಟು ಸಾಲಗಳನ್ನು ವಿತರಿಸಲಾಗಿತ್ತು. ೧೯೯೯-೨೦೦೦ರ ಆಯವ್ಯಯದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಕೇಂದ್ರ ಯೋಜನಾ ವೆಚ್ಚದಲ್ಲಿ ರೂ.೧೨೩ ಕೋಟಿ ಹಣವನ್ನು ಒದಗಿಸಲಾಗಿತ್ತು.

ಮೂಲತಃ "ಸ್ವಉದ್ಯೋಗವೇ ನಿರುದ್ಯೋಗ ಸಮಸ್ಯೆಗೆ ಪರಿಹಾರ" ಎಂಬ ಧ್ಯೇಯ ವಾಕ್ಯದೊಡನೆ ಪ್ರಾರಂಭವಾಗಿರುವ, ಪ್ರಧಾನಮಂತ್ರಿಯವರ ರೋಜ್‌ಗಾರ್ ಯೋಜನೆಯು "ಸ್ವಂತ ಉದ್ಯೋಗ ಸ್ಥಾಪಿಸಿ ಸುಖ ಸಮೃದ್ಧಿ ಸಾಧಿಸಿ" ಎಂಬುದರ ಕಡೆ ಹೆಚ್ಚಿನ ಒತ್ತುಕೊಡುತ್ತದೆ.

### ವಿಶ್ವ ಯೋಜನೆ :

ಗ್ರಾಮೀಣ ಪ್ರದೇಶದಲ್ಲಿ ಕಚ್ಚಾ ಮಾಲು ಆಧಾರಿತ ಕುಶಲತೆ ಆಧಾರಿತ ಹಾಗೂ ಮಾನವ ಸಂಪನ್ಮೂಗಳನ್ನು ಸದುಪಯೋಗಪಡಿಸಿಕೊಂಡು ನಿರುದ್ಯೋಗ ನಿವಾರಣೆ ೧೯೯೧ರಲ್ಲಿ ವಿಶ್ವ ಯೋಜನೆಯನ್ನು ಹಮ್ಮಿಕೊಳ್ಳಲಾಯಿತು. ಈ ಯೋಜನೆಯ ವೈಶಿಷ್ಟಗಳು ಈ ಕೆಳಕಂಡಂತಿವೆ.

೧. ಕುಶಲತೆ ಪರಿಣತಿಗಾಗಿ ಸೂಕ್ತ ತರಬೇತಿ ನೀಡುವುದು.

೨. ತರಬೇತಿ ನಂತರ ಘಟಕಗಳನ್ನು ಉತ್ಪಾದನೆಗೆ ತೊಡಗಿಸುವುದು.

೩. ಉತ್ಪಾದನೆಗೆ ಬೇಕಾಗುವ ಕಚ್ಚಾ ಮಾಲನ್ನು ಜಿಲ್ಲಾ ಕೈಗಾರಿಕಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ (ಡಿ.ಎಸ್.ಎಂ.ಎಸ್.) ಮುಖಾಂತರ ಹಾಗೂ ಸಂಘಟಿತ ವಲಯದ ಸಂಸ್ಥೆ ಮತ್ತು ಮಂಡಳಿಗಳಿಂದ ಒದಗಿಸುವುದು.

೪. ಸಿದ್ಧ ವಸ್ತುಗಳ ಮಾರಾಟದ ವ್ಯವಸ್ಥೆಯನ್ನು ಡಿ.ಎಸ್.ಎಂ.ಎಸ್. ಹಾಗೂ ಸಂಘಟಿತ ವಲಯದ ಸಂಸ್ಥೆ ಮತ್ತು ಮಂಡಳಿಗಳು ಒದಗಿಸುವುದು.

೫. ಗ್ರಾಮೀಣ ಕುಶಲಕರ್ಮಿಗಳು ಹಾಗೂ ಉದ್ಯಮಶೀಲರುಗಳನ್ನು ಸಕ್ರಿಯವಾಗಿ ಈ ಯೋಜನೆಯಲ್ಲಿ ಅಳವಡಿಸಿ ನಂತರ ಉದ್ಯೋಗ ಒದಗಿಸುವುದು.

೬. ಅನುಷ್ಠಾನದ ಹಂತದಲ್ಲಿ ಅಗತ್ಯವಾದ ಹಣಕಾಸು ಸೌಲಭ್ಯ ಹಾಗೂ ಸರ್ಕಾರದಿಂದ ದೊರೆಯುವ ರಿಯಾಯ್ತಿ ಮತ್ತು ಪ್ರೋತ್ಸಾಹಗಳನ್ನು ಆದ್ಯತೆಯ ಮೇಲೆ ನೀಡಲು ಕ್ರಮ ಕೈಗೊಳ್ಳುವುದು.

## ಸುಧಾರಿತ ಚೂಲ್ಹಾಗಳ ರಾಷ್ಟ್ರೀಯ ಯೋಜನೆ :

### ೧. ಕಾರ್ಯಕ್ರಮದ ಹಿನ್ನೆಲೆ ಹಾಗೂ ಉದ್ದೇಶ

ಅರಣ್ಯ ನಾಶವನ್ನು ತಪ್ಪಿಸುವ ಹಾಗೂ ಪರಿಸರ ಮಾಲಿನ್ಯ ತಡೆಗಟ್ಟುವ ದೃಷ್ಟಿಯಿಂದ ಈ ಕಾರ್ಯಕ್ರಮ ಉತ್ತಮ ಪಾತ್ರ ವಹಿಸುತ್ತದೆ.

ಈ ಕಾರ್ಯಕ್ರಮದ ಮುಖ್ಯ ಉದ್ದೇಶ ಕೆಳಕಂಡಂತಿವೆ.

೧. ಇಂಧನದ ಸಮರ್ಪಕ ಬಳಕೆ ಮತ್ತು ಉರುವಲಿನ ಉಳಿತಾಯ.

೨. ಅಡುಗೆ ಮನೆಯಲ್ಲಿ ಹೊಗೆ ರಹಿತ ವಾತಾವರಣ ನಿರ್ಮಿಸುವುದು.
೩. ಪರಿಸರ ಸಂವರ್ಧನೆ ಮತ್ತು ಅರಣ್ಯ ನಾಶ ತಡೆಗಟ್ಟುವುದು.
೪. ಮಹಿಳೆಯರ ಮತ್ತು ಮಕ್ಕಳ ಆರೋಗ್ಯ ಕಾಪಾಡುವುದು.
೫. ಉದ್ಯೋಗಾವಕಾಶ ಕಲ್ಪಿಸುವುದು.

**೨. ಉದ್ದೇಶಿತ ಗುಂಪುಗಳು**

ಪ್ರತಿ ತಾಲ್ಲೂಕಿನಲ್ಲಿ ಸರ್ಕಾರ ನಿರ್ದಿಷ್ಟ ಪಡಿಸಿದಷ್ಟು ಗ್ರಾಮಗಳನ್ನು ಆಯ್ಕೆ ಮಾಡಿ ಆ ಗ್ರಾಮದ ಎಲ್ಲಾ ಮನೆಗಳಿಗೂ ಸುಧಾರಿತ ಒಲೆಗಳನ್ನು ಒದಗಿಸುವ ಉದ್ದೇಶ ಹೊಂದಿದ್ದು, ಈ ಕಾರ್ಯಕ್ರಮವು ಎಲ್ಲಾವರ್ಗದ ಫಲಾನುಭವಿಗಳಿಗೂ ಅನ್ವಯಿಸುತ್ತದೆ.

**೩. ಯೋಜನಾ ವಿವರ**

ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ಕ್ರಮವಾಗಿ ೩೦:೭೦ರ ಅನುಪಾತದಲ್ಲಿ ಅನುದಾನ ಬಿಡುಗಡೆಯಾಗುತ್ತದೆ. ಒಂದು ಒಲೆಯ ಘಟಕ ವೆಚ್ಚ ರೂ. ೧೬೦ (ಹಾರ್ಡವೇರ್ ಕಾಂಪೋನೆಂಟ್ ಒಳಗೊಂಡಿರುತ್ತದೆ.)ಗಳಾಗಿದ್ದು ಒಲೆ ನಿರ್ಮಿಸಿಕೊಂಡ ಫಲಾನುಭವಿಗಳಿಗೆ ರೂ. ೬೩ಗಳನ್ನು ಸಹಾಯಧನ ರೂಪದಲ್ಲಿ ನೀಡಲಾಗುವುದು. ಸ್ವಯಂ ಸೇವಾ ಕಾರ್ಯಕರ್ತರ ಮೂಲಕ ನಿರ್ಮಾಣ ಮಾಡಿದಲ್ಲಿ ಅವರಿಗೆ ಒಲೆಯೊಂದಕ್ಕೆ ಪ್ರೋತ್ಸಾಹಧನವಾಗಿ ರೂ. ೩೦ಗಳನ್ನು ಪಾವತಿಸಲು ಸರ್ಕಾರ ಅವಕಾಶ ಕಲ್ಪಿಸಿದೆ.

**೪. ಈ ಯೋಜನೆಯಲ್ಲಿ ಅಡಕವಾದ ಅಂಶಗಳು**

ಸುಧಾರಿತ ಒಲೆ ನಿರ್ಮಾಣ ಕುರಿತಂತೆ ಗ್ರಾಮಸ್ಥರೊಂದಿಗೆ ಸಮಾಲೋಚಿಸಿ ಸುಧಾರಿತ ಒಲೆ ಅಳವಡಿಸಿಕೊಳ್ಳಲು ಇಚ್ಛಿಸುವ ಗ್ರಾಮದ ಪಟ್ಟಿಯನ್ನು ಸಿದ್ಧಪಡಿಸಬೇಕು. ಒಂದು ಗ್ರಾಮದಲ್ಲಿ ಸರಾಸರಿ ೨೦೦ ಕುಟುಂಬಗಳಿಗೆ ಸುಧಾರಿತ ಒಲೆ ನಿರ್ಮಿಸಲು ಪ್ರತಿ ತಾಲ್ಲೂಕಿನಲ್ಲಿ ೮ ಗ್ರಾಮಗಳಂತೆ ಒಟ್ಟು ೧೬೦೦ ಒಲೆಗಳನ್ನು ನಿರ್ಮಿಸಲು ಗುರಿ ನಿಗದಿಪಡಿಸಿಕೊಳ್ಳಬೇಕು. ಸುಧಾರಿತ ಒಲೆ ಪ್ರಯೋಜನ ಕುರಿತಂತೆ ತಿಳುವಳಿಕೆ ನೀಡುವಾಗ ಒಲೆಗಳ ಮಾದರಿ, ನಿರ್ಮಾಣ, ಅಂದಾಜು ವೆಚ್ಚ ಕುಟುಂಬಗಳು ನೀಡಬೇಕಾದ ಹಣ ಅಂದರೆ ಫಲಾನುಭವಿಗಳ ಪಾಲು, ಲಭ್ಯವಿರುವ ಸಹಾಯಧನ ಇತ್ಯಾದಿ ವಿವರಗಳನ್ನು ನೀಡಬೇಕು. ನಂತರ ಸ್ಥಳೀಯ ಪರಿಣಿತರಿಂದ ನಿಗದಿಪಡಿಸಿದ ತಂತ್ರಜ್ಞಾನ ಮಾದರಿ ಒಲೆಗಳನ್ನು ಸ್ಥಳೀಯವಗಿ ನಿರ್ಮಿಸಬೇಕೆ ಅಥವಾ ಒಲೆಗಳನ್ನು ಹೊರಗಿನಿಂದ ಪೂರೈಸಬೇಕೆ ಎಂಬ ಬಗ್ಗೆ ಗ್ರಾಮಸ್ಥರೊಂದಿಗೆ ಚರ್ಚಿಸಿ ನಿರ್ಧರಿಸಬೇಕು. ಇದರಿಂದ ಒಲೆಗಳ ನಿರ್ಮಾಣದ ವೆಚ್ಚದಲ್ಲಾಗುವ ಅಂತರದ ಬಗ್ಗೆ ಚರ್ಚಿಸಿ, ಹೆಚ್ಚಿನ ಹಣ ಕೊಡಬೇಕಾದಲ್ಲಿ ಅದನ್ನು ಫಲಾನುಭವಿಗಳೇ ಭರಿಸಬೇಕೆಂಬ ಬಗ್ಗೆ ಅವರಿಗೆ ತಿಳುವಳಿಕೆ ನೀಡಬಹುದಾಗಿರುತ್ತದೆ. ನಿರ್ಮಿತ ಕೇಂದ್ರಗಳಿಂದ, ಸ್ಥಳೀಯವಾಗಿ ಲಭ್ಯವಿರುವ ಪರಿಣಿತ ಕುಂಬಾರರಿಂದ ಸ್ವಯಂ ಉದ್ಯೋಗ ಕಾರ್ಯಕರ್ತರುಗಳಿಂದ, ಸರ್ಕಾರೇತರ ಸಂಸ್ಥೆಗಳಿಂದ ಮತ್ತು ಸರ್ಕಾರ ಸೂಚಿಸಬಹುದಾದ ಹೆಚ್ಚಿನ ಬಾಳಿಕೆಯುಳ್ಳ ಇತರೆ ಸ್ಥಿರ ಮಾದರಿಯ ಒಲೆಗಳನ್ನು ನಿರ್ಮಿಸಬೇಕು.

## ಸ್ವಚ್ಛ ಗ್ರಾಮ ಯೋಜನೆ :

ಸ್ವಚ್ಛ ಗ್ರಾಮ ಯೊಜನೆ ಅಥವಾ ನಿರ್ಮಲ ಗ್ರಾಮ ಯೋಜನೆಯು ಕರ್ನಾಟಕ ರಾಜ್ಯ ಸರ್ಕಾರವು ಜಾರಿಗೆ ತಂದಿರುವ ಒಂದು ಪ್ರಮುಖ ಪ್ರಗತಿಪರ ಯೋಜನೆಯಾಗಿದೆ. ರಾಜ್ಯ ವ್ಯಾಪ್ತಿ ಗ್ರಾಮೀಣ ಸ್ವಚ್ಛತೆಯ ಈ ಕಾರ್ಯಕ್ರಮುವನ್ನು ನಿರ್ಮಲ ಕರ್ನಾಟಕ ಕಾರ್ಯಕ್ರಮದ ಹೆಸರಿನಲ್ಲಿ ೧೯೯೫ನೇ ಇಸವಿ ಅಕ್ಟೋಬರ್ ಮಾಹೆ ಎರಡನೇ ದಿನಾಂಕದಂದು ಪ್ರಾರಂಭಿಸಲಾಗಿದೆ. ಇದು ಇಡೀ ರಾಷ್ಟ್ರದಲ್ಲಿಯೇ ಇಂತಹ ಮಹತ್ವದ ಪ್ರಪ್ರಥಮ ಯೋಜನೆ ಎಂಬುದಾಗಿ ಹೇಳಲಾಗಿದೆ. ಇದನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ ಅವತಿ ಎಂಬ ಗ್ರಾಮದಲ್ಲಿ ಉದ್ಘಾಟನೆ ಮಾಡಲಾಗಿದೆ.

### ಉದ್ದೇಶಗಳು

ಸ್ವಚ್ಛ ಗ್ರಾಮ ಯೋಜನೆಯ ಪ್ರಮುಖ ಉದ್ದೇಶಗಳು ಈ ಕೆಳಕಂಡಂತಿರುವುವು.

೧. ಗ್ರಾಮದ ಒಳರಸ್ತೆ ಮತ್ತು ಬಿದಿಗಳ ಮೇಲ್ಮೈಯನ್ನು ಉತ್ತಮಪಡಿಸುವುದು.
೨. ಕೊಳೆ ಮತ್ತು ಮಳೆ ನೀರಿನ ವಿಲೇವಾರಿಗಾಗಿ ಚರಂಡಿಗಳನ್ನು ನಿರ್ಮಿಸುವುದು.
೩. ಸಾಮೂಹಿಕ ಮಿಶ್ರ ಗೊಬ್ಬರದ ಅಂಗಳ ಅಥವಾ ಕಮ್ಯೂನಿಟಿ ಕಾಂಪೋಸ್ಟ್ ಯಾರ್ಡ್ ಅನ್ನು ಒದಗಿಸಿ, ಗ್ರಾಮದ ವಾಸ ಸ್ಥಳಗಳಿಂದ ತಿಪ್ಪೆಗುಂಡಿಗಳನ್ನು ತೆಗೆದುಹಾಕುವುದು.
೪. ಗ್ರಾಮದ ಎಲ್ಲಾ ಮನೆಗಳಿಗೆ ಹೊಗೆರಹಿತ ಒಲೆಗಳನ್ನು ಒದಗಿಸುವುದು.
೫. ಗ್ರಾಮದ ಎಲ್ಲಾ ಜನತೆಗಾಗಿ ಕೌಟುಂಬಿಕ ಶೌಚಾಲಯಗಳ, ಸಾಮೂಹಿಕ ಶೌಚಾಲಯಗಳ ಮತ್ತು ಶಾಲಾ ಶೌಚಾಲಯಗಳ ನಿರ್ಮಾಣ ಮಾಡುವುದು.

### ಗುರಿಗಳು

ಸ್ವಚ್ಛ ಗ್ರಾಮ ಯೋಜನೆಯ ಪ್ರಮುಖ ಗುರಿಗಳು ಈ ಕೆಳಕಂಡಂತಿರುವುವು.

೧. ಪ್ರತಿಯೊಂದು ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಒಂದು ನೂರು ಪ್ರತ್ಯೇಕ ಶೌಚಾಲಯ ಮತ್ತು ಮೂತ್ರಿಗಳನ್ನು ನಿರ್ಮಿಸುವುದು.
೨. ಬಿಡುಗಡೆ ಮಾಡಲಾದ ಹಣದಲ್ಲಿ ಶೇ.೧೦ರಷ್ಟು ಹಣವನ್ನು ಶಾಲಾ ಆವರಣದಲ್ಲಿ ಶೌಚಾಲಯದ ಹಾಗೂ ಮೂತ್ರಾಲಯಗಳನ್ನು ನಿರ್ಮಿಸಲು ಉಪಯೋಗಿಸುವುದು.
೩. ಗ್ರಾಮೀಣ ಕುಟುಂಬಗಳನ್ನು ನೈರ್ಮಲ್ಯ ಕಾರ್ಯಕ್ರಮದ ವ್ಯಾಪ್ತಿಯಲ್ಲಿ ಬೇಗ ಬೇಗ ತರುವುದು.

## ಸ್ವಸ್ತಿ ಗ್ರಾಮ ಯೋಜನೆ :

ಸ್ವಸ್ತಿ ಗ್ರಾಮ ಯೋಜನೆಯು ಕರ್ನಾಟಕ ರಾಜ್ಯ ಸರ್ಕಾರವು ರೂಪಿಸಿ ಜಾರಿಗೆ ತಮದಿರುವ ಒಂದು ವಿಶಿಷ್ಟ ಯೋಜನೆ. ಇದರ ಹೆಸರಿನಲ್ಲಿ ಇಂಗ್ಲೀಷ್ ಅಕ್ಷರಗಳಾದ ಎಸ್.ಡಬ್ಲ್ಯೂ.ಎ.ಎಸ್., ಟಿ.ಹೆಚ್. ಮತ್ತು ಐ ಎಂಬ ಆರು ಅಕ್ಷರಗಳು ಅಡಕವಾಗಿವೆ.

ಅವುಗಳಲ್ಲಿ ಒಂದೊಂದು ಅಕ್ಷರವು ಒಂದೊಂದು ಪ್ರಮುಖ ವಿಚಾರವನ್ನು ಪ್ರತಿನಿಧಿಸುತ್ತದೆ. ಅಂತೆಯೇ ಎಸ್. ಅಕ್ಷರವು 'ಮಣ್ಣು ಅಥವಾ ಸಾಯಿಲ್', ಡಬ್ಲ್ಯೂ. ಅಕ್ಷರವು "ನೀರು ಅಥವಾ ವಾಟರ್", ಎಸ್. ಅಕ್ಷರವು ನೈರ್ಮಲ್ಯ ಅಥವಾ ಸ್ಯಾನಿಟೇಶನ್, ಟಿ. ಅಕ್ಷರವು ಮರಗಳು ಅಥವಾ ಟ್ರೀಸ್, ಹೆಚ್. ಅಕ್ಷರವು ವಸತಿ ಅಥವಾ ಹೌಸಿಂಗ್ ಮತ್ತು ಐ ಅಕ್ಷರವು ಸೌಲಭ್ಯಗಳು ಅಥವಾ ಇನ್‌ಫ್ರಾಸ್ಟ್ರಕ್ಚರ್ ಅನ್ನು ಪ್ರತಿನಿಧಿಸುತ್ತವೆ.

ಇದು ಕರ್ನಾಟಕ ರಾಜ್ಯದ ಅತ್ಯಂತ ಹಿಂದುಳಿದ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸುವ ದಿಸೆಯಲ್ಲಿ ಹಮ್ಮಿಕೊಳ್ಳಲಾಗಿರುವ ಒಂದು ವಿಶೇಷ ಯೋಜನೆ. ಪ್ರಾರಂಭಿಕವಾಗಿ ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲಿ ತಲಾ ಒಂದೊಂದು ಅತಿ ಹಿಂದುಳಿದ ಗ್ರಾಮವನ್ನು ಆಯ್ಕೆಮಾಡಿಕೊಂಡು ಆ ಗ್ರಾಮವನ್ನು ಒಂದು ಆರೋಗ್ಯಕರ, ಸಮೃದ್ಧ, ಪ್ರಗತಿದಾಯಕ ಆದರ್ಶ ಗ್ರಾಮವನ್ನಾಗಿ ರೂಪಿಸುವ ಕಡೆ ಸಾಕಷ್ಟು ಶ್ರಮಿಸುವ ವಿನೂತನ ಯೋಜನೆ.

ಸ್ವಸ್ತಿ ಗ್ರಾಮ ಯೋಜನೆಯನ್ನು ೧೯೯೭ನೇ ಇಸವಿ ಆಗಸ್ಟ್ ಮಹೆ ಹದಿನೈದನೇ ದಿನಾಂಕದಂದು ಜಾರಿಗೆ ತಂದು ಪ್ರಪ್ರಥಮವಾಗಿ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಚಿಂತ್ರಪಳ್ಳಿ ಅಥವಾ ಚಿಂತ್ರಹಳ್ಳಿ ಎಂಬ ಗ್ರಾಮದಲ್ಲಿ ವಿದ್ಯುಕ್ತವಾಗಿ ಉದ್ಘಾಟಿಸಲಾಯಿತು.

## ಉದ್ದೇಶಗಳು

ಸ್ವಸ್ತಿ ಗ್ರಾಮ ಯೋಜನೆಯ ಪ್ರಮುಖ ಉದ್ದೇಶಗಳು ಈ ಕೆಳಕಂಡಂತಿರುವುವು.

೧. ಭೂ ಸಾರ ಸಂರಕ್ಷಣೆ ಮಾಡುವುದು ಭೂ ಜಲ ಅರ್ಥಾತ್ ಅಂತರ್ಜಾಲವನ್ನು ಹೆಚ್ಚಿಸುವುದು.
೨. ಕುಡಿಯುವ ನೀರನ್ನು ಏರ್ಪಾಟು ಮಾಡುವುದು.
೩. ನೈರ್ಮಲ್ಯವನ್ನು ಸಾಧಿಸುವುದು.
೪. ಮರಗಿಡಗಳು ಅರ್ಥಾತ್ ಸಸ್ಯ ಸಂಪತ್ತನ್ನು ಸಂವರ್ಧಿಸುವುದು.
೫. ವಸತಿ ಏರ್ಪಾಟು ಮಾಡುವುದು.
೬. ರಸ್ತೆಗಳ ನಿರ್ಮಾಣ, ಶಾಲೆ, ವಾಚನಾಲಯ, ಯುವಜನರಿಗೆ ಸ್ವಯಂ ಉದ್ಯೋಗ ಮುಂತಾದವುಗಳನ್ನು ವ್ಯವಸ್ಥೆ ಮಾಡುವುದು.

## ಗುರಿಗಳು

ಸ್ವಸ್ತಿ ಗ್ರಾಮ ಯೋಜನೆಯ ಪ್ರಮುಖ ಗುರಿಗಳು ಈ ಕೆಳಕಂಡಂತಿರುವುವು.

೧. ಪ್ರತಿ ವರ್ಷವೂ ಪ್ರತಿ ಜಿಲ್ಲೆಯ ಆಯ್ದ ಒಂದು ಗ್ರಾಮವನ್ನು ಸರ್ವತೋಮುಖವಗಿ ಅಭಿವೃದ್ಧಿ ಪಡಿಸುವುದು.
೨. ಗ್ರಾಮದ ಭೂ ಸಾರ ಸಂರಕ್ಷಣೆ ಮತ್ತು ಅಂತರ್‌ಜಲವನ್ನು ಸಂರಕ್ಷಣೆ ಮಾಡುವುದು.

೩. ಗಿಡ ಮರಗಳನ್ನು ಬೆಳೆಸುವುದು, ಸಾಮಾಜಿಕ ಅರಣ್ಯವನ್ನು ಅಭಿವೃದ್ಧಿ ಪಡಿಸುವುದು, ಲಭ್ಯವಿರುವ ಅನುಪಯುಕ್ತ ಸರ್ಕಾರಿ ಜಮೀನಿನಲ್ಲಿ ಕಿರು ಅರಣ್ಯ ಉತ್ಪತ್ತಿ ನೀಡುವ ಜಾತಿಯ ಮರಗಳನ್ನು ಬೆಳೆಸಿ, ಪರಿಸರ ಅಭಿವೃದ್ಧಿ ಪಡಿಸುವುದು.

೪. ಕುಡಿಯುವ ನೀರು ಪೂರೈಕೆ ಮಾಡುವುದು.

೫. ಗ್ರಾಮದ ಸರ್ವತೋಮುಖ ಅಭಿವೃದ್ಧಿಗೆ ಅಗತ್ಯವಾದ ಸೌಲಭ್ಯಗಳನ್ನು ಏರ್ಪಾಟು ಮಾಡುವುದು.

೬. ಯೋಜನೆಯ ಬಗ್ಗೆ ದಾನಿಗಳು ಹಾಗೂ ಆಸಕ್ತರಿಗೆ ಮನವರಿಕೆ ಮಾಡಿಕೊಟ್ಟು ದಾನಿಗಳು, ಖಾಸಗಿ ವಲಯದ ಉದ್ಯಮಿಗಳು ಮೊದಲಾದವರ ಮನ ಒಲಿಸಿ, ಸಾರ್ವಜನಿಕ ಸಂಘ, ಸಂಸ್ಥೆಗಳು ಮೊದಲಾದವುಗಳ ನೆರವು ಹಾಗೂ ಸಹಕಾರ ಪಡೆಯುವುದು.

**ಸ್ತ್ರೀ – ಶಕ್ತಿ ಯೋಜನೆ :**

ಕರ್ನಾಟಕ ಗನ ಸರ್ಕಾರವು ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗಾಗಿ ಸ್ವಶಕ್ತಿ, ನಮ್ಮಮಗಳು, ನಮ್ಮಶಕ್ತಿ, ಬಾಲಕಾರ್ಮಿಕರಿಗಾಗಿ ಪುನರ್ವಸತಿ ಕೇಂದ್ರ, ಕಾನೂನಿನ ಮಹಿಳಾ ಪದವೀಧರೆಯರಿಗೆ ಆರ್ಥಿಕ ನೆರವು, ಗ್ರಾಮೀಣ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ, ವಿದ್ಯಾರ್ಥಿ ನಿಲಯಗಳು, ವಿಧವಾ ಮಾಶಾಸನ, ಮಾಂಗಲ್ಯ ಭಾಗ್ಯ ಮುಂತಾದ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ.

ಸ್ತ್ರೀ–ಶಕ್ತಿ ಯೋಜನೆಯು ಕರ್ನಾಟಕ ಘನ ಸರ್ಕಾರವು ಜಾರಿಗೆ ತಂದಿರುವ ಒಂದು ವಿಶೇಷ ಯೋಜನೆ. ಇದನ್ನು "ಮಹಿಳೆಯರ ಏಳಿಗೆಯಲ್ಲಿ ದೇಶದ ಅಭಿವೃದ್ಧಿ ಅಡಗಿದೆ" ಎಂಬ ಮಹಾತ್ಮ ಗಾಂಧೀಜಿಯವರ ಮೌಲ್ಯಯುತ ನುಡಿ ಆದಾರಿತ ನಂಬಿಕೆಯನ್ನು ಸಾಕರಗೊಳಿಸಲು ಹಮ್ಮಿಕೊಳ್ಳಲಾಗಿದೆ. ಯಾವುದೇ ಸಮಾಜದ ಸುಭದ್ರ ಸ್ಥಿತಿಗೆ ಸ್ತ್ರೀಯರ ಕೊಡುಗೆ ಅಪಾರ. ಸಮಾಜವೇ ನಿರಂತರ ಚಲಿಸುವ ರಥಕ್ಕೆ ಇರುವ ಎರಡು ಗಾಲಿಗಳೇ ಪುರುಷ ಮತ್ತು ಸ್ತ್ರೀ. ಈ ಎರಡೂ ಗಾಲಿಗಳು ಸಮಾನ ಸ್ಥಾನಮಾನದವುಗಳು ಹಾಗೂ ಸಮಾನ ಬಲದವುಗಳಾಗಿರುವುದೇ ಸೂಕ್ತ ಇವೆರಡರಲ್ಲಿ ಯಾವುದೊಂದನ್ನು ಕಡೆಗಣಿಸಿದರೂ ಪರಿಣಾಮ ಕಷ್ಟ ಅಂತೆಯೇ ಸದೃಢ ಸಮಾಜ ಅಸ್ತಿತ್ವಕ್ಕೆ ಸದೃಢ ಪುರುಷ ಹಾಗೂ ಸದೃಢ ಸ್ತ್ರೀಯರ ಇರುವಿಕೆ ಅತ್ಯಗತ್ಯ. ಆದರೆ ಭಾರತೀಯ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳಲ್ಲಿ ಕಾಲ ಕಾಲಕ್ಕೆ ಬಹಳ ಏರಿಳಿತಗಳು ಕಂಡುಬಂದಿವೆ. ಆಕೆಯನ್ನು ಪುರುಷನಿಗೆ ಸರಿಸಮಾನವಾಗಿ ನಡೆಸಿಕೊಂಡಿರುವುದು ಕಡಿಮೆ. ಈ ಹಿನ್ನೆಲೆಯಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಉಪಯುಕ್ತ ಯೋಜನೆಗಾಗಿ ಈ ಯೋಜನೆಯನ್ನು ಕರ್ನಾಟಕ ರಾಜ್ಯವು ೨೦೦೦ದ ಇಸವಿ ಅಕ್ಟೋಬರ್ ಮಾಹೆ ಎರಡನೇ ದಿನಾಂಕದಂದು ಜಾರಿಗೆ ತಂದಿದೆ.

**ನಮ್ಮ ಮಗಳು, ನಮ್ಮ ಶಕ್ತಿ ಯೋಜನೆ :**

**ಕಾರ್ಯಕ್ರಮದ ಹಿನ್ನೆಲೆ ಹಾಗೂ ಉದ್ದೇಶ**

ಬುಡಕಟ್ಟು ಸಮುದಾಯಗಳಲ್ಲಿ ಹೆಣ್ಣು ಭ್ರೂಣ ಹತ್ಯೆ ಸಂಖ್ಯೆ ವಿಪರೀತವಾಗಿದ್ದು ಲಿಂಗ ಅಸಮಾನತೆಯನ್ನು ತಡೆಯಲು ಈ ಕಾರ್ಯಕ್ರಮವನ್ನು ಸರ್ಕಾರವು ಜಾರಿಗೆ ತಂದಿದೆ. ಹೆಣ್ಣು ಮಕ್ಕಳು ಆಶ್ರಮ ಶಾಲೆಗಳಿಗೆ ಹಾಜರಾಗುವುದು, ಹೆಣ್ಣು ಭ್ರೂಣ ಹತ್ಯೆ ತಡೆಯುವುದು, ಲಿಂಗ ಅಸಮಾನತೆಯನ್ನು ತಡೆಯುವುದು, ಹೆಣ್ಣು ಮಕ್ಕಳ ಪ್ರಾಯಪೂರ್ವ ವಿವಾಹ, ಕುಟುಂಬ ಯೋಜನೆ, ಹೆಣ್ಣು ಮಕ್ಕಳ ವ್ಯಾಸಂಗ ಮುಂದುವರೆಸುವಿಕೆ ಮುಂತಾದ ಅನೇಕ ಉದ್ದೇಶಗಳನ್ನು ಈ ಯೋಜನೆ ಹೊಂದಿದೆ.

## ೫. ಆಧುನಿಕತೆ ಮತ್ತು ಸ್ಥಿತ್ಯಂತರಗಳು

ಆಧುನಿಕತೆ ಎಂದರೇನು? ಎಂದು ನಾವು ನಿಖರವಾಗಿ ಉತ್ತರಿಸಲು ಸಾಧ್ಯವಾಗದೇ ಇರಬಹುದು ಆಧುನಿಕತೆಯ ಪರಿಕಲ್ಪನೆಯ ಬಗ್ಗೆ ಅನೇಕ ಚಿಂತನೆಗಳು ನಮ್ಮಲ್ಲಿ ಮೊಳೆತಿವೆ. ವೈಜ್ಞಾನಿಕವಾಗಿ ಆಲೋಚಿಸುವುದು ಉಪಗ್ರಹಗಳ ಉಡಾವಣೆ, ಆಧುನಿಕ ಉಡುಪುಗಳಾದ ಜೀನ್ಸ್ ಪ್ಯಾಂಟ್ ಧರಿಸಿ ಪಾಶ್ಚಾತ್ಯ ಪಾನಿಯಗಳನ್ನು ಕುಡಿಯುವುದು ಎಂಬ ಅಂಶವನ್ನು ನಾವು ಮನಗಾಣುತ್ತೇವೆ. ಆದರೆ ಆಧುನಿಕತೆ ಎಂಬ ಅಂಶವನ್ನು ನಾವು ಸ್ಥಗಿತತೆಯ ನಿಯಮವನ್ನು ವಿರೋಧಿಸಲು ಬಳಸುತ್ತೇವೆ. ಮೌಢ್ಯ ಆಚಾರದಲ್ಲಿ ತೊಡಗಿರುವವರನ್ನು ಗೊಡ್ಡು ಸಂಪ್ರದಾಯಸ್ತ, ಮಾಡ್ರನ್ ಆಲೋಚನೆಗಳಿಲ್ಲದವರು ಎಂದು ಪರಿಗಣಿಸಲಾಗುತ್ತಿತ್ತು. ಅಂದರೆ ಬದಲಾವಣೆಗೆ ಸ್ಪಂದಿಸದ ಮನುಷ್ಯ ಅಥವಾ ಸಮುದಾಯದ ಅಂತರಂಗವನ್ನು ಸಂಪ್ರದಾಯ ಬದ್ಧವಾದುದ್ದೆಂದು. ಬದಲಾವಣೆಗೆ ಪಕ್ಕಾದ ಎಲ್ಲವನ್ನು ಆಧುನಿಕವೆಂದೂ ಕರೆವ ವಾಡಿಕೆ ನಮ್ಮಲ್ಲಿ ಇಂದು ಬೆಳೆದು ಬಂದಿದೆ.

ವರ್ತಮಾನದಲ್ಲಿ ಬುಡಕಟ್ಟು ಸಮುದಾಯಗಳು ಹೇಗೆ ಜೀವಿಸುತ್ತಿವೆ. ಆಧುನಿಕತೆಯ ಫಲವಾದ ಇಂದಿನ ಅನೇಕ ಸಂಪತ್ತುಗಳು ಅವರಿಗೆ ಹೇಗೆ ಲಭಿಸಿವೆ ಎನ್ನುವ ಕುರಿತು ಚಿಂತಿಸುವುದು ಅವಶ್ಯ. ಬುಡಕಟ್ಟು ಸಮುದಾಯ ಎನ್ನುವುದನ್ನು ಒಂದು ಭೌತಿಕ ಅಸ್ತಿತ್ವ ಎಂದು ಕೊಳ್ಳುವುದಕ್ಕಿಂತ ಇಂದು ನಮ್ಮ ಆಧುನಿಕ ಸಂಕಥನಗಳಲ್ಲಿ ಅದು ಅನೇಕ ಬಗೆಯಲ್ಲಿ ರೂಪಾಂತರಗಳನ್ನು ಕಾಣುತ್ತಾ ಬಂದಿರುವುದನ್ನು ಕಾಣಬಹುದು. ಕಂಪ್ಯೂಟರ್ ಯುಗಕ್ಕೆ, ಹೊಸ ಶತಮಾನಕ್ಕೆ ಕಾಲಿಡುತ್ತಿರುವ ಆಧುನಿಕ ವ್ಯವಸ್ಥೆ ಇಂದು ಅನೇಕ ಬುಡಕಟ್ಟು ಸಮುದಾಯಗಳು ಅರೆ ಹೊಟ್ಟೆಯಲ್ಲಿ ಬದುಕುವ ವ್ಯವಸ್ಥೆಯನ್ನು ತಂದೊಡ್ಡಿದ್ದೆ. ಆಳುವ ವ್ಯವಸ್ಥೆ ಏನೇ ಬದಲಾವಣೆಗಳನ್ನು ಅವರಲ್ಲಿ ತರಲೆತ್ನಿಸಿದರೂ, ಅಭಿವೃದ್ಧಿ ಯೋಜನೆಗಳು ಅವರನ್ನು ಶೋಷಣೆಗೊಳಮಾಡಿವೆ. ಇಂದು ಆಧುನಿಕರೆಂದು ಹೇಳಿಕೊಂಡು ಅವರ ಬಳಿ ಹೋದಾವರಲ್ಲಾ ತಿರಸ್ಕಾರಕ್ಕೆಗೊಳಗಾಗುತ್ತಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ರಾಮನಗರ ಜಿಲ್ಲೆಯ ಇರುಳಿಗರನ್ನು ಸಂದರ್ಶಿಸಲು ಹೋದಾಗ ಇಲ್ಲಿನ ಸಮುದಾಯ

ಅತ್ಯಂತ ಖಾರವಾಗಿ ಪ್ರತಿಭಟಿಸಿದರು. “ನೋಡಿ ಸ್ವಾಮಿ ನಿಮ್ಮಂತೆ ಎಷ್ಟೋ ಜನ ನಿಮ್ಮ ಉದ್ಧಾರ ಮಾಡ್ತೀವಿ ಅಂತಾ ಬರ್ತ್ತಾರೆ ಏನ್ ಮಾಡ್ತೀರಾ” ಎಂದು ಪ್ರಶ್ನಿಸುತ್ತಾರೆ.

ಅಭಿವದ್ಧಿ ಯೋಜನೆಗಳು ಆಯಾ ದೇಶದ, ಕಾಲದ ಸಮಾಜದ ಸ್ವರೂಪದ ಮೇಲೆ ನಿರ್ಧಾರವಾಗಬೇಕು ಅಲ್ಲಿನ ಸಮಾಜದ ಜೊತೆ ಸಂಧಾನ ನಡೆಸುವ ಯಾವುದೇ ಅಭಿವೃದ್ಧಿ ನೀತಿ ಜನಪರವಾಗಿರಲಾರದು.

ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯಗಳು ಬದಲಾದ ಸಾಮಾಜಿಕ ಸಂದರ್ಭದಲ್ಲಿ ಪರಿವರ್ತನೆಯ ಹಾದಿಯಲ್ಲಿರುವುದು ಕಂಡುಬರುತ್ತದೆ. ಶಿಕ್ಷಣ, ಮತದಾನದ ಹಕ್ಕುಗಳು ಅವರನ್ನು ಬದಲಾವಣೆಯತ್ತ ಕೊಂಡೊಯ್ಯುತ್ತದೆ. ಅವರ ಆಚರಣೆಗಳು ಸತ್ವ ಕಳೆದುಕೊಳ್ಳುತ್ತಿವೆ. ಶಿಷ್ಟ ಸಂಸ್ಕೃತಿಯ ಪ್ರಭಾವ ಗಾಢವಾಗುತ್ತಿದ್ದು ತಮ್ಮ ಆಚರಣೆಗಳಲ್ಲಿನ ಬುಡಕಟ್ಟು ಸಮುದಾಯ ಸಂಸ್ಕೃತಿಯ ಪಳೆಯುಳಿಕೆಗಳು ಕಳೆಗುಂದುತ್ತಿವೆ. ಇರುಳಿಗರು ತಮ್ಮ ಮದುವೆ ಹುಟ್ಟು, ಸಾವು ಇತ್ಯಾದಿ ಸಂಪ್ರದಾಯ ಆಚರಣೆಗಳ ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶವೀಯುತ್ತಿರಲಿಲ್ಲ ಇಂದು ಇವರ ಮದುವೆ ಬ್ರಾಹ್ಮಣ್ಯ ಪುರೋಹಿತ್ಯದಲ್ಲಿ ನಡೆಯುತ್ತಿದೆ. ಉತ್ಕೃಷ್ಟವಾದ ಸಾಹಿತ್ಯಿಕ ಮೌಲ್ಯಗಳನ್ನು ಹೊಂದಿರುವ ಇರುಳಿಗ ಕಲೆ ‘ಕಣಿ’ಯಲ್ಲಿನ ನಂಬಿಕೆಗಳು ಜನರಿಂದ ಮಾಯವಾಗುತ್ತಿವೆ ಕಣಿಗಾರನ ಮೇಲೆ ಮೊದಲ್ಲಿದ್ದ ಗೌರವ, ಭಯ, ನಂಬಿಕೆಗಳು ನೆಲೆ ಕಳೆದುಕೊಳ್ಳುತ್ತಿವೆ. ಅವರ ಸಾಮಾಜಿಕ ವ್ಯವಸ್ಥೆಯಲ್ಲಿನ ಭದ್ರತೆ ಕೂಡ ಅಭದ್ರವಾಗುತ್ತಿದೆ. ಕುಲ ಪಂಚಾಯ್ತಿಯ ಕಟ್ಟು ಕಟ್ಟಳೆಗಳು ನಶಿಸುತ್ತಿವೆ.

ಹಕ್ಕಿಪಿಕ್ಕಿ ಸಮುದಾಯ ಬಹುವಾಗಿ ಆಧುನೀಕರಣಕ್ಕೆ ಒಳಗಾಗಿದ್ದಾರೆ. ಇವರಷ್ಟು ನಿರಂತರವಾಗಿ ಬದಲಾವಣೆಗೆ ಒಳಗಾಗಿರುವ ಜಾತಿ ಕರ್ನಾಟಕದಲ್ಲಿ ಯಾವುದು ಇಲ್ಲ. ಇದಕ್ಕೆ ಕಾರಣ ಅವರ ಅಲೆಮಾರಿ ಜೀವನ. ಜೀವನೋಪಾಯಕ್ಕಾಗಿ ಹಕ್ಕಿ ಪಕ್ಷಿಗಳನ್ನು ಬೇಟೆಯಾಡುತ್ತಿದ್ದ ಈ ಸಮುದಾಯ ಇಂದು ಕೃಷಿ, ವ್ಯಾಪರ ಚಟುವಟಿಕೆಗಳನ್ನು ಮಾಡುವುದರ ಮೂಲಕ ಸಾಕಷ್ಟು ಬದಲಾವಣೆಯಾಗಿದ್ದಾರೆ. ಸರ್ಕಾರದ ಯೋಜನೆಗಳು ಇವರನ್ನು ತಲುಪುತ್ತಿವೆ. ಸ್ವಉದ್ಯೋಗ ನಿರ್ವಹಣೆ ಮಾಡಿಕೊಳ್ಳುತ್ತಾ ಆರ್ಥಿಕವಾಗಿ ಪ್ರಬಲರಾಗುತ್ತಿದ್ದಾರೆ. ಇದಕ್ಕೆ ಸಂಬಂಧ ಪಟ್ಟ ಮಾಹಿತಿಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿ ಅದರ ಪೋಟಪ್ರತಿಯನ್ನು ಕೊನೆಯಲ್ಲಿ ನೀಡಲಾಗಿದೆ.

**ಇರುಳಿಗ ಬುಡಕಟ್ಟು ಸಮುದಾಯದಲ್ಲಿ ಸ್ಥಿತ್ಯಂತರಗಳು :**

ಕಳೆದ ಮೂವತ್ತು ನಲವತ್ತು ವರ್ಷಗಳ ಹಿಂದೆ ಇದ್ದಂತಹ ಹಲವಾರು ರೀತಿ-ನೀತಿಗಳು ಇಂದು ಅವರಿಂದ ಹಲವಾರು ರೀತಿಯಲ್ಲಿ ಸ್ಥಿತ್ಯಂತರಕ್ಕೆ ಒಳಗೊಂಡಿರುವುದು ಕಂಡುಬರುತ್ತದೆ. ಬುಡಕಟ್ಟು ಸಮುದಾಯದ ಬದುಕಲ್ಲಿ ಸಂಭವಿಸಿರುವ ಸಾಮಾಜಿಕ, ಆರ್ಥಿಕ, ಸಂಪ್ರದಾಯ, ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತ್ಯಂತರಗಳನ್ನು ಇರುಳಿಗ ಸಮುದಾಯದಲ್ಲಿ ಆದ ಬದಲಾವಣೆಗಳನ್ನು ಈ ಅಧ್ಯಾಯದಲ್ಲಿ ಗ್ರಹಿಸಲು ಯತ್ನಿಸಲಾಗಿದೆ.

## ಸಾಮಾಜಿಕ ಸ್ಥಿತ್ಯಂತರ :

ಇರುಳಿಗರು ಇಂದು ಅನೇಕ ಬದಲಾವಣೆಗೆ ಒಳಪಟ್ಟಿದ್ದಾರೆ. ಕಳೆದ ೩೦-೪೦ ವರ್ಷಗಳ ಹಿಂದೆ ಗವಿಗಳಲ್ಲಿ ವಾಸಿಸುತ್ತಿದ್ದ ಇರುಳಿಗರು ಗವಿಯನ್ನು ತೊರೆದು ಊರುಗಳಲ್ಲಿ ವಾಸವಾಗಿರುವುದರ ಮೂಲಕ ತಮ್ಮ ಕಾಲೋನಿಗಳನ್ನು ಸೃಷ್ಟಿ ಮಾಡಿಕೊಂಡಿರುವುದು ಕಂಡು ಬರುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ಇರುಳಿಗರ ಕೆಲವು ಸಮುದಾಯಗಳು ಗುಡಿಸಿಲಿನಲ್ಲಿ ವಾಸಮಾಡುತ್ತಿದ್ದಾರೆ. ಅಲ್ಲದೆ ಸರ್ಕಾರದ ಯೋಜನೆಗಳಲ್ಲಿ ಕೆಲವು ಆಶ್ರಯ, ಅಂಬೇಡ್ಕರ್, ಇಂದಿರಾ ಅವಾಸ್ ಯೋಜನೆಗಳಲ್ಲಿ ನೀಡುವಂತಹ ಸೀಮೆ ಹಂಚಿನ ಮನೆಯಲ್ಲಿ ವಾಸಮಾಡುತ್ತಿದ್ಧಾರೆ. ಇವರು ತಮ್ಮನ್ನು 'ಇಲ್ಲಿಗರು' ಎಂದು ಕರೆಯಿಸಿಕೊಳ್ಳಲು ಮತ್ತು ಗುರುತಿಸಿಕೊಳ್ಳಲು ಇಷ್ಟಪಡುತ್ತಿಲ್ಲ ತಮ್ಮನ್ನು 'ಪೂಜಾರಿ'ಗಳು ಎಂದು ಗುರುತಿಸಿಕೊಳ್ಳಲು ಇಷ್ಟಪಡುತ್ತಿದ್ದಾರೆ.

ಇರುಳಿಗರ ಆಹಾರ ಕ್ರಮದಲ್ಲಿ ಸಾಕಷ್ಟು ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಹಿಂದೆ ಕಾಡಿನ ಬೇಟೆಯನ್ನು ಜೀವಾಳವಾಗಿ ಮಾಡಿಕೊಂಡಿರುವ ಇರುಳಿಗ ಸಮುದಾಯವು ಸರ್ಕಾರದ ಅರಣ್ಯನೀತಿಗಳಿಂದಾಗಿ ಸ್ವೇಚ್ಛೆಯಾಗಿ ಅವರು ಬೇಟೆಯಾಡುವಂತಿಲ್ಲ. ಇವರು ಊರಿನ ನಾಗರೀಕರಂತೆ ಇನ್ನಿತರ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಆಧುನಿಕ ಆಹಾರ ಪದ್ಧತಿಗಳಿಗೆ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

## ಇರುಳಿಗರಲ್ಲಿ ಆರ್ಥಿಕ ಸ್ಥಿತ್ಯಂತರ :

ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯ ಪರಿಸರದ ಇರುಳಿಗರಲ್ಲಿ ಉತ್ತಮವಾದ ಆರ್ಥಿಕ ವ್ಯವಸ್ಥೆ ಕಂಡು ಬರುವುದಿಲ್ಲ ಆದರೆ ಈ ಪ್ರದೇಶದ ಕನಕಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಪ್ರಮುಖವಾಗಿ ಉತ್ತಮವಾದ ಜಮೀನನ್ನು ಹೊಂದಿದ್ದು ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣಬಹುದು.

ಪ್ರಮುಖವಾಗಿ ಇದರ ಆರ್ಥಿಕ ಚಟುವಟಿಕೆಯಲ್ಲಿ ಬಿದಿರು ಅತ್ಯಂತ ಪ್ರಮುಖವಾದ ಆರ್ಥಿಕ ಬಲವನ್ನುಂಟು ಮಾಡುತಿತ್ತು, ಚಂದ್ರಿಕೆ, ಬುಟ್ಟಿ, ನೇಯುವ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಆದರೆ ಇಂದು ಇವರ ಪರಿಸ್ಥಿತಿ ಚಿಂತಾಜನಕವಾಗಿದೆ. ಅರಣ್ಯ ಕಾಯಿದೆಯ ನಿಯಮಗಳಿಂದಾಗಿ ಇರುಳಿಗರು ಈ ವೃತ್ತಿಗಳನ್ನು ಬಿಟ್ಟು ದಿನಗೂಲಿ ನೌಕರರಾಗಿ ಕೂಲಿಕಾರ್ಮಿಕರಾಗಿ ತಮ್ಮ ಬದುಕನ್ನು ನಡೆಸುತ್ತಿರುವುದನ್ನು ಕಾಣಬಹುದು. ಇದಕ್ಕೆ ಸಂಬಂಧ ಪಟ್ಟಂತಹ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಪ್ರಸ್ತಾಪಿಸಲಾಗಿದೆ. ಬುಡಕಟ್ಟು ಸಮುದಾಯದಲ್ಲಿ ಕೆಲವರು ಕೂಲಿಗಳಾಗಿ ಕೆಲಸ ಮಾಡತೊಡಗಿದ್ದಾರೆ. ಹಸು,ಕುರಿ ಕೋಳಿ ಸಾಕುವುದರಷ್ಟು ಬದಲಾವಣೆಗೆ ಒಳಗಾಗಿದ್ದಾರೆ.

## ಇರುಳಿಗರ ಸಂಪ್ರದಾಯದಲ್ಲಿ ಸ್ಥಿತ್ಯಂತರ :

ಇರುಳಿಗರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಮೇಲೆ ಸ್ಥಿತ್ಯಂತರಗಳು ಉಂಟಾಗಿರುವುದನ್ನು ನಾವು ಪ್ರಮುಖವಾಗಿ ಕಾಣಬಹುದಾಗಿದೆ. ಇರುಳಿಗರ ಹುಟ್ಟು, ಮಧುವೆ, ಸಾವು, ಆಚರಣೆಗಳಲ್ಲಿ ಸ್ಥಿತ್ಯಂತರವನ್ನು ಹೊಂದಿರವ ಅಂಶಗಳು ಕಂಡುಬರುತ್ತದೆ.

ಇರುಳಿಗ ಸಮುದಾಯದಲ್ಲಿ ಮದುವೆಯ ವಿಚಾರಗಳಲ್ಲಿ ಪ್ರಮುಖವಾಗಿ ಗಂಡು ಮತ್ತು ಹೆಣ್ಣುಗಳಿಗೆ ಸ್ವಾತಂತ್ರ್ಯವನ್ನು ಕಲ್ಪಿಸಲಾಗಿದೆ ಅಂದರೆ ಗಂಡು ಹೆಣ್ಣುಗಳಿಗೆ ತಮಗೆ ಬೇಕಾದ ಗಂಡು ಹೆಣ್ಣುಗಳನ್ನು ತಾವೇ ಆಯ್ಕೆ ಮಾಡಿಕೊಳ್ಳುವ ಪರಿಪಾಠ ಈ ಸಮುದಾಯದಲ್ಲಿ ಕಂಡುಬರುತ್ತಿತ್ತು. ಆದರೆ ಇಂದು ಗಂಡು ಮತ್ತು ಹೆಣ್ಣುಗಳನ್ನು ಮನೆಗೆ ಹೋಗಿ ನೋಡುವ ಕ್ರಮ ಪ್ರಾರಂಭವಾಗಿ ಮುಂದುವರೆದು ಗಣಕಯಂತ್ರದ ಮೂಲಕ ನೋಡುವ ಸ್ಪಷ್ಟ ಕುರುಹುಗಳು ವ್ಯಕ್ತವಾಗುತ್ತದೆ ವರದಕ್ಷಿಣೆ ಮತ್ತು ಕಾಣಿಕೆಗಳು ಈ ಸಮುದಾಯಗಳಲ್ಲಿ ಇತ್ತೀಚಗೆ ಕಂಡಬರುತ್ತವೆ.

ಸಾವಿನ ಸಮಯದಲ್ಲಿ ಕಂಡು ಬರುತ್ತಿದ್ದ ಕಲ್ಲು ಸೇವೆ ಶವಸಂಸ್ಕಾರದ ವ್ಯವಸ್ಥೆಯು ಇಲ್ಲವಾಗಿರುವುದನ್ನು ಕಾಣಬಹುದುದಾಗಿದೆ. ಇಂದು ಶವಸಂಸ್ಕಾರ ವನ್ನು, ಹೂಳುವ ಮತ್ತು ಸುಡುವುದರ ಮೂಲಕ ಈ ಸಮುದಾಯಗಳು ಬದಲಾಗುತ್ತಿವೆ.

ಹಿಂದೆ ಕಾಡುಗಳಲ್ಲಿ ಪೂಜಿಸುತ್ತಿದ್ದ ಕಲ್ಲುಪೂಜೆ ಹಿರಿಯರ ಪೂಜೆಗಳನ್ನು ಮಾಡುತ್ತಿದ್ದರು ಇಂದು ಈಸ್ಥಳಗಳಲ್ಲಿ ಮಲೈಮಹದೇಶ್ವರ, ಚಾಮುಂಡೇಶ್ವರಿ ಇತ್ಯಾದಿ ದೇವರುಗಳು ಬಂದಿರುವುದು ಸಂಪ್ರದಾಯ ಸ್ಥಿತ್ಯಂತರಕ್ಕೆ ಬಹಳ ಉತ್ತಮವಾದ ಉದಾಹರಣೆಯಾಗಿದೆ ಆಲದಮರ ಇವರಿಗೆ ಪವಿತ್ರ ಕಣಿ ಹೇಳುವ ಧಾರ್ಮಿಕ ಆಚರಣೆಯ ಬಗ್ಗೆ ಇಂದು ನಂಬಿಕೆ ಇಲ್ಲವಾಗುತ್ತಿದೆ. ಮದುವೆ ಇತರೆ ಕಾರ್ಯಕ್ರಮಕ್ಕೆ ಪೌರಾಹಿತ್ಯವನ್ನು ಕರೆಯಿಸುವಷ್ಟರ ಮಟ್ಟಿಗೆ ಇರುಳಿಗರು ತಮ್ಮ ಬದಲಾವಣೆಗೆ ಒಳಗಾಗಿರುವುದನ್ನು ಕಾಣಬಹುದು

## ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತ್ಯಂತರ :

ಆದಿವಾಸಿಗಳು ಭಾರತದ ಮೂಲ ನಿವಾಸಿಗಳು, ಆದಿವಾಸಿಗಲ ಸಂಸ್ಕೃತಿ ಭಾರತೀಯರ ಮೂಲ ಸಂಸ್ಕೃತಿ. ಆದಿವಾಸಿಗಳು ಅರಣ್ಯವಾಸಿಗಳು ಸಮತಾವಾದದ ತಳಹದಿಯ ಮೇಲೆ ಅವರ ಜೀವನಕ್ರಮ ರೂಪಿಸಿಕೊಂಡಿದ್ದಾರೆ. ಆದಿವಾಸಿಗಳು ಸ್ವತಂತ್ರ ಪ್ರೀಯರು, ಬೇಡುವವರಲ್ಲ, ಸೋಮಾರಿಗಳಲ್ಲ, ಸ್ವಯಂ ಆಡಳಿತ ಪದ್ಧತಿಯನ್ನು ತಮ್ಮ ಹಾಡಿಗಳ ನಿರ್ವಹಣೆಗೆ ಬಳಸುತ್ತಿದ್ದರು. ಅರಣ್ಯದಲ್ಲಿ ಆಹಾರ ಸಂಗ್ರಹಣೆ, ಗಿಡಮೂಲಿಕೆ ಸಂಗ್ರಹ, ಕಿರುಬೇಟೆ, ಅರಣ್ಯ ಕಿರು ಸಂಪನ್ಮೂಲ ಸಂಗ್ರಹ, ಜೇನು ಸಂಗ್ರಹ, ಇವರ ಆಹಾರ ಭದ್ರತೆಗೆ ಆಧಾರವಾಗಿತ್ತು. ಇವರು ತುಂಬಾ ಸ್ವಾಭಿಮಾನಿಗಳು ಯಾರನ್ನು ಅವಲಂಬಿಸಿರುವುದಿಲ್ಲ. ಮಕ್ಕಳನ್ನು ತುಂಬಾ ಪ್ರೀತಿಸುತ್ತಾರೆ. ಹಾಗೆಯೇ ಅವರನ್ನು

ಸ್ವತಂತ್ರವಾಗಿ ಬೆಳೆಯಲು ಬಿಡುತ್ತಾರೆ. ಹೆಣ್ಣು ಮತ್ತು ಗಂಡಿನ ನಡುವೆ ಭೇದವಿಲ್ಲ. ಪ್ರಕೃತಿ ಆರಾಧನೆಯೇ ಇವರ ಮೂಲಧರ್ಮ.

ಭಾರತದಲ್ಲಿ ಸುಮಾರು ೧೮ ಕೋಟಿ ಮೂಲ ಬುಡಕಟ್ಟು ಸಮುದಾಯಗಳಿದ್ದಾರೆ. ಇವರಲ್ಲಿ ಸುಮಾರು ಬಹುತೇಕ ಸಮುದಾಯಗಳು ಅರಣ್ಯವಾಸದ ಹಿನ್ನೆಲೆಯಲ್ಲಿ ಬಂದ ಸಮುದಾಯಗಳಾಗಿವೆ. ರಾಷ್ಟ್ರೀಯ ಉದ್ಯಾನವನಗಳ ನಿರ್ಮಾಣ, ರಾಷ್ಟ್ರೀಯ ಹೆದ್ದಾರಿ ನಿರ್ಮಾಣ, ಬೃಹತ್ ಕಾರ್ಖಾನೆಗಳ ನಿರ್ಮಾಣ, ದೊಡ್ಡ ದೊಡ್ಡ ಅಣೆಕಟ್ಟುಗಳ ನಿರ್ಮಾಣ ಮತ್ತು ಕೈಗಾರಿಕೆಗಳಿಗೆ ಬೇಕಾದ ಖನಿಜ ಸಂಪತ್ತಿಗಾಗಿ ಬುಡಕಟ್ಟು ಸಮುದಾಯಗಳನ್ನು ಅವರ ಮೂಲ ಸ್ಥಾನದಿಂದ ಹೊರ ಹಾಕಿ ನಿರ್ಗತಿಕರನ್ನಾಗಿ ಮಾಡಿರುವ ಸಂದರ್ಭಗಳು ಹಲವುಂಟು. ಹಾಗಾಗಿ ಇವರು ಇಂದಿಗೂ ಕೂಡ ಕಡು ಬಡತನದಲ್ಲಿ ಜೀವನ ನಡೆಸುತ್ತಿರುವ ಸ್ಥಿತಿ ಕಾಣುತ್ತಿದ್ದೇವೆ. ಭಾರತ ದೇಶದ ಪರಿಸ್ಥಿತಿಯಲ್ಲಿ ಬುಡಕಟ್ಟು ಸಮುದಾಯಗಳ ಪರಿಸ್ಥಿತಿಯು ಹೀಗಾಗಿದ್ದರೆ, ಬೆಂಗಳೂರು ಗ್ರಾಮಾಂತರ ರಾಮನಗರ ಜಿಲ್ಲೆಯ ಪರಿಸರದ ಇರುಳಿಗ ಹಗೂ ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸ್ಥಿತಿ ಇದರಿಂದೇನು ಹೊರತಾಗಿಲ್ಲ. ಇವರ ಬದುಕಿನಲ್ಲಿ ಉಂಟಾಗುವ ಸಮಸ್ಯೆಗಳಿಗೆ ಮೂಲ ಕಾರಣ ಶಿಕ್ಷಣದ ಕೊರತೆ. ಆದಿವಾಸಿಗಳಿಗೆ ಬೇಕಾಗಿರುವುದು ಜೀವನ ಶಿಕ್ಷಣವೇ ಹೊರತು ಉದ್ಯೋಗಕ್ಕಾಗಿ ಅಥವಾ ಮೋಸ ಮಾಡುವಂತಹ, ದುರುಪಯೋಗ ಪಡಿಸಿಕೊಳ್ಳುವಂತಹ ಶಿಕಣ ಅಲ್ಲ. ಇದರಿಂದಾಗಿ ಅವರು ಅರಣ್ಯದಲ್ಲಿ ವಾಸಿಸುತ್ತಿದ್ದಾಗ ಅವರಿಗೆ ಬೇಕಾದ ಶಿಕ್ಷಣವಾದ ಬದುಕಲಿಕ್ಕೆ, ಆಹಾರ ಸಂಗ್ರಹಣೆ ಮಾಡಲಿಕ್ಕೆ, ಸಹಬಾಳ್ವೆಯಿಂದ ಬಾಳ್ವೆ ನಡೆಸಲು, ಹಂಚಿ ತಿನ್ನುವ ಪದ್ಧತಿ, ಸಾಮಾಜಿಕ ಬದುಕು, ಸಮತಾವಾದದ ತಳಹದಿಯ ಮೇಲೆ ಜೀವನ ನಡೆಸುವುದು. ಹಿರಿಯರಿಗೆ ಗೌರವ, ಗಮಡು ಹೆಣ್ಣಿನ ನಡುವೆ ತಾರತಮ್ಯವಿಲ್ಲದೆ ಪ್ರತಿಪಾದಿಸುವುದು. ತಮ್ಮ ಬದುಕನ್ನು ತಮ್ಮ ಕಾಲ ಮೇಲೆ ನಿಂತು ನಡೆಸುವುದು. ಇದಕ್ಕೆ ಅಗತ್ಯವಾದ ಶಿಕ್ಷಣವನ್ನು ಅವರ ಸಮುದಾಯದಲ್ಲಿಯೇ ಹಿರಿಯರಿಂದ ಕಿರಿಯರಿಗೆ ಹರಿದು ಬರುವುದು. ಈ ಸಮುದಾಯಗಳಲ್ಲಿ ನಡೆಯುವ ಶಿಕ್ಷಣದ ಒಂದು ಪ್ರಕ್ರಿಯೆ. ಈ ವ್ಯವಸ್ಥೆಯಲ್ಲಿದ್ದ ಸಮುದಾಯಗಳನ್ನು ತಮ್ಮ ಮೂಲ ಸ್ಥಾನದಿಂದ ಹೊರ ಹಾಕಿದ ಮೇಲೆ ಅವರ ಎಲ್ಲಾ ಮೌಲ್ಯಗಳು, ಭಾಷೆ, ಸಂಸ್ಕೃತಿಗೆ ದೊಡ್ಡ ಪೆಟ್ಟು ಬಿದ್ದು ಹೊರ ಜಗತ್ತಿನ ಅನ್ಯ ಸಂಸ್ಕೃತಿ, ಭಾಷೆ ಮೌಲ್ಯಗಳಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳುವುದು ಅಸಾಧ್ಯವಾಯಿತು.

ಬುಡಕಟ್ಟು ಸಮುದಾಯಗಳು ಅರಣ್ಯದಿಂದ ಹೊರ ಬಂದ ಮೇಲೆ ತಮ್ಮ ಬದುಕನ್ನು ಹೊಸ ಸಂಸ್ಕೃತಿಯ ನೆಲೆ ಗಟ್ಟಿನ ಮೇಲೆ ಕಟ್ಟಬೇಕಾದರೆ ತಮ್ಮ ಮೂಲ ಬದುಕಿನ ಸಂಸ್ಕೃತಿ, ಭಾಷೆ, ಮೌಲ್ಯಗಳನ್ನು ಗೌರವಿಸುವ ಮೂಲಕ ಹಾಗೂ ಹೊಸ ಸಮಾಜದ ಮೌಲ್ಯಗಳನ್ನು ಪ್ರಶ್ನಿಸುವುದರ ಮೂಲಕ ತಮ್ಮ ಬದುಕಿಗೆ ಯೋಗ್ಯವಾದವುಗಳನ್ನು ಅಳವಡಿಸಿಕೊಳ್ಳುವ ಅವಕಾಶಗಳನ್ನು ಕಲ್ಪಿಸುವುದು. ಆದ ಕಾರಣ ಇಂದು ಇರುಳಿಗರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ.

ಇರುಳಿಗರು ಸಾಂವಿಧಾನಿಕ ನಿಯಮಗಳಿಗೆ ಅನುಸಾರವಾಗಿ ಮೀಸಲು ಕ್ಷೇತ್ರಗಳಲ್ಲಿ ಸ್ಪರ್ಧಿಸುವುದರ ಮೂಲಕ ರಾಜಕೀಯವಾಗಿ ಪ್ರಾಧಾನ್ಯತೆಯನ್ನು ಪಡೆದು

ಕೊಂಡಿರುವುದು ಕಂಡು ಬರುತ್ತದೆ. ಗ್ರಾಮಪಂಚಾಯ್ತಿ ಸದಸ್ಯರು, ತಾಲ್ಲೂಕು ಪಂಚಾಯ್ತಿ, ಜಿಲ್ಲಾ ಪಂಚಾಯ್ತಿಗಳಲ್ಲಿ ಈ ಸಮುದಾಯಗಳು ಪ್ರತಿನಿಧಿಸುವುದರ ಮೂಲಕ ರಾಜಕೀಯವಾಗಿ, ಪ್ರಜಾಸತ್ತಾತ್ಮಕವಾಗಿ ಮಹತ್ವವನ್ನು ಪಡೆದುಕೊಳ್ಳುವ ಸ್ಥಿತಿಗತಿಗಳು ವ್ಯಕ್ತವಾಗುತ್ತವೆ.

**ಹಕ್ಕಿಪಿಕ್ಕಿ ಸಮುದಾಯದಲ್ಲಿ ಸಾಮಾಜಿಕ ಸ್ಥಿತ್ಯಂತರ :**

"ಅಲೆಮಾರಿಗಳು ಸದಾ ಸಂಚಾರಿಗಳಾಗಿದ್ದು ಎಲ್ಲಿಯೂ ಶಾಶ್ವತವಾಗಿ ನೆಲೆ ಊರುವುದಿಲ್ಲ. ಆದರೆ ಪ್ರಾದೇಶಿಕವಾಗಿ ಅಲ್ಲಲ್ಲಿ ಅವರದೆ ಆದ ಪ್ರತ್ಯೇಕ ಸ್ಥಳಗಳದ್ದು ವರ್ಷಕ್ಕೊಮ್ಮೆ ಸಂಚಾರ ಮುಗಿಸಿಕೊಂಡು ಸ್ವಂತ ಸ್ಥಾನಕ್ಕೆ ಮರಳುತ್ತಾರೆ" ಎಂದು ಹೇಳುವ ಡಾ.ಪಿ.ಕೆ. ಖಂಡೋಬಾ ಅವರ ಮಾತುಗಳು ಪ್ರಮುಖವಾಗಿ ಅಲೆಮಾರಿಗಳು ಒಂದೆಡೆ ನೆಲೆನಿಂತವರಲ್ಲ ಎಂಬ ಸಂದೇಶವನ್ನು ನಮಗೆ ರವಾನಿಸುತ್ತದೆ. ಆದರೆ ನಮಗೆ ಪ್ರಮುಖವಾಗಿ ಹಕ್ಕಿಪಿಕ್ಕಿ ಸಮುದಾಯದ ಅಧ್ಯಯನ ಮಾಡಿದಾಗ, ಹಕ್ಕಿಪಿಕ್ಕಿ ಸಮುದಾಯವು ಇಂದು ಒಂದೆಡೆ ನೆಲೆನಿಂತಿರುವುದನ್ನು ಕಾಣಬಹುದು.

ಅಲೆಮಾರಿಗಳಾಗಿ ಊರೂರು ಸುತ್ತುತ್ತಿರುವಾಗ ಹಕ್ಕಿಪಿಕ್ಕಿ ಸಮುದಾಯದವರು ಮನೆ ಮನೆಗಳಲ್ಲಿ ಭಿಕ್ಷೆ ಬೇಡುತ್ತಿದ್ದರು. ಆದರೆ ಇಂದು ಭಿಕ್ಷೆ ಪ್ರವೃತ್ತಿಯನ್ನು ಬಿಟ್ಟು ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತಾರೆ.

ಹಕ್ಕಿಪಿಕ್ಕಿ ಸಮುದಾಯದವರು ಅಲೆಮಾರಿಗಳಾಗಿದ್ದುದರಿಂದ ಅವರಿಗೆ ಖಾಯಂ ಆದ ವಸತಿ ವ್ಯವಸ್ಥೆ ಇರಲಿಲ್ಲ. ಈ ಪದ್ಧತಿಗೆ ಇತ್ತೀಚೆಗೆ ಸಡಿಲಗೊಂಡು ಖಾಯಂ ಆಗಿ ಮಣ್ಣು ಇಟ್ಟಿಗೆಗಳಿಂದ ನಿರ್ಮಿಸಿದ ಗೋಡೆಗಳು ಮೇಲು ಚಾವಣಿಗೆ ಹೆಂಚು ಇಲ್ಲವೆ ತೆಂಗಿನ ಗರಿಗಳನ್ನು ಬಳಸಿ ಚಿಕ್ಕ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಇದು ಅವರ ಖಾಯಂ ನೆಲೆನಿಂತ ಊರಿನಲ್ಲಿ ಕಾಣುವ ಅಂಶವಾದರೂ, ಊರಿಂದ ಊರಿಗೆ ಅಲೆಯುವಾಗ ಅವರು ಗುಡ್ಡಲು ಅಥವಾ ಗುಡಾರಗಳಲ್ಲಿಯೇ ವಾಸಿಸುತ್ತಾರೆ. ಆದರೆ ಇಂದು ಹಕ್ಕಿಪಿಕ್ಕಿ ಸಮುದಾಯಗಳಲ್ಲಿ ಹಲವಾರು ಬದಲಾವಣೆಗೆ ಒಳಪಟ್ಟಿರುವ ಅಂಶಗಲು ಸ್ಪಷ್ಟವಾಗಿದೆ. ಸರ್ಕಾರದ ವಿವಿಧ ಯೋಜನೆಯ ಸವಲತ್ತುಗಳು ಧರ್ಮಸ್ಥಳದ ಸಹಾಯದಿಂದ ಮನೆ, ಹೆಂಚು, ವಿದ್ಯುತ್ ಮುಂತಾದ ಸೌಲಭ್ಯಗಳನ್ನು ಈ ಸಮುದಾಯಗಳು ಬಳಸಿಕೊಂಡಿರುವುದನ್ನು ಕಾಣಬಹುದು.

**ಹಕ್ಕಿಪಿಕ್ಕಿ ಸಮುದಾಯದ ಆರ್ಥಿಕ ಸ್ಥಿತ್ಯಂತರ :**

ಆರ್ಥಿಕ ಸ್ಥಿತ್ಯಂತರಗಳೆಂದರೆ ಅವರ ವೃತ್ತಿ ಬದುಕಿನಲ್ಲಿ ನಡೆದ ಬದಾಲವಣೆಗಳನ್ನು ನಾವು ಮನಗಾಣಬಹುದು. ಈ ಸಮುದಾಯ ಇಂದು ವ್ಯಾಪಾರವನ್ನು ತಮ್ಮ ಪ್ರಮುಖ ಕಸಬು ಮಾಡಿಕೊಂಡಿವೆ.ಬೇಟೆಗೆ ಮತ್ತು ಅದರ ಆದಾಯಕ್ಕೆ ಅರಣ್ಯ ಇಲಾಖೆಯ ನೌಕರರಿಂದ ಮತ್ತು ರಕ್ಷಣಾ ಇಲಾಖೆಯವರಿಂದ ಬಹಳಷ್ಟು ತೊಂದರೆಗಳನ್ನು ಅನುಭವಿಸುತ್ತಿರುವ ಈ ಸಮುದಾಯ ತಮ್ಮ ವ್ಯಾಪಾರದಲ್ಲಿ ಬಹಳ ತೊಂದರೆ ಅನುಭವಿಸಬೇಕಾಗಿದೆ. ಉತ್ತರ ಭಾರತದಿಂದ ತಾವು

ಹಣಕೊಟ್ಟು ಕೊಂಡು ತಂದ ವಸ್ತುಗಳಿಗೆ ಯಾವುದೇ ಸಾಕ್ಷ್ಯಾಧಾರಗಳಿಲ್ಲದ ಸ್ಥಿತಿಯಿಂದಾಗಿ ಕಳ್ಳ ಸಾಗಣೆದಾರರ ಹಣೆಪಟ್ಟಿ ಹೊತ್ತು ಬಹಳ ಕಷ್ಟಪಡುತ್ತಿದ್ದಾರೆ. ಹಕ್ಕಿಪಿಕ್ಕಿಯರು ನಾನಾ ಕಸುಬುಗಳ ಜನ. ಅವರ ಯಾವ ಸಂದರ್ಭ ಮತ್ತು ಯಾವ ಪ್ರದೇಶಗಳಲ್ಲಿದ್ದಾರೆಂಬುದು ಅವರ ಕಸುಬುಗಳ ಸ್ವರೂಪವನ್ನು ತಿಳಿಸುತ್ತದೆ. ಇತ್ತೀಚೆಗೆ ಸರ್ಕಾರದ ಪುನರ್ವಸತಿ ಯೋಜನೆಯಡಿ ಖಾಯಂ ಆಗಿ ವಾಸಿಸುವ ಕಡೆ ಕೆಲವು ಕುಟುಂಬಗಳನ್ನು ಹೊರತು ಪಡಿಸಿ ಉಳಿದವರು ವ್ಯವಸಾಯವನ್ನು ಅವಲಂಬಿಸಿದ್ದಾರೆ. ವ್ಯವಸಾಯದೊಂದಿಗೆ ಅವರು ಆಗಾಗ್ಗೆ ಬೇಟೆ ಮಾಡುತ್ತಾ ಸಣ್ಣ ವ್ಯಾಪಾರದಲ್ಲಿ ತೊಡಗಿಸಿಕೊಳ್ಳುತ್ತಾರೆ.

ಗಂಡು-ಹೆಣ್ಣು ನಿರಂತರ ದುಡಿಮೆಯಲ್ಲಿ ತೊಡಗುತ್ತಾರೆ. ಗಂಡಸರು ಪ್ಲಾಸ್ಟಿಕ್ ಕೂಡ ಮಾರಾಟ, ಫ್ಯಾಕ್ಟರಿ ಕೆಲಸ, ಮನೆ ಕಟ್ಟಡ ಕೆಲಸ, ಹಮಾಲಿ, ಎತ್ತಿನಗಾಡಿ, ರಿಕ್ಷಾಗಳನ್ನು ಅವಲಂಬಿಸಿದರೆ, ಹೆಂಗಸರು ಟಿಕಳಿ, ಸ್ನೋಪೌಡರ್, ಚಾಪೆ ಹೆಣೆದು ಮಾರಾಟ ಮಾಡುವುದು. ಅಲ್ಲದೆ ನಗರದ ಸುತ್ತ ಮುತ್ತಲಿನಲ್ಲಿಯೇ ಪ್ಲಾಸ್ಟಿಕ್ ಹೂ ಕೂಡ ವ್ಯಾಪಾರ ಮಾಡುವುದನ್ನು ರೂಢಿಸಿಕೊಂಡಿದ್ದಾರೆ.

**ಹಕ್ಕಿಪಿಕ್ಕಿ ಸಂಪ್ರದಾಯದ ಸ್ಥಿತ್ಯಂತರ :**

ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಇವರು ನಂಬಿಕೊಂಡು ಬಂದಿರುವ ಆಚರಣೆಗಳು, ನಂಬಿಕೆಗಳು, ಸಂಪ್ರದಾಯಗಳು ಇಂದು ಮರೆಯಾಗುತ್ತಿವೆ. ಅವುಗಳಿಂದ ಯಾವ ಪ್ರಯೋಜನವಿಲ್ಲವೆಂಬ ನಿಲುವು ತಾಳಿದ್ದಾರೆ. ಹಿಂದಿನ ವ್ಯವಸ್ಥೆಯನ್ನು ಅಲ್ಲಗಳೆದು ಇಂದಿನ ಯುವಶಕ್ತಿಗಳು ಆಲೋಚನೆ ಮಾಡುವ ಹಂತ ತಲುಪಿದ್ದಾರೆ. ೩೦-೪೦ ವರ್ಷಗಳ ಹಿಂದಿನ ಸ್ಥಿತಿ ಈಗಿರುವ ಯಾವುದೇ ಅಲೆಮಾರಿಗಳಲ್ಲಿ ಕಾಣುವುದಿಲ್ಲ.

ಸಮೂಹ ಸಂವಹನ ಮಾಧ್ಯಮಗಳು ಬಳಕೆ ಮಾಡಿಕೊಳ್ಳುವುದರಿಂದ ಆಧುನಿಕತೆಯ ಗಾಳಿ ಈ ಜನರ ಮೇಲು ತೀವ್ರವಾದ ಪ್ರಭಾವ ಬೀರಿದೆ. ಇನ್ನುಳಿದ ಸಮಾಜದವರಂತೆ ಈ ಸಮಾಜ ಪರಿವರ್ತನೆಗೊಳ್ಳುತ್ತದೆ. ಸಮಕಾಲೀನ ಸಮಾಜದ ಆಚಾರ-ವಿಚಾರ ಸಂಪ್ರದಾಯಗಳಿಂದ ಇಂದಿನ ಯುವ ಪೀಳಿಗೆಯವರು ಸಾಕಷ್ಟು ಪ್ರಭಾವವಿತರಾಗಿದ್ದಾರೆ. ಇವರಲ್ಲಿ ಹಿಂದಿನ ಪರಂಪರೆ ಉಳಿಸಿಕೊಂಡು ಬರಬೇಕೆಂಬ ಆಸಕ್ತಿ ಖಂಡಿತವಾಗಿಯೂ ಉಳಿದಿಲ್ಲ. ಭಿಕ್ಷಾ ವೃತ್ತಿಯನ್ನು ಬದಿಗೊತ್ತಿ ಸ್ವಾಭಿಮಾನದಿಂದ ಬದುಕ ಬೇಕೆಂಬ ಛಲ ಹೊಂದಿದ್ದಾರೆ.

**ಹಕ್ಕಿಪಿಕ್ಕಿ ಸಮುದಾಯದಲ್ಲಿ ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತ್ಯಂತರ :**

ಹಕ್ಕಿಪಿಕ್ಕಿ ಸಮುದಾಯ ಇತ್ತೀಚೆಗೆ ಮಕ್ಕಳನ್ನು ವ್ಯಾಪಾರಕ್ಕೆ ಕರೆದುಕೊಂಡು ಹೋಗುವುದರ ಬದಲು ಓದಲು ಕಳುಹಿಸುತ್ತಿದ್ದಾರೆ. ಇದಂತೂ ಅವರು ಬದುಕಿನ ದೊಡ್ಡ ಬದಲಾವಣೆ. ಈಗಾಗಲೇ ಸಾಕಷ್ಟು ಜನ ಅಕ್ಷರಸ್ಥರಾಗಿರುವುದು ಕಂಡುಬರುತ್ತದೆ. ಹಲವಾರು ಮಂದಿ ಸರ್ಕಾರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಹಲವು ಮಂದಿ

ಪದವೀಧರಾಗಿದ್ದಾರೆ. ಇಂದು ಬೆಂಗಳೂರು ನಗರದ ಕಾಲೇಜುಗಳಲ್ಲಿ ಹಲವು ಮಂದಿ ವಿವಿಧ ಪದವಿಗಳಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಒಂದು ಊರಿನಲ್ಲಿ ಒಂದೆರಡು ದಿನವಿರದ ಅತಂತ್ರ ಸ್ಥಿತಿಯ ಹಕ್ಕಿಪಿಕ್ಕಿಯರಲ್ಲಿ ವಿದ್ಯಾಭ್ಯಾಸದ ಬಗ್ಗೆ ವಹಿಸಿರುವ ಆಸಕ್ತಿ ನಿಜವಾಗಿಯೂ ಒಂದು ಕ್ರಾಂತಿಯಂತೆಯೇ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಹಲವು ಶಾಲೆಗಳ ಅಲ್ಲಿನ ಅಧ್ಯಾಪಕರ ಶ್ರಮ ಅಪಾರವಾದುದ್ದು. ಚಿಕ್ಕಮಟ್ಟಿಯ ಅಂಬೇಡ್ಕರ್ ಶಾಲೆಯ ಪ್ರಯತ್ನ ಈ ಹಿನ್ನೆಲೆಯಲ್ಲಿ ನೆನೆಯುವಂತದ್ದು.

ಹಕ್ಕಿಪಿಕ್ಕಿಗಳು ಸಂವಿಧಾನಿಕ ನಿಯಮಗಳಗನುಸರವಾಗಿ ಮೀಸಲು ಕ್ಷೇತ್ರಗಳಲ್ಲಿ ಸ್ಪರ್ಧಿಸುವುದರ ಮೂಲಕ ರಾಜಕೀಯವಾಗಿ ಪ್ರಾಧ್ಯಾನ್ಯತೆಯನ್ನು ಪಡೆದುಕೊಂಡಿದ್ದಾರೆ. ಇಂದು ಗ್ರಾಮಪಂಚಾಯ್ತಿ, ತಾಲ್ಲೂಕು ಪಂಚಾಯ್ತಿ, ಜಿಲ್ಲಾ ಪಂಚಾಯ್ತಿಗಳಲ್ಲಿ ಈ ಸಮುದಾಯ ಪ್ರತಿನಿಧಿಸುವುದರ ಮೂಲಕ ರಾಜಕೀಯವಾಗಿ ಪ್ರಜಾಸತ್ತಾತ್ಮಕವಾಗಿ ಮಹತ್ವವನ್ನು ಪಡೆದುಕೊಳ್ಳುವ ಸ್ಥಿತಿಗತಿಗಳು ಕಂಡುಬರುತ್ತದೆ.

**ಅಡಿ ಟಿಪ್ಪಣಿ :**

೧. seepapers realating to chotanagapur's Agrariandisputes pac pp1-೬

೨. j.Reid final reports on survery & settlement operation in the districts of Ranchi, ೧೯೦೨-೧೦ , Calcutta ೧೯೧೨-p೮೬

೩. munda&their country page-೬

೪. ಡಾ.ಹಿ.ಚಿ. ಬೋರಲಿಂಗಯ್ಯ, ಕಾಡು ಕಾಂಕ್ರೀಟ್ ಮತ್ತು ಜಾನಪದ, ಪುಟ ೩೧

೫. ಪ್ರೊ. ಬರಗೂರು ರಾಮಚಂದ್ರಪ್ಪ, ಪ್ರಧಾನ ಸಂಪಾದಕರು, ಇಲ್ಲಿಗರ ಸಂಸ್ಕೃತಿ, ಪುಟ ೩೮

೬. ತೀ.ನಂ ಶಂಕರನಾರಾಯಣ, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪುಟ ೧೧

# ಅಧ್ಯಾಯ-5

## ಉಪಸಂಹಾರ

ಇರುಳಿಗರು ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ, ಸಾಮಾಜಿಕ, ಜಾನಪದದ ವಿವಿಧ ಮುಖಗಳನ್ನು ಕುರಿತ ಈ ಮಹಾಪ್ರಬಂಧದ ಐದು ಅಧ್ಯಾಯಗಳಲ್ಲಿ ಅನೇಕ ಹೊಸ ವಿಷಯಗಳನ್ನು ನಿರೂಪಿಸಲಾಗಿದೆ.

ಇರುಳಿಗ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದವರಿಗೆ ರಾಜನೊಬ್ಬನಿದ್ದು, ಅವನು ಕೋಟೆಕಟ್ಟಿ, ಆಳ್ವಿಕೆ ಮಾಡಿದ ಯಾವುದೇ ದಾಖಲೆಗಳಾಗಲೀ, ದಂತಕತೆ, ಐತಿಹ್ಯಗಳಾಗಲೀ ಲಭ್ಯವಿರುವುದಿಲ್ಲ. ಎಲ್ಲಿಯೂ ಅರಮನೆ, ರಾಜಧಾನಿ, ರಾಜ್ಯ, ಸೈನ್ಯ, ಯುದ್ಧ, ಚದುರಂಗ ಬಲಗಳ ವರ್ಣನೆ ಸಿಗುವುದಿಲ್ಲ. ಅಂತಹ ರಾಜವೈಭವದ ಅನುಭವಗಳೇನಾದರೂ ಇದ್ದಿದ್ದರೆ ಈ ಜನರ ಸಾಹಿತ್ಯದಲ್ಲಿಯಾದರೂ ಅದರ ಛಾಯೆ ಒಂದಿಷ್ಟಾದರೂ ನುಸುಳುತ್ತಿತ್ತು. ಎಲ್ಲಿಯೂ ಅದು ಒಡಮೂಡಿರುವುದಿಲ್ಲ. ಕರ್ನಾಟಕದ ಬುಡಕಟ್ಟುಗಳಲ್ಲಿ ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯಗಳನ್ನು ಕುರಿತಂತೆ ವಿವರಗಳು ಅತಿ ವಿರಳವಾಗಿದ್ದು. ಆ ಹಿನ್ನೆಲೆಯಲ್ಲಿ ಹುಡುಕಾಟ ನಡೆಸಿದಾಗ ಹಲವಾರು ಹೊಸ ವಿಷಯಗಳು ದೊರೆತು ಅವೆಲ್ಲವನ್ನೂ ಸೂತ್ರಬದ್ಧವಾಗಿ ಜೋಡಿಸಿ ಕುತೂಹಲಕಾರಿಯಾಗಿದ್ದು, ಅವರೇ ಹೇಳುವ ದಂತಕತೆ, ಐತಿಹ್ಯಗಳ ಆಧಾರದ ಮೇಲೆ ಒಂದು ಸಿದ್ಧಾಂತವನ್ನು ನಿರೂಪಿಸಲಾಗಿದೆ. ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯದವರ ಮೂಲವನ್ನು ಕುರಿತ ಎಲ್ಲಾ ಸಾಧ್ಯತೆ, ಸುಳಿವುಗಳ ಆಧಾರದ ಮೇಲೆ ಇರುಳಿಗರು, ತಮಿಳು ಮೂಲದಿಂದ ಹಕ್ಕಿಪಿಕ್ಕಿಗಳು ರಾಜಸ್ಥಾನ ಮೂಲದಿಂದ ಬಂದವರೆಂದು ನಿರೂಪಿಸಲಾಗಿದೆ.

ಬುಡಕಟ್ಟು ಸಮುದಾಯ ಅಧ್ಯಯನವು ವ್ಯಾಪಕತೆಯನ್ನು ಪಡೆದುಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಬುಡಕಟ್ಟು ಸಮುದಾಯದ ಅಧ್ಯಯನದ ಅವಶ್ಯಕತೆಯೂ ಸಹ ಬಹಳವಾಗಿದೆ. ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯದ ಅಧ್ಯಯನಕ್ಕಿಳಿದಾಗ ಲಕ್ಷಣಗಳನ್ನು ಮೇಲುನೋಟದಲ್ಲೇ ಕಾಣಬಹುದಾಗಿದೆ. ಬುಡಕಟ್ಟು ಸಮುದಾಯವಾಗಿದ್ದ ಮಾನವ ಕಾಲ ಸರಿದಂತೆ ನಾಗರೀಕತೆಯನ್ನು ಮೈಗೂಡಿಸಿಕೊಂಡು ಇಂದಿನ ಸ್ಥಿತಿಗೆ ಬಂದಿದ್ದರೂ. ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯಗಳ ಆದಿವಾಸಿ ಸಂಸ್ಕೃತಿಯ ಅಂಗವಾಗಿಯೇ ಉಳಿದಿರುವುದನ್ನು ಕಂಡಾಗ ಇವರ ಬದುಕಿನಲ್ಲಿನ ವಿಶೇಷತೆಯು ಗೋಚರವಾಗದಿರದು. ಇಂಥ ವಿಶಿಷ್ಟ ಸಮುದಾಯಗಳ ಸಾಂಸ್ಕೃತಿಕ, ಸಾಮಾಜಿಕ, ಸಾಹಿತ್ಯಿಕ ಮುಖಗಳನ್ನು ಪರಿಚಯಿಸುವ ವಿನಮ್ರ ಪ್ರಯತ್ನವೇ ಈ ಅಧ್ಯಯನ. ಇರುಳಿಗರನ್ನು ಬುಡಕಟ್ಟು ಎಂದು ಪರಿಗಣಿಸಿರುವುದರಿಂದ ಭಾರತೀಯ ಸಂದರ್ಭದಲ್ಲಿ ಮತ್ತು ಕರ್ನಾಟಕದ ಸಂದರ್ಭದಲ್ಲಿ ಬುಡಕಟ್ಟು ಲಕ್ಷಣ. ಅವರ ಸ್ಥಾನಮಾನ, ಅವರು ನೆಲೆಸಿರುವ ಪ್ರದೇಶ, ಪರಿಸರ, ಸುತ್ತ ಮುತ್ತಣ ಸ್ಥಿತಿಗತಿಗಳು ಇತ್ಯಾದಿ ವಿವರಗಳ ಅವಶ್ಯಕತೆಯನ್ನು ಮನಗಂಡು ಆ ನಿಟ್ಟಿನಲ್ಲಿ ಅಧ್ಯಯನ ನಡೆಸಲಾಗಿದೆ. ಈ

ಅಧ್ಯಯನವು ಸಂಪೂರ್ಣ ಕ್ಷೇತ್ರಕಾರ್ಯಾಧಾರಿತವಾಗಿದ್ದು, ಇಡೀ ಸಮುದಾಯಗಳ ವಿಸ್ತೃತವಾದ, ವಿಸ್ತಾರವಾದ ಅಧ್ಯಯನವಾಗಿದೆ. ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯಗಳು ವಾಸಿಸುವ ವ್ಯಾಪ್ತಿಯ ಪರಿಸರ, ಭೌಗೋಳಿಕ ವಿವರಗಳನ್ನು ಗಮನಿಸಿದಾಗ ದಟ್ಟ ಅರಣ್ಯಗಳ ನಡುವೆ ಬದುಕಲು ಬಹಳ ಇಷ್ಟಪಡುವುದನ್ನು ಕಾಣಬಹುದು. ಇದಕ್ಕೆ ಕಾರಣಗಳೂ ಇಲ್ಲದಿಲ್ಲ: ತಾವು ಬದುಕಲು ಮೂಲಭೂತ ಅಗತ್ಯಗಳಾದ ಆಹಾರ, ನೀರು ನೈಸರ್ಗಿಕ ನೆಲೆಗಳನ್ನು ಅವರು ಹುಡುಕಿಕೊಂಡಿದ್ದಾರೆ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎಂಬ ಮೊದಲ ಅಧ್ಯಾಯದಲ್ಲಿ ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯಗಳಿಗೆ ಸಂಬಂಧಿಸಿದ ಆಕರಗಳು, ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯಗಳು ನೆಲೆನಿಂತ ಪ್ರದೇಶಗಳ ವಿವರಗಳಿವೆ. ಹೆಸರಿನ ಮೂಲವನ್ನು ಕುರಿತಂತೆ ದೊರೆತ ವಿವಿಧ ಐತಿಹ್ಯ, ದಂತಕತೆಗಳ ಆಧಾರದ ಮೇಲೆ ವಿಶ್ಲೇಷಣೆ ನಡೆಸಲಾಗಿದೆ.

ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ ಎಂಬ ಎರಡನೇ ಅಧ್ಯಾಯದಲ್ಲಿ ವಾಸಸ್ಥಳ, ಮನೆಗಳ ರಚನೆ, ಬೇಟೆಯ ವಿವರಗಳು ಬರುತ್ತವೆ. ಅವರ ಸಾಮಾಜಿಕ ವ್ಯವಸ್ಥೆಯನ್ನು ಸಮೀಕ್ಷಿಸುವುದರ ಜೊತೆಗೆ ಅವರದೇ ಆದ ಕುಲಪಂಚಾಯ್ತಿ ವ್ಯವಸ್ಥೆಯ ವಿವರಗಳನ್ನು ಕೊಡಲಾಗಿದೆ. ಬದುಕು ದುಸ್ತರವಾಗಿದ್ದರೂ ಸಾಮಾಜಿಕ ಕಟ್ಟುಪಾಡುಗಳ ಬದ್ಧತೆಯನ್ನು ಗಾಢವಾಗಿ ಕಾಣಬಹುದಾಗಿದೆ. ಹೆಣ್ಣಿನ ಸ್ಥಾನ, ಶೀಲ ಅಶ್ಲೀಲಗಳ ಕಲ್ಪನೆ, ಹಿರಿಯರ, ಪಂಚರ ಬಗೆಗಿನ ಗೌರವಾದರಗಳ ವಿವರಗಳಿವೆ. ಕಟ್ಟೆ ಮನೆಗಳ ಬಗೆಗೆ ತಿಳಿಸುತ್ತಾರಾದರೂ ದಾಖಲೆಗಳಾವುವೂ ಲಭ್ಯವಿರುವುದಿಲ್ಲದಿರುವುದು ಈ ಅಧ್ಯಯನದ ಮಿತಿಗಳಲ್ಲೊಂದಾಗಿದೆ. ಅಂಥ ದಾಖಲೆಗಳು ದೊರೆತರೆ ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯದವರನ್ನು ಕುರಿತ ಮುಂದಿನ ಅಧ್ಯಯನಕ್ಕೆ ಹೊಸ ಆಯಾಮ ದೊರೆತಂತಾಗುತ್ತದೆ.

ಇಷ್ಟೆಲ್ಲಾ ಹೊಸತನ ಹಾಗೂ ವಿಶಿಷ್ಟತೆಗಳನ್ನು ಈ ಅಧ್ಯಯನ ಅಂತರ್ಗತಿಸಿಕೊಂಡಿದ್ದರೂ ಅದರದೇ ಆದ ಮಿತಿಗಳಿಲ್ಲದಿಲ್ಲ. ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯಗಳ ಐತಿಹಾಸಿಕ ವಿವರಗಳು ದೊರೆತಿಲ್ಲ. ಕುಲಪಂಚಾಯ್ತಿಗೆ ಸಂಬಂಧಿಸಿದಂತೆ ಪ್ರಸ್ತಾಪಗಳಿದ್ದರೂ ಈ ಸಮುದಾಯ ಸಂಬಂಧಿ ನಿಖರ ದಾಖಲೆಗಳು ಯಾವುದೇ ಕಟ್ಟೆಮನೆಗಳಲ್ಲೂ ಲಭ್ಯವಿಲ್ಲ. ಬಹು ವಿಶಿಷ್ಟವಾದ ಶವಸಂಸ್ಕಾರ ಪದ್ಧತಿಯ ಕಲ್ಲುಸೇವೆ ಹೊಸ ವಿವರಗಳನ್ನು ತೆರೆದಿಡಬಲ್ಲದು. ಇರುಳಿಗರ ಕಣಿಯನ್ನು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಅಗತ್ಯವಿದೆ. ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯದವರಿಂದ ಸಂಗ್ರಹಿತವಾಗಿರುವ ಜಾನಪದ ಸಾಹಿತ್ಯ ಪ್ರತ್ಯೇಕ ಅಧ್ಯಯನವನ್ನೇ ಬಯಸುತ್ತದೆ.

ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯದವರು ಹಲವಾರು ನಂಬಿಕೆಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ. ಇವರ ಆಚರಣೆಗಳು ಕೆಲವು ಸಂಕೀರ್ಣವಾಗಿದ್ದರೆ ಮತ್ತೆ ಕೆಲವು ಸರಳವಾಗಿರುವುದನ್ನು ಕಾಣಬಹುದು. ವಿವಾಹ, ಮೈನೆರೆಯುವುದು, ಹುಟ್ಟು, ಸಾವುಗಳಂಥ ಜೀವನಾವರ್ತದ ಆಚರಣೆಗಳನ್ನು ಆಯಾ

ಸಂದರ್ಭದಲ್ಲಿ ಕ್ಷೇತ್ರಕಾರ್ಯ ಮಾಡಿ, ವಿವರಗಳನ್ನು ಕಲೆಹಾಕಿ ವಿಶ್ಲೇಷಣೆಗೆ ಒಳಪಡಿಸಿಕೊಳ್ಳಲಾಗಿದೆ. ತೊಟ್ಟಿಲು ಮುನಿ (ಹುಟ್ಟಿಗೆ ಸಂಬಂಧಿಸಿದಂತೆ), ತಣಿಗೆ ಶಾಸ್ತ್ರ(ವಿವಾಹಕ್ಕೆ ಸಂಬಂಧಿಸಿದಂತೆ), ಕಲ್ಲುಸೇವೆ (ಸಾವಿಗೆ ಸಂಬಂಧಿಸಿದಂತೆ), ಹಿರೇರ ಹಬ್ಬ (ಹಬ್ಬ-ಹರಿದಿನಗಳಿಗೆ ಸಂಬಂಧಿಸಿದಂತೆ) ಇತ್ಯಾದಿ ಹೊಸ ವಿಷಯಗಳ ವಿವರಗಳು ಈ ಅಧ್ಯಾಯದಲ್ಲಿ ಕಂಡುಬರುತ್ತದೆ.

ಮೂರನೇ ಅಧ್ಯಾಯದಲ್ಲಿ ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯದವರ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಯಾವುದೇ ಸಮುದಾಯದ ಅಧ್ಯಯನಕ್ಕೆ ಆಯಾ ಜನರ ಆರ್ಥಿಕಮಟ್ಟದ ಅರಿವು ಅವಶ್ಯಕವಾಗುತ್ತದೆ. ಆದ ಕಾರಣ ಇರುಳಿಗ ಹಾಗೂ ಹಕ್ಕಿಪಿಕ್ಕಿ ಸಮುದಾಯಗಳ ಆರ್ಥಿಕ ಸ್ಥಿತ್ಯಂತರಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ನಾಗರೀಕತೆ ಬೆಳೆದಂತೆ ಬುಡಕಟ್ಟು ಸಮುದಾಯದಲ್ಲಿ ಸಾಮಾಜಿಕ ಸ್ಥಿತ್ಯಂತರ ಹೊಂದಿರುವುದರಿಂದ ಸರ್ಕಾರದ ಯೋಜನೆಗಳು ಬುಡಕಟ್ಟು ಸಮುದಾಯವನ್ನು ಯಾವ ರೀತಿ ತಲುಪಿವೆ. ಅವರ ಅಭಿವೃದ್ಧಿಗೆ ಸರ್ಕಾರ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಬೆಳಕು ಚೆಲ್ಲಲಾಗಿದೆ.

ಆಸ್ಪತ್ರೆ, ವೈದ್ಯರು ಇವೆಲ್ಲಾ ಇಲ್ಲದ ಕಾಲದಲ್ಲೂ ರೋಗಗಳು ಬರುತ್ತಿದ್ದುದು ಸಹಜ. ಅಂಥ ಸಂದರ್ಭದಲ್ಲಿ ಇರುಳಿಗರ ಕಣಿಗಾರ ವೈದ್ಯನೂ ಆಗುತ್ತಿದ್ದ. ಸಣ್ಣ ಜ್ವರ ಬಂದರೂ ಹಿರಿಯರು ಮುನಿದಿದ್ದಾರೆಂದು ಶಾಂತಿ ಮಾಡಿಸುವ ಪ್ರವೃತ್ತಿಯನ್ನು ಇರುಳಿಗರಲ್ಲಿ ಗುರುತಿಸಬಹುದಾಗಿದೆ. ಇರುಳಿಗರಲ್ಲಿ ಹಲವಾರು ಕಣಿಗಾರರಿದ್ದು, ಇಬ್ಬರು ಜನ ಕಣಿಗಾರರಿಂದ ಸಂಗ್ರಹಿಸಿದ ಕಣಿಗಳಲ್ಲಿ ವಿಶಿಷ್ಟವಾದ ಕಣಿಯ ಪಠ್ಯವೊಂದನ್ನು ಆಯ್ದು ಮಾದರಿಗಾಗಿ ಅನುಬಂಧದಲ್ಲಿ ಕೊಡಲಾಗಿದೆ. ಹಾವು ಕಡಿತ, ಚೇಳು ಕಡಿತ, ಕೆಡುಕು ಮಾಡಿಸಿದ ಬಗ್ಗೆ ಉಳುಕು, ಬಾವು ಇತ್ಯಾದಿ ಸಂದರ್ಭದಲ್ಲಿ ಹಲವಾರು ಮಂತ್ರಗಳನ್ನು ಹಾಕುತ್ತಾರೆ. ಅಂಥ ಮಂತ್ರಗಳನ್ನು ಸಂಗ್ರಹಿಸಿ ಅಲ್ಲಿನ ಮನೋವೈಜ್ಞಾನಿಕ ವಿಶ್ಲೇಷಣೆಯ ಅಗತ್ಯತೆಯನ್ನು ತೋರಿಸಲಾಗಿದೆ. ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯ ಕಣಿ ಬಹಳ ವಿಶೇಷವಾಗಿದ್ದು, ಅದು ಅವರಿಗೆ ಬಂದ ಬಗೆಯನ್ನು ಹಲವಾರು ಐತಿಹ್ಯ, ದಂತಕತೆಗಳ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ. ಕಣಿ ಇರುಳಿಗರ ಮತ್ತು ಹಕ್ಕಿಪಿಕ್ಕಿಗಳ ಆರಾಧನಾ ಪದ್ಧತಿಯೂ ಹೌದು; ಅವರ ವೈದ್ಯ ಪದ್ಧತಿಯೂ ಹೌದು. ಇರುಳಿಗರ ಕಣಿ ಬಹು ವಿಶಿಷ್ಟವಾಗಿದ್ದು, ಇದೂ ಕೂಡ ಒಂದು ವಿಶೇಷ ಅಧ್ಯಯನದ ವಸ್ತುವಾಗಬಲ್ಲದು.

ದುಸ್ತರವಾದ ಬದುಕು ಸಾಗಿಸುತ್ತಿರುವ ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯಗಳು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸ್ಥಿತಿಗತಿಗಳ ಸುಧಾರಣೆ ತುಂಬಾ ಅಗತ್ಯವಾಗಿದೆ, ಹವ್ಯಾಸಿ ಹಾಡುಗಾರರು, ವೃತ್ತಿಗಾಯಕರು, ಅನೇಕ ಕಥೆಗಾರರು ಇರುಳಿಗರಲ್ಲಿದ್ದಾರೆ. ಪ್ರತಿಯೊಂದು ಊರಿನ ಪ್ರತಿಯೊಬ್ಬರಿಂದಲೂ ಒಂದಲ್ಲ ಒಂದು ಬಗೆಯ ಸಾಹಿತ್ಯವನ್ನು ಸಂಗ್ರಹಿಬಹುದು. ಅವುಗಳಲ್ಲಿ ಅವರದೇ ವಿಶಿಷ್ಟತೆ ಅಡಗಿರುವುದನ್ನೂ ಗಮನಿಸಬಹುದು.

## ಪ್ರಸ್ತುತ ಕಾಲಘಟ್ಟದಲ್ಲಿ ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯಗಳು

ಬುಡಕಟ್ಟು ಸಮುದಾಯವು ೨೦ನೇಯ ಶತಮಾನದಲ್ಲಿ ಸಂದಿಗ್ಧ ಪರಿಸ್ಥಿತಿಯಿಲ್ಲದ್ದು, ಕಣ್ಮರೆಯಾಗುವ ಕಾಲ ಬಂದಿದೆ-ಎಂಬ ಅಭಿಪ್ರಾಯ ಅನೇಕ ಮಾನವಶಾಸ್ತ್ರಜ್ಞರ ಮನಸ್ಸಿಗೆ ಬಂದಿದೆ. ಇದಕ್ಕೆ ಎರಡು ಕಾರಣಗಳನ್ನು ಕೊಡಬಹುದು, ಮೊದಲನೆಯದಾಗಿ ಬುಡಕಟ್ಟು ಸಮುದಾಯಗಳು ನಾಗರೀಕರ ಪ್ರಭಾವದಿಂದ ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲಾರರು. ಎರಡನೆಯದಾಗಿ ನಾಗರೀಕ ಸಂಪರ್ಕದಿಂದ ಅವರು ತಮ್ಮ ಪದ್ಧತಿ, ಆಚಾರ-ವಿಚಾರ, ನಂಬಿಕೆಗಳನ್ನು ಬಿಟ್ಟು ನಾಗರೀಕರನ್ನು ಅನುಕರಿಸತೊಡಗಿದ್ದಾರೆ. ಈ ಎರಡು ಕಾರಣಗಳಿಂದಲೂ ಆದಿವಾಸಿಗಳ ಮೂಲಸಂಸ್ಕೃತಿ ನಾಶವಾಗುವ ಸಂಭವಗಳನ್ನು ತಳ್ಳಿಹಾಕುವಂತಿಲ್ಲ. ಸ್ವಾತಂತ್ಯಾನಂತರ ಭಾರತದಲ್ಲಿ ಸಾಮಾಜಿಕ ಪರಿವರ್ತನೆ ತೀವ್ರವಾಗಿ ನಡೆಯುತ್ತಿದೆ. ಈ ದೇಶದ ಬುಡಕಟ್ಟುಗಳೂ ಸಹ ಇದಕ್ಕೆ ಹೊರತಾಗಿಲ್ಲ.

ಈ ಅಧ್ಯಯನದ ಅಧ್ಯಾಯಗಳಲ್ಲಿ ಇರುಳಿಗರ ಸಮಗ್ರ ಜೀವನದ ಎಲ್ಲ ಪ್ರಮುಖ ವಿವರಗಳನ್ನು ವಿವರಿಸಿ, ವಿಶ್ಲೇಷಿಸಲಾಗಿದೆ. ಇಲ್ಲಿ ನಾಗರೀಕತೆ ತನ್ನ ಎಲ್ಲೆ ಮೀರಿ ಬೆಳೆಯುತ್ತಿರುವ ಪ್ರಸ್ತುತತೆಯಲ್ಲಿ ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯದ ಸ್ಥಾನವೇನು? ಇರುಳಿಗರಿಗೆ ಮತ್ತು ಹಕ್ಕಿಪಿಕ್ಕಿ ಸಮುದಾಯದವರಿಗೆ ನಾಗರೀಕತೆಯ ಸೋಂಕು ತಗುಲಿದೆಯೇ ? ಹಾಗೊಂದು ವೇಳೆ ನಾಗರೀಕತೆಯ ಪ್ರಭಾವ ಇವರ ಮೇಲಾಗಿರುವುದೇ ಆದರೆ ಅದು ಎಷ್ಟರ ಮಟ್ಟಿಗೆ ಪರಿಣಾಮ ಬೀರಿದೆ? ಈ ನಾಗರೀಕತೆಗೆ ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯ ಸ್ಪಂದಿಸುತ್ತಾರೆಯೇ ಎಂಬುದರ ವಿವರಗಳನ್ನು ನೀಡಲಾಗಿದೆ. ಹಾಗೆಯೇ ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯದವರ ಅಭಿವೃದ್ಧಿಯ ಕನಸನ್ನು ಹೊತ್ತು ಕನಕಪುರದಲ್ಲಿ ಪ್ರಾರಂಭವಾದ ಕೆ.ಐ.ಟಿ.ಡಿ.ಪಿ (KANAKAPURA TRIBAL DEVELOPMENT PROGRAMME)ಯಿಂದ ಇರುಳಿಗರಿಗೆ ಮತ್ತು ಹಕ್ಕಿಪಿಕ್ಕಿ ಸಮುದಾಯದವರಿಗೆ ಆಗಿರುವ ಅನುಕೂಲತೆಗಳ ವಿವರಗಳನ್ನು ಇಲ್ಲಿ ದಾಖಲಿಸಲಾಗಿದೆ. ಹುಣಸೂರು, ಹೆಗ್ಗಡದೇವನಕೋಟೆ ಮತ್ತು ಪಿರಿಯಾಪಟ್ಟಣ ತಾಲ್ಲೂಕುಗಳಲ್ಲಿಯೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ವಲಸೆ ಹೋದ ಮತ್ತು ರಾಮನಗರ ಜಿಲ್ಲೆಗೆ ವಲಸೆ ಬಂದ ಕೆಲವು ಇರುಳಿಗ ಮತ್ತು ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಕುಟುಂಬಗಳಿರುವುದನ್ನು ಕಾಣಬಹುದು. ಅವರ ಅಭಿವೃದ್ಧಿಗೆ ಹಲವಾರು ಸಂಘ ಸಂಸ್ಥೆಗಳು ಶ್ರಮಿಸುತ್ತಿರುವ ಕೆಲವು ಅಭಿವೃದ್ಧಿ ಕಾರ್ಯಕ್ರಮಗಳ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ.

ಕನಕಪುರ, ರಾಮನಗರ, ಮಾಗಡಿ ಮತ್ತು ಆನೇಕಲ್ ತಾಲ್ಲೂಕುಗಳಲ್ಲಿ ತಮ್ಮ ನೆಲೆಯನ್ನು ಗುರುತಿಸಿಕೊಳ್ಳುವ ಇರುಳಿಗ ಮತ್ತು ಹಕ್ಕಿಪಿಕ್ಕಿ ಸಮುದಾಯಗಳು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬದಲಾಗುತ್ತಿದ್ದಾರೆ. ಆದರೆ

ಪ್ರಗತಿ ಪಥದಲ್ಲಿದ್ದಾರೆಂದು ಹೇಳಲು ಬರುವುದಿಲ್ಲ. ಈ ಬಗೆಯ ಧಾರ್ಮಿಕ, ಸಾಮಾಜಿಕ ಬದಲಾವಣೆಯ ಆರಂಭ ಮಲೆಯ ಮಾದೇಶ್ವರರ ಕಾಲದಿಂದ ಎಂಬ ಕುರುಹುಗಳು ದೊರೆಯುತ್ತವೆ. ಮಲೆಯ ಮಾದೇಶ್ವರರ ಕಾಲದಲ್ಲಿ ನಡೆದ ಈ ಪರಿವರ್ತನೆಯಲ್ಲಿ ಈ ಜನ ತಮ್ಮ ಸಂಸ್ಕೃತಿಯ ಸ್ವರೂಪವನ್ನು ಸ್ವಲ್ಪಮಟ್ಟಿಗೆ ಬದಲಿಸಿಕೊಂಡರು. ವೈಷ್ಣವ ಪಂಥದ ಪ್ರಚಾರಕರು ಅದರಲ್ಲೂ ಮುಖ್ಯವಾಗಿ ರಾಮಾನುಜಾಚಾರ್ಯರು ಕನಕಪುರ, ರಾಮನಗರ, ಮಾಗಡಿ ತಾಲ್ಲೂಕುಗಳ ಕಾಡು ಕಣಿವೆಗಳಲ್ಲಿ ಸುತ್ತಾಡುವಾಗ ಇರುಳಿಗರ ದಾಸಕುಲ ಸೃಷ್ಟಿಯಾಗಿರಬಹುದು. ನಾಗರೀಕತೆ ಬೆಳೆದು ಡಾಂಬರೀಕರಣವಾದ ನಂತರ ತಮ್ಮದೇ ಆದ ಒಂದು ಭೂಖಂಡದಲ್ಲಿ ವಾಸಿಸುತ್ತಿದ್ದೇವೆ ಎಂದು ತಿಳಿದಿದ್ದ ಈ ಜನ ತಮ್ಮ ಸುತ್ತಲಿನ ಕಾಡು ತಮ್ಮ ಕಣ್ಣೆದುರೇ ನಾಶವಾದಾಗ ಗ್ರಾಮೀಣರ ನಡೆ-ನುಡಿಗಳು, ಆಚಾರ-ವಿಚಾರಗಳು ತಮಗಿಂತ ಸುಧಾರಿಸಿವೆ ಎಂಬ ಕಲ್ಪನೆ ಉಂಟಾಗಿ ಆ ಪ್ರಭಾವಕ್ಕೆ ಒಳಗಾದರು. ಈ ಬಗೆಯ ಸಂಘರ್ಷದಲ್ಲೂ ತಮ್ಮ ನಂಬಿಕೆ, ನಡವಳಿಕೆಗಳನ್ನು, ಆಚಾರ-ವಿಚಾರಗಳನ್ನು ರಕ್ಷಿಸಿಕೊಂಡು ಬಂದರು. ಇರುಳಿಗರಿಗೆ ಅವರ ಆಸು-ಪಾಸು ವಾಸಿಸುವ ಒಕ್ಕಲಿಗರು, ಲಿಂಗಾಯಿತರು ಅವರ ಕೆಲವು ಬದಲಾವಣೆಗಳಿಗೆ ಮುಖ್ಯ ಕಾರಣರಾದರೆಂದು ಹೇಳಬಹುದು. ಆದರೂ ಅವರ ಮೂಲ ಆಚರಣೆಗಳಲ್ಲಿ ಅಂತಹ ಬದಲಾವಣೆಗಳನ್ನು ಗುರುತಿಸುವುದು ಕಷ್ಟದ ಮಾತು.

## ಬದಲಾಗದ ವಾಸಸ್ಥಳಗಳು

ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯದವರು ವನಪ್ರಿಯರು, ಬೇಟೆಯ ಹಂತದಲ್ಲಿಯೇ ಇರುವವರು, ಇರುಳಿಗರ ಕೆಲವು ಕಾಲನಿಗಳಲ್ಲಿ ವಾಸಕ್ಕೆಂದು ಜನತಾ ಮನೆಗಳು, ಇಂದಿರಾ ಅವಾಸ್ ಯೋಜನೆಯಡಿಯಲ್ಲಿ ಹಲವಾರು ಮನೆಗಳನ್ನು ಕಟ್ಟಿಸಿಕೊಟ್ಟರೂ ಅವುಗಳನ್ನು ಅವರು ಪ್ರವೇಶಿಸಲೊಲ್ಲರು. ಹಾಗೆ ಕಟ್ಟಿರುವ ಎಷ್ಟೋ ಮನೆಗಳು ನಾಶವಾಗಿವೆ. ಕೆಲವರು ಮಾತ್ರ ಅಂತಹ ಮನೆಗಳಲ್ಲಿ ವಾಸವಾಗಿದ್ದಾರೆ. ಅದೂ ಊರ ಹೊರಗಿದ್ದು, ಅವರಿಗೆ ಬೇಕಾದ ಪರಿಸರವಿದ್ದರೆ ಮಾತ್ರ ಅರ್ಥಾತ್ ಕಾಡಿನ ಆಜೂ ಬಾಜು ಮನೆಗಳಿದ್ದರೆ ಅಂತಹ ಮನೆಗಳಲ್ಲಿ ಮಾತ್ರ ವಾಸಿಸುತ್ತಿದ್ದಾರೆ. ಈ ಬುಡಕಟ್ಟು ಜನರು ಅಡವಿಗಳಲ್ಲಿ ನಾಗರೀಕ ಸಮಾಜದಿಂದ ಪ್ರತ್ಯೇಕಿತವಾದ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಹೀಗಾಗಿ ನಾಗರೀಕತೆ ಎಷ್ಟೇ ಬೆಳೆದರೂ ಅವರ ಮೂಲ ವಾಸಸ್ಥಳಗಳನ್ನು ಉಳಿಸಿಕೊಳ್ಳಲು ಒಂದು ಬಗೆಯ ಹೋರಾಟವನ್ನು ನಡೆಸುತ್ತಿದ್ದಾರೆಂದೇ ಹೇಳಬಹುದು.

## ಭೌತಿಕ ಬದಲಾವಣೆಗಳು

ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯ ಇಲ್ಲಿವರೆಗೂ ಒಂದು ಸರಳವಾದ ಗುಡಿಸಲನ್ನು ಕಟ್ಟಿಕೊಂಡು ಅದರಲ್ಲಿಯೇ ಅವರ ಕುಟುಂಬಕ್ಕೆ ಬೇಕಾದ ಸವಲತ್ತುಗಳನ್ನು ಒದಗಿಸಿಕೊಂಡು ಬದುಕುತ್ತಿದ್ದರು. ಇಂದು ಕೆಲವರು ಹೆಂಚಿನ ಮನೆಗಳಲ್ಲಿ ವಾಸಿಸುವ ಸಂಸ್ಕೃತಿಯನ್ನು ರೂಢಿಸಿಕೊಳ್ಳುತ್ತಿದ್ದಾರೆ. ಮಣ್ಣಿನ ಮಡಕೆಯನ್ನು ಮಾತ್ರ ಬಳಸುತ್ತಿದ್ದ ಇರುಳಿಗರು ಅವುಗಳನ್ನು ಕ್ರಮೇಣ ಮರೆಯುತ್ತಿದ್ದಾರೆ. ಮಣ್ಣಿನ ಪಾತ್ರೆಗಳ ಸ್ಥಾನವನ್ನು ಹಿತ್ತಾಳೆ, ಅಲ್ಯುಮಿನಿಯಂ, ಸ್ಟೀಲ್ ಪಾತ್ರೆಗಳು ಆಕ್ರಮಿಸುತ್ತಿವೆ.

ವನಸ್ಪತಿಗಳಿಂದ ಬೆಳಕು ಪಡೆಯುತ್ತಿದ್ದವರು ಸೀಮೆಎಣ್ಣೆ ದೀಪಗಳಿಂದ ಬೆಳಕು ಪಡೆಯುತ್ತಿದ್ದಾರೆ. ಸರ್ಕಾರದ ಭಾಗ್ಯಜ್ಯೋತಿ ಯೋಜನೆಯಡಿಯಲ್ಲಿ ಕೆಲವೇ ಮನೆಗಳವರು ವಿದ್ಯುತ್ ದೀಪಗಳ ಬೆಳಕನ್ನು ಪಡೆಯುತ್ತಿದ್ದಾರೆ. ತೇಗದೆಲೆಯ ಉಡುಪು ಸಂಪೂರ್ಣವಾಗಿ ಹೋಗಿದ್ದರೂ ಎಲ್ಲರಿಗೂ ಮೈತುಂಬಾ ಬಟ್ಟೆ ಇಲ್ಲ, ನಗರ, ಗ್ರಾಮೀಣರ ಪ್ರಭಾವಕ್ಕೆ ಒಳಗಾದ ಕೆಲವು ಪುರುಷರು ಅಂಗಿ-ಚೆಡ್ಡಿ, ಪಂಚೆ, ಲುಂಗಿ, ಪ್ಯಾಂಟ್, ಟೀಷರ್ಟ್, ಟೆರಿಕಾಟ್, ಟೆರಿಲಿನ್ ಇತ್ಯಾದಿ ಬಟ್ಟೆಗಳನ್ನು ಧರಿಸುತ್ತಿದ್ದಾರೆ. ಹೆಂಗಸರು ರವಿಕೆ, ಸೀರೆ, ಲಂಗ ಇತ್ಯಾದಿಗಳನ್ನು ವ್ಯಾಪಕವಾಗಿ ಬಳಸುತ್ತಿದ್ದರೆ: ಬೆರಳೆಣಿಕೆಯಷ್ಟು ಜನ ಆಧುನಿಕ ಉಡುಗೆ ತೊಡುಗೆಗಳ ಬಳಕೆಯನ್ನೂ ಮಾಡುತ್ತಿದ್ದಾರೆ. ಹುಡುಗರು ಕ್ರಾಪ್‌ಕಟ್ ಮಾಡಿಸಿಕೊಂಡರೆ ಹುಡುಗಿಯರು ಸ್ನೋ, ಪೌಡರ್ ಇತ್ಯಾದಿ ಅಲಂಕಾರ ಸಾಮಗ್ರಿಗಳನ್ನು ಬಳಸುತ್ತಿದ್ದಾರೆ. ಆದರೆ ಇನ್ನೂ ಕಾಡಿನ ಮಧ್ಯದಲ್ಲಿರುವ ಅನೇಕ ಹಳ್ಳಿಗಳ ಇರುಳಿಗರು ಮೊದಲಿನ ಸ್ಥಿತಿಯಲ್ಲಿಯೇ ಇರುವುದನ್ನು ಕಾಣಬಹುದಾಗಿದೆ. ಅವರು ಸೀರೆ, ರವಿಕೆಗಳನ್ನು ಬಳಸಿದರೂ ಸ್ನೋ, ಪೌಡರ್‌ಗಳನ್ನು ಬಳಸುವಷ್ಟರ ಮಟ್ಟಿನ ಬದಲಾವಣೆಗೆ ಒಳಗಾಗಿರುವುದಿಲ್ಲ. ನಗರಕ್ಕೆ ಹತ್ತಿರವಿದ್ದು ವಾಹನ ಸೌಕರ್ಯವಿರುವ ಕಡೆಯ ಕೆಲವರು ಸಿನಿಮಾ ಮಂದಿರಗಳಿಗೂ ಪ್ರವೇಶಿಸುತ್ತಿದ್ದಾರೆ.

ವ್ಯವಸಾಯ ಇವರಿಗೆ ಭೂಮಿಯಿಲ್ಲದ ಕಾರಣ ಆಗಿಬರುತ್ತಿಲ್ಲ. ಎಷ್ಟೋ ಜನರು ಕಾಡು ಕಡಿದು ಕೆತ್ಲು ಬೇಸಾಯ ಮಾಡಿದ್ದ ಜಮೀನು, ಇತರೆ ಮುಂದುವರಿದ ಜನರ ವಶವಾಗಿದೆ. ಆದರೂ ವ್ಯವಸಾಯ ಮಾಡುವ ಕೆಲವರು ಪುರಾತನ ಕೆತ್ಲು ಬೇಸಾಯವನ್ನು ಬಿಟ್ಟು ನೇಗಿಲು, ನೊಗ, ಎತ್ತು, ಹಸುಗಳನ್ನು ಬಳಸಿ ಭೂಮಿಯ ಉಳುಮೆ, ಹೈಬ್ರಿಡ್ ಬಿತ್ತನೆ ಬೀಜಗಳ ಬಳಕೆ, ರಸಗೊಬ್ಬರಗಳ ಬಳಕೆ ಇತ್ಯಾದಿಗಳನ್ನು ಮಾಡುತ್ತಿದ್ದಾರೆ. ಕೆಲವರು ಜಮೀನುದಾರರಿಂದ ದೇಣಿಗೆ ಆಧಾರದ ಮೇಲೆ ರೇಷ್ಮೆಯನ್ನು ಬೆಳೆಯುತ್ತಿದ್ದಾರೆ. ಈ ಬಗೆಯ ವ್ಯವಸಾಯ ಮಾಡುತ್ತಿರುವವರು ಕನಕಪುರ ತಾಲ್ಲೂಕಿನಲ್ಲಿ ಮಾತ್ರ ಅದೂ ಕೆಲವೇ ಕೆಲವು ಹಳ್ಳಿಗಳಲ್ಲಿ ಕಂಡುಬರುತ್ತಾರೆ. ಉಳಿದಂತೆ ಮಾಗಡಿ ತಾಲ್ಲೂಕಿನ ಜೋಡುಗಟ್ಟೆ, ರಾಮನಗರ ತಾಲ್ಲೂಕಿನ ಕೂನಮುದ್ದನಹಳ್ಳಿಗಳಲ್ಲಿ ಒಂದಿಷ್ಟು ಖುಷ್ಕಿ ಬೇಸಾಯ ಮಾಡುವುದು ಕಂಡುಬರುತ್ತದೆ.

## ಸಾಮಾಜಿಕ ಬದಲಾವಣೆಗಳು

ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯದವರು ಬದಲಾದ ಸಾಮಾಜಿಕ ಸಂದರ್ಭದಲ್ಲಿ ಪರಿವರ್ತನೆಯ ಹಾದಿಯಲ್ಲಿದ್ದಾರೆ. ಶಿಕ್ಷಣ, ಮತದಾನದ ಹಕ್ಕುಗಳು ಅವರನ್ನು ಬದಲಾವಣೆಯತ್ತ ಕೊಂಡೊಯ್ಯುತ್ತಿದೆ. ಅವರ ಆಚರಣೆಗಳು ಸತ್ವ ಕಳೆದುಕೊಳ್ಳುತ್ತಿವೆ. ಶಿಷ್ಟ ಸಂಸ್ಕೃತಿಯ ಪ್ರಭಾವ ಗಾಢವಾಗುತ್ತಿದ್ದು, ಆಚರಣೆಗಳಲ್ಲಿನ ಆದಿಮ ಸಂಸ್ಕೃತಿಯ ಪಳೆಯುಳಿಕೆಗಳು ಕಳೆಗುಂದುತ್ತಿವೆ. ಇರುಳಿಗರು ಎಂದೂ ತಮ್ಮ ಮದುವೆ, ಹುಟ್ಟು, ಸಾವು ಮತ್ತು ಇತ್ಯಾದಿ ಸಂಪ್ರದಾಯ, ಆಚರಣೆಗಳ ಸಂದರ್ಭದಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶವೀಯುತ್ತಿರಲಿಲ್ಲ. ಇಂದು ಇವರ ಮದುವೆ ಬ್ರಾಹ್ಮಣ ಪೌರೋಹಿತ್ಯದಲ್ಲಿ ನಡೆಯುತ್ತಿದೆ. ಉತ್ಕೃಷ್ಟವಾದ ಸಾಹಿತ್ಯಿಕ, ಸಾಂಸ್ಕೃತಿಕ ಮೌಲ್ಯಗಳನ್ನು

ಹೊಂದಿರುವ ಇರುಳಿಗರ ಕಲೆ "ಕಣಿ"ಯಲ್ಲಿನ ನಂಬಿಕೆಗಳು ಜನರಿಂದ ಮಾಯವಾಗುತ್ತಿವೆ. ಕಣಿಗಾರನ ಮೇಲೆ ಮೊದಲಿದ್ದ ಗೌರವ, ಭಯ, ನಂಬಿಕೆಗಳು ನೆಲೆ ಕಳೆದುಕೊಳ್ಳುತ್ತಿವೆ. ಅವರ ಸಾಮಾಜಿಕ ವ್ಯವಸ್ಥೆಯಲ್ಲಿನ ಭದ್ರತೆ ಕೂಡ ಅಭದ್ರವಾಗುತ್ತಿದೆ. ಕುಲಪಂಚಾಯ್ತಿಯ ಕಟ್ಟು ಕಟ್ಟಳೆಗಳು ನಶಿಸುತ್ತವೆ. ಮೊದಲಿನ ಮದುವೆ ಪದ್ಧತಿಗಳು ಮಾಯವಾಗಿ ಗ್ರಾಮೀಣರ ಗಾಢ ಪ್ರಭಾವದಿಂದಾಗಿ ಸೋಬಾನೆ ಪದಗಳ ಸ್ಥಾನವನ್ನು ಮೈಕಾಸುರ, ಡೋಲು, ನಾಗಸ್ವರಗಳು ಆಕ್ರಮಿಸುತ್ತವೆ. ಮರ ಸುತ್ತಿ ಆಗುತ್ತಿದ್ದ ಮದುವೆಗಳು ಸಂಪೂರ್ಣವಾಗಿ ನಿಂತೇ ಹೋಗಿದೆ. ವಧುದಕ್ಷಿಣೆಯ ಸ್ಥಾನವನ್ನು ವರದಕ್ಷಿಣೆ ಆವರಿಸುತ್ತಿದೆ.

ಇಷ್ಟೆಲ್ಲಾ ಬದಲಾವಣೆಗಳಾದರೂ ಹೆಚ್ಚು ಇರುಳಿಗರು ಮತ್ತು ಹಕ್ಕಿಪಿಕ್ಕಿ ಸಮುದಾಯದವರು ತೀರಾ ಹಿಂದುಳಿದವರು. ಸರ್ಕಾರದಿಂದ ಇವರ ಹೆಸರಿನಲ್ಲಿ ಮಂಜೂರಾದ ಹೆಚ್ಚಿನ ಯೋಜನೆಗಳು ಮಧ್ಯವರ್ತಿಗಳ ಪಾಲಾಗುತ್ತಿವೆ. ಕಾಡನ್ನು ನಂಬಿ ಕಾಡಿನ ಸಂಪನ್ಮೂಲಗಳನ್ನು ಬಳಸಿ ಬದುಕುತ್ತಿದ್ದವರು ಈಗ ಕಾಡನ್ನು ಕಡಿದು ಕಟ್ಟಿಗೆ ಮಾರಿದರೇ ಜೀವನ. ಹೊಸ ಬದುಕಿಗೆ ಬರಲು ಅಷ್ಟು ಸುಲಭವಾಗಿ ಒಪ್ಪರು. ಬೆರಳೆಣಿಕೆಯಷ್ಟು ಆಶ್ರಮ ಶಾಲೆಗಳಿವೆ. ಅವುಗಳಲ್ಲಿನ ವ್ಯವಸ್ಥೆಯಲ್ಲಿ ಸುಧಾರಣೆ ಆಗಬೇಕಾಗಿದೆ. ಇವರಲ್ಲಿ ಅಪಾರವಾದ ಸಾಹಿತ್ಯರಾಶಿ ಅಡಗಿದೆ. ಅದರ ಸಂಗ್ರಹ ಇನ್ನೂ ವ್ಯಾಪಾಕವಾಗಿ ಆಗಬೇಕಾಗಿದೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ವಿಶೇಷ ಅಧ್ಯಯನಗಳ ಅವಶ್ಯಕತೆ ಕಂಡುಬರುತ್ತದೆ. ಬುಡಕಟ್ಟುಗಳ ಅಭಿವೃದ್ಧಿಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನೇಕ ಅತ್ಯುತ್ತಮ ಯೋಜನೆಗಳನ್ನು ಹಾಕಿಕೊಂಡಿವೆ. ಆದರೆ ಯೋಜನೆಗಳ ಅನುಷ್ಠಾನದಲ್ಲಿ ಪ್ರಾಮಾಣಿಕತೆ ಇಲ್ಲವಾಗಿರುವ ಕಾರಣ ಜನರನ್ನು ತಲುಪದೆ ಮಧ್ಯವರ್ತಿಗಳ ಪಾಲಾಗುತ್ತಿದೆ. ಯೋಜನೆಗಳನ್ನು ರೂಪಿಸುವಾಗ ಆ ಯೋಜನೆಯ ಫಲಾನುಭವಿಗಳ ಬೇಡಿಕೆ ಅಥವಾ ಅವಶ್ಯಕತೆಗಳನ್ನು ಕೇಳಿ ತಿಳಿದುಕೊಂಡು ಅನುಷ್ಠಾನಕ್ಕೆ ತರುವುದು ಒಳ್ಳೆಯದು. ನಿಜವಾದ ಅರ್ಥದಲ್ಲಿ ಇರುಳಿಗರು ನಿರ್ಗತಿಕರು. ಆದರೂ ಭಿಕ್ಷೆ ಬೇಡುವವರಲ್ಲ. ಸ್ವಂತ ಭೂಮಿ ಇಲ್ಲ. ಅನೇಕ ಬಗೆಯ ರೋಗಗಳಿಗೆ ಇನ್ನೂ ಸಾಂಪ್ರದಾಯಿಕ ಚಿಕಿತ್ಸೆಯನ್ನೇ ಪಡೆಯುತ್ತಿದ್ದಾರೆ. ಆ ರೀತಿಯ ಸಾಂಪ್ರದಾಯಿಕ ಚಿಕಿತ್ಸೆಗಳನ್ನು ವ್ಯವಸ್ಥಿತವಾಗಿ ಕೊಡಮಾಡುವ ಅವಶ್ಯಕತೆಯಿದೆ. ಶಿಕ್ಷಣದ ಮಹತ್ವ ಸರಿಯಾಗಿ ತಿಳಿಯದೆ, ಶೈಕ್ಷಣಿಕ ಅರ್ಹತೆಗಳಿಲ್ಲದ ಕಾರಣ ಸರ್ಕಾರಿ ಕೆಲಸ ಗಗನ ಕುಸುಮವಾಗಿದೆ. ಕಾಡು ಕಾಯುವ ವಾಚರ್‌ಗಳಾಗಿ, ದಣಿಗಳ ಮನೆಯ ಜೀತದಾಳುಗಳಾಗಿ ಇನ್ನೂ ಎಷ್ಟೋ ಜನ ಇರುಳಿಗರು ಅಸಹ್ಯಕರವಾದ ಜೀವನ ನಡೆಸುತ್ತಿದ್ದಾರೆ.

## ಇರುಳಿಗರ ಮತ್ತು ಹಕ್ಕಿಪಿಕ್ಕಿ ಸಮುದಾಯದವರ ಅಭಿವೃದ್ಧಿಯಲ್ಲಿ ಸ್ವಯಂಸೇವಾ ಸಂಸ್ಥೆಗಳ ಪಾತ್ರ

### ಕನಕಪುರ ಕೆ.ಐ.ಟಿ.ಡಿ.ಪಿ.

ಬಿಳಿಗಿರಿರಂಗನಬೆಟ್ಟದಲ್ಲಿ ಸೋಲಿಗರ ಸಂಘಟನೆಯ ಅನುಭವದೊಂದಿಗೆ ತನ್ನ ಸುತ್ತಮುತ್ತಲ ತಾಲ್ಲೂಕಿನ ಗಿರಿಜನರ ಸಂಘಟನೆ ಮಾಡಬೇಕೆಂದು ಯೋಚಿಸುವಾಗ ಶಿವರಾಜೇಗೌಡರಿಗೆ ಕನಕಪುರ ತಾಲ್ಲೂಕಿನ ಇರುಳಿಗರು ಕಂಡರು. ಇದರ ಪ್ರತಿಫಲವೇ ಕನಕಪುರದಲ್ಲಿ ಕೆ.ಐ.ಟಿ.ಡಿ.ಪಿ ಉದಯ, ಪ್ರಾರಂಭದ ದಿನಗಳಲ್ಲಿ ತಾಲ್ಲೂಕಿನ ದಟ್ಟ ಅರಣ್ಯಗಳ ನಡುವಿರುವ ಇರುಳಿಗರ ಕಾಲನಿಗಳನ್ನು ಪತ್ತೆ ಹಚ್ಚುವಲ್ಲಿ ಇವರ ಪಾತ್ರ ಬಹು ಮುಖ್ಯವಾದುದು. ಕನಕಪುರ ತಾಲ್ಲೂಕಿನಲ್ಲಿ ಗಿರಿಜನರೇ ಇಲ್ಲವೆಂದು ಹೇಳುತ್ತಿದ್ದ ತಾಲ್ಲೂಕಿನ ಸರ್ಕಾರಿ ಅಧಿಕಾರಿಗಳಿಗೆ, ಗೌಡರು ತಮ್ಮ ಕಾರ್ಯಕರ್ತರೊಟ್ಟಿಗೆ ಸಂಚರಿಸಿ ೬೦೦೦ಕ್ಕೂ ಅಧಿಕವಾಗಿ ತಾಲ್ಲೂಕಿನಲ್ಲಿ ಇರುಳಿಗರಿದ್ದಾರೆ ಎಂಬುದನ್ನು ತೋರಿಸಿಕೊಟ್ಟು ಅವರೆಡೆಗೆ ಗಮನ ಸೆಳೆದರು. ಇರುಳಿಗರಲ್ಲಿ ಜಾಗೃತಿಯನ್ನುಂಟು ಮಾಡಲು, ನಾಯಕತ್ವದ ಗುಣ ಬೆಳೆಸಲು ಅನುಕೂಲವಾಗುವಂತೆ "ಬೆಂಗಳೂರು ಗ್ರಾಮಾಂತರ ಜಿಲ್ಲಾ ಗಿರಿಜನ ಸಂಘ"ವನ್ನು ಸ್ಥಾಪಿಸಿದರು.

ಇರುಳಿಗರ ಸಂಘಟನೆಗೆ ರಾತ್ರಿಗಳನ್ನು ಆಯ್ಕೆ ಮಾಡಿಕೊಂಡರು. ಅವರೊಡನೆ ಬೆರೆತು, ಸರ್ಕಾರಿ ಸವಲತ್ತುಗಳು, ಅಧಿಕಾರಿಗಳನ್ನು ಸಂಪರ್ಕಿಸುವ ಪರಿ, ಗಿರಿಜನರಿಗಾಗಿ ಇರುವ ಯೋಜನೆಗಳ ಲಾಭ ಹೇಗೆ ಪಡೆಯಬೇಕೆಂಬುದರ ಪರಿಚಯ ಮಾಡಿಸತೊಡಗಿದರು. ಚುನಾಯಿತ ಪ್ರತಿನಿಧಿಗಳಲ್ಲಿ ತಮ್ಮ ಬೇಡಿಕೆಗಳನ್ನು, ಕುಂದುಕೊರತೆಗಳನ್ನು ವಿವರಿಸಲು ಅನುಕೂಲಕರ ವಾತಾವರಣವನ್ನು ಸೃಷ್ಟಿಸಿದರು. ಇದರಿಂದ ಅಧಿಕಾರಿಗಳೆಂದರೇನೆಂದೇ ತಿಳಿಯದಿದ್ದ ಇರುಳಿಗರು ಯಾವುದೇ ಅಂಜಿಕೆಯಿಲ್ಲದೆ ನೇರವಾಗಿ ಜನಪ್ರತಿನಿಧಿಗಳು ಮತ್ತು ಸರ್ಕಾರಿ ಅಧಿಕಾರಿಗಳನ್ನು ಸಂಪರ್ಕಿಸುವ ಛಾತಿಯನ್ನು ಪಡೆದರು. ಮುಂದೆ "ಗಿರಿಜನ ಮಹಿಳಾ ಅಭಿವೃದ್ಧಿ ಸಂಘ" ಸ್ಥಾಪಿಸಿ ಅವರಲ್ಲಿಯೂ ಉಳಿತಾಯ ಮತ್ತು ಅಕ್ಷರ ಕಲಿವ ಶಕ್ತಿಯಿದೆ ಎಂಬುದನ್ನು ಕಾರ್ಯತಃ ಮಾಡಿ ತೋರಿದರು. ಇದರ ಫಲ ಸುಮಾರು ೨೫೦-೩೦೦ ಇರುಳಿಗ ಮಹಿಳೆಯರು ಅಕ್ಷರ ಜ್ಞಾನವನ್ನು ಪಡೆದರು. ಜಾಗೃತ ಮಹಿಳಾ ಸಂಘಟನೆ ಮತ್ತು ಸರ್ಕಾರದ ಮೀಸಲಾತಿಯನ್ನು ಸೂಕ್ತವಾಗಿ ಬಳಸಿಕೊಂಡು ಇರುಳುಗರ ೯ ಮಹಿಳೆಯರು ಗ್ರಾಮ ಪಂಚಾಯ್ತಿ ಸದಸ್ಯೆಯರು ಹಾಗೂ ಒಬ್ಬರು ತಾಲ್ಲೂಕು ಪಂಚಾಯ್ತಿ ಸದಸ್ಯೆಯಾಗಿ ಆಯ್ಕೆಯಾಗಿ ರಾಜಕೀಯದಲ್ಲೂ ತಮ್ಮ ಸ್ಥಾನವನ್ನು ಗುರುತಿಸಿಕೊಂಡರು.

ತಾವು ದುಡಿದಿದ್ದರಲ್ಲಿಯೇ ಒಂದಿಷ್ಟು ಉಳಿಸಿದರೆ ಕಷ್ಟಕಾಲಕ್ಕೆ ಆಗುತ್ತದೆಂಬ ಅರಿವು ಮೂಡಿಸಿ ಮಹಿಳೆಯರಲ್ಲಿ ಉಳಿತಾಯದ ಯೋಜನೆ ಪ್ರಾರಂಭಿಸಿ ಅದರಿಂದ ಸುಮಾರು ಎರಡೂವರೆ ಲಕ್ಷ ರೂಪಾಯಿಗಳ ಉಳಿತಾಯ ಮಾಡಿಸಿದರು.

ಆಮೀನುದಾರರಲದಲಿ ಸಾಲ ಪಡೆದು ಜೀತದಾಳುಗಳಾಗುತ್ತಿದ್ದ ಇರುಳಿಗರ ಆ ಕಷ್ಟದ ದಿನಗಳಿಗೆ ಈ ಉಳಿತಾಯ ತುಂಬಾ ಸಹಾಯಕವಾಯಿತು. ಮೂರು ಅನೌಪಚಾರಿಕ ಶಾಲೆಗಳನ್ನು ಪ್ರಾರಂಭಿಸಿ ತಮ್ಮ ಮಕ್ಕಳಿಗೂ ವಿದ್ಯಾಭ್ಯಾಸದ ಅಗತ್ಯವಿದೆ ಎಂಬುದು ಇರುಳಿಗರಿಗೆ ಮನದಟ್ಟಾಗುವಂತೆ ಮಾಡುವಲ್ಲಿ ಸಫಲವಾಗಿದೆ ಕೆ.ಐ.ಟಿ.ಡಿ.ಪಿ.

ಒಟ್ಟಾರೆ ಇರುಳಿಗರ ಅಭಿವೃದ್ಧಿಗೆ ಸಂಸ್ಥೆಯ ಕೊಡುಗೆ ಅಪಾರವಾಗಿದೆ ಎಂದು ಹೇಳಬಹುದು. ಇರುಳಿಗರು ಇರುವ ಊರುಗಳಲ್ಲಿ ಅಂಗನವಾಡಿ ಕೇಂದ್ರಗಳ ಸ್ಥಾಪನೆ, ಅರಣ್ಯದ ಹುಣಸೇ ಮರಗಳ ಒಡೆತನ, ಜನಸಂಪರ್ಕಗಳ ಮೂಲಕ ಜನಪ್ರತಿನಿಧಿಗಳು ಮತ್ತು ಸರ್ಕಾರಿ ಅಧಿಕಾರಿಗಳೊಡನೆ ಚರ್ಚೆ, ಸರ್ಕಾರಿ ಯೋಜನೆಗಳ ಸರಿಯಾದ ಬಳಕೆ ಸಾಕ್ಷರತೆಯ ಬಗೆಗೆ ಅರಿವು, ತಮ್ಮ ಬೇಡಿಕೆಗಳಿಗೆ ಸ್ಪಂದಿಸದಿದ್ದಾಗ ಹೋರಾಡುವ ಬಗೆ, ತಮ್ಮ ಸಂಸ್ಕೃತಿಯ ಬಗೆಗೆ ಗೌರವ ಇತ್ಯಾದಿ ಎಲ್ಲ ರಂಗಗಳಲ್ಲಿ ಇರುಳಿಗರು ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಿದ್ದಾರೆ. ಕನಕಪುರ ತಾಲ್ಲೂಕಿನ ಸುಮಾರು ೪೦೦ ಕುಟುಂಬಗಳಿಗೆ ಸರ್ಕಾರ ಮನೆಗಳನ್ನು ಕಟ್ಟಿಸಿಕೊಟ್ಟಿದೆ. ಕುಡಿವ ನೀರಿನ ಸವಲತ್ತುಗಳನ್ನು ಒದಗಿಸಿದೆ. ಧಣಿಗಳ ಮನೆಯ ಜೀತಕ್ಕೆ ಹುಟ್ಟಿರುವುದೆಂದು ನಂಬಿದ್ದ ಕನಕಪುರ ತಾಲ್ಲೂಕಿನ ಇರುಳಿಗರು ನಮಗೂ ನಮ್ಮದೇ ಬದುಕುವ ಹಕ್ಕು ಇದೆ ಎಂಬಷ್ಟರಮಟ್ಟಿಗೆ ಆತ್ಮವಿಶ್ವಾಸ ಬೆಳೆಸಿಕೊಳ್ಳಲು ಈ ಸಂಸ್ಥೆ ಕಾರಣವಾಯ್ತು ಎಂದರೆ ಅತಿಶಯವಲ್ಲ. ತಾಲ್ಲೂಕಿನ ಹಲವಾರು ಮಕ್ಕಳು ಇಂದು ಶಾಲೆಗೆ ಹೋಗುತ್ತಿರುವುದು ಕೆ.ಐ.ಟಿ.ಡಿ.ಪಿ.ಯ ಕಾರ್ಯಗಳನ್ನು ಬಹು ಮುಖ್ಯವಾದುದು. ಸಂಸ್ಥೆಯ ಕಾರ್ಯ ಕ್ಷೇತ್ರ ಈಗ ಆನೇಕಲ್ ತಾಲ್ಲೂಕಿಗೂ ವಿಸ್ತರಿಸುತ್ತಿದ್ದು ಅಲ್ಲಿನ ಇರುಳಿಗರೂ ಸಂಘಟಿತರಾಗುವ ದಿಕ್ಕಿನಲ್ಲಿದ್ದಾರೆ. ರಾಮನಗರ ಮತ್ತು ಮಾಗಡಿ ತಾಲ್ಲೂಕಿನಲ್ಲಿರುವ ಇರುಳಿಗರ ಕಡೆಗೂ ಗಮನ ಹರಿಸಿದರೆ ಅರಣ್ಯಗಳ ಮಧ್ಯದಲ್ಲೇ ಇರುವ ಅನೇಕ ಇರುಳಿಗರನ್ನು ಹೊರತಂದು ಜಾಗೃತಿ ಮೂಡಿಸುವ ಕಾರ್ಯವಾಗಬಹುದು. ಸರ್ಕಾರ ಗಿರಿಜನರ ಅಭಿವೃದ್ಧಿಗೇ ಸಂಬಂಧಿಸಿದಂತೆ ಇರುವ ITDP (INTEGRATED TRIBAL DEVELOPMENT PROJECT) ವ್ಯಾಪ್ತಿಗೆ ಬೆಂಗಳೂರು ಗ್ರರಾಮಾಂತರ ಜಿಲ್ಲೆಯನ್ನು ಸೇರಿಸಿದರೆ ಇರುಳಿಗರಿಗೆ ಒಂದಿಷ್ಟು ಅನುಕೂಲವಾಗುತ್ತದೆಂದು ಆ ದಿಶೆಯಲ್ಲಿ ಪ್ರಾಮಾಣಿಕ ಪ್ರಯತ್ನಗಳನ್ನು ಕೆ.ಐ.ಟಿ.ಡಿ.ಪಿ. ಮಾಡುತ್ತಿದೆ.

## ಅಖಿಲ ಕರ್ನಾಟಕ ಹಕ್ಕಿಪಿಕ್ಕಿ ಸಮುದಾಯಗಳ ಸಂಘ

ರಾಮನಗರ ಜಿಲ್ಲೆಯ ಹೆಜ್ಜಾಲದ ಗವಿಪುರ ಹಕ್ಕಿಪಿಕ್ಕಿ ಸಮುದಾಯದ ಅಭಿವೃದ್ಧಿಯನ್ನು ಗಮನದಲ್ಲಿರಿಸಿಕೊಂಡು ಸ್ಥಾಪಿತವಾದ ಒಂದು ಸ್ವಯಂಸೇವಾ ಸಂಘಟನೆ. ಇದರ ವ್ಯಾಪ್ತಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ವಲಸೆ ಬಂದು ನೆಲೆಸಿರುವ ಹಕ್ಕಿಪಿಕ್ಕಿ ಕೆಲವು ಹಾಡಿಗಳೂ ಇದ್ದು, ಅಲ್ಲಿನ ಹಕ್ಕಿಪಿಕ್ಕಿ ಅಭಿವೃದ್ಧಿಗೆ ಗಮನ ನೀಡುತ್ತಿದೆ. ಸಾಕ್ಷರತೆ, ಭೂ ಹೋರಾಟ, ಸ್ವಯಂ ಆಡಳಿತದ ಹಕ್ಕು, ಸಾರಾಯಿ ವಿರುದ್ಧ ಹೋರಾಟ, ಸರ್ಕಾರಿ ಸವಲತ್ತುಗಳ ಸರಿಯಾದ ಹಂಚಿಕೆ, ಅರಣ್ಯ ಉತ್ಪನ್ನಗಳ ಒಡೆತನ ಇತ್ಯಾದಿ ಅನೇಕ ಅಭಿವೃದ್ಧಿಪರ ಕಾರ್ಯಗಳನ್ನು ಮಾಡುತ್ತಿದೆ. ಮಹಿಳಾ ಸಂಘಟನೆಗೆ

ಹೆಚ್ಚಿನ ಗಮನ ಕೊಟ್ಟು ಅವರು ದುಡಿದ ದುಡಿತದಿಂದಲೇ ಒಂದಿಷ್ಟು ಉಳಿಸಿ ಸ್ವಾವಲಂಬಿಗಳಾಗುವ ದಿಕ್ಕಿಗೆ ಕೊಂಡೊಯ್ಯುವ ಕಾರ್ಯವನ್ನು ಈ ಸಂಘವು ಮಾಡುತ್ತಿದೆ.

**ಸಲಹೆಗಳು :**

ಬುಡಕಟ್ಟು ಸಮುದಾಯಗಳ ಗ್ರಾಮಗಳನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಗ್ರಾಮ ಯೋಜನೆಗಳನ್ನು ಉತ್ತಮ ರೀತಿಯಲ್ಲಿ ಅನುಷ್ಠಾನ ಗೊಳಿಸುವ ನಿಟ್ಟಿನಲ್ಲಿ ನೀಡಬಹುದಾದ ಉಪಯುಕ್ತ ಸಲಹೆಗಳು ಈ ಕೆಳಕಂಡಂತಿರುವುವು.

೧. ಕೊಳೆ ಮತ್ತು ಮಳೆ ನೀರು ಸರಾಗವಾಗಿ ಹರಿದು ಹೋಗಲು ಸದೃಢವಾದ ಚರಂಡಿಗಳನ್ನು ನಿರ್ಮಿಸಬೇಕು. ಅವುಗಳನ್ನು ಕೊಳೆ, ಕಸರಹಿತವಾದುವುಗಳನ್ನಾಗಿ ಇಟ್ಟುಕೊಳ್ಳಬೇಕಾದ ಅಗತ್ಯವಿದೆ ಎಂಬ ಅಂಶಗಳನ್ನು ಮನಗಾಣುವಂತೆ ಮಾಡಬೇಕು.

೨. ಸುಸ್ಥಿತಿಯಲ್ಲಿ ಇರಿಸಿಕೊಳ್ಳದ ಬೀದಿ ನಲ್ಲಿಗಳ ನೀರು, ಚರಂಡಿಗಳಲ್ಲಿ ಹರಿಯುವ ಕೊಳೆ ನೀರು ಹರಿದು ಹೋಗಿ ಊರ ಹೊರಗೆ, ಕೆಲವು ಕಡೆ ಊರ ಒಳಗೇ ಕೊಳಕು ಗುಂಡಿಗಳು ನಿರ್ಮಾಣವಾಗದಂತೆ ನೋಡಿಕೊಳ್ಳಬೇಕು. ಆ ಬಗೆಯ ನೀರಿನಿಂದ ಹಿಂದಿನ ಕಾಲದಲ್ಲಿ ಗ್ರಾಮ ಗ್ರಾಮಗಳಲ್ಲಿ ದುಂಡು ತೋಪುಗಳನ್ನು ನೆಟ್ಟು ಬೆಳೆಸುತ್ತಿರುವುದನ್ನು ಅನುಕರಿಸುವುದು ಸೂಕ್ತವಾದುದು.

೩. ಶೌಚಾಲಯಗಳನ್ನು ಅದರಲ್ಲಿಯೂ ಮುಖ್ಯವಾಗಿ ಸಾಮೂಹಿಕ ಶೌಚಾಲಯಗಳನ್ನು ನಿಜವಾಗಿಯೂ ಸ್ವಚ್ಛವಾಗಿ ಇಟ್ಟುಕೊಳ್ಳಬೇಕು.

೪. ಮಿಶ್ರ ಗೊಬ್ಬರದ ಅಂಗಳಗಳನ್ನು ನಿರ್ಮಿಸುವುದರ ಜೊತೆಗೆ ಎರೆಹುಳು ಗೊಬ್ಬರ ಮತ್ತು ಇಂಧನವನ್ನು ಉತ್ಪಾದಿಸುವ ಕ್ರಮ ಕೈಗೊಳ್ಳಬೇಕು. ಬೃಹತ್ ಪ್ರಮಾಣದಲ್ಲಿ ಇಡೀ ಗ್ರಾಮಕ್ಕೆ ಅಡುಗೆ ಮಾಡಲು ಮತ್ತು ದೀಪ ಉರಿಸಲು ಈ ಇಂಧನವನ್ನು ಬಳಸಿಕೊಳ್ಳಬಹುದು. ಸಗಣಿ, ಕಸಕಡ್ಡಿ ಮೊದಲಾದವುಗಳನ್ನು ಉಪಯೋಗಿಸಿ ಇಂಧನವನ್ನು ಉತ್ಪಾದಿಸುವುದರಿಂದ ಗೊಬ್ಬರದ ಸಾರವು ಹೆಚ್ಚುತ್ತದೆ. ಅಂತಹ ಗೊಬ್ಬರದಲ್ಲಿ ಎರೆಹುಳುಗಳನ್ನು ಬಿಟ್ಟರೆ ಆ ಗೊಬ್ಬರವು ಮತ್ತಷ್ಟು ಸರವತ್ತಾಗುತ್ತದೆ.

೫. ಪ್ರತಿಯೊಂದು ಗುಂಡಿಯ ಸುತ್ತಲೂ ಗೊಬ್ಬರ ಸಸ್ಯಗಳನ್ನು ಬೆಳೆಸಲು ಆಯಾಮ ಗುಂಡಿಯ ಮಾಲಿಕರನ್ನು ಪ್ರೋತ್ಸಾಹಿಸಿ, ಮಾರ್ಗದರ್ಶನ ನೀಡಿ ಪ್ರಭಾವ ಬೀರಬಹುದು. ಗ್ರಾಮದ ಕೊಳೆ ನೀರನ್ನು ಆ ಜಾಗಕ್ಕೆ ಹರಿಸಲು ಸಾಧ್ಯವಾದರೆ ಗೊಬ್ಬರದ ಸಾರವು ಮತ್ತಷ್ಟು ಅಧಿಕಗೊಳ್ಳುತ್ತದೆ. ಗೊಬ್ಬರ ಸಸ್ಯಗಳಿಂದ ಹಸುರೆಲೆ ಗೊಬ್ಬರ, ಎರೆಹುಳು ಗೊಬ್ಬರ, ಇಂಧನೋತ್ಪತ್ತಿಯಾದ ನಂತರದ ಗೊಬ್ಬರ ಎರೆಹುಳು ಗೊಬ್ಬರ ಹೀಗೆ ಗೊಬ್ಬರವು ತುಂಬಾ ಸಾರವತ್ತಾಗುತ್ತದೆ. ಕಾಂಪೋಸ್ಟ್ ರೀತಿಯಲ್ಲಿ ಈ ಬಗೆಯ ಗೊಬ್ಬರವನ್ನು ಉತ್ಪಾದಿಸಿದರೆ ರಸಗೊಬ್ಬರಗಳ ಅಗತ್ಯ ಬೀಳುವುದಿಲ್ಲ. ಭೂಮಿಯು ಕ್ಷಾರವಾಗದೇ ತನ್ನ ಫಲವತ್ತತೆಯನ್ನು ಅಧಿಕಗೊಳಿಸಿಕೊಳ್ಳುತ್ತದೆ. ಗೊಬ್ಬರದ ಅನಿಲದಿಂದ ಅಡುಗೆ ಮಾಡುವುದರಿಂದ ಹೊಗೆರಹಿತ ಒಲೆಗಳ ಸೂತ್ರವನ್ನು

ಪಾಲಿಸಿದಂತಾಗುತ್ತದೆ. ಅದರಿಂದ ಹೆಚ್ಚು ಉಪಯೋಗವಿರುತ್ತದೆ. ತನ್ಮೂಲಕ ಕಾಡು ನಾಶವಾಗುವುದೂ ಕಡಿಮೆಯಾಗುತ್ತದೆ.

೬. ಸೌರಶಕ್ತಿಯನ್ನು ಬಳಸಿಕೊಳ್ಳುವ ಯೋಜನೆಯನ್ನು ಅಳವಡಿಸಿಕೊಳ್ಳುವುದು ಸೂಕ್ತವಾದುದು.

೭. ಯೋಜನೆಯ ಅನುಷ್ಠಾನದಲ್ಲಿ ಇಡೀ ಸಮುದಾಯವೇ ಸಕ್ರಿಯವಾಗಿ ಪಾಲ್ಗೊಂಡು ಸಹಕರಿಸುವಂತೆ ಅಗತ್ಯ ಜನಜಾಗೃತಿಯನ್ನು ಉಂಟುಮಾಡಬೇಕು.

೮. ಯೋಜನೆಯ ಅನುಷ್ಠಾನಕ್ಕಾಗಿ ಮಕ್ಕಳು ಹಾಗೂ ಯುವಜನರು ಕ್ರಿಯಾಶೀಲತೆಯಿಂದ ಭಾಗಿಯಾಗುವಂತೆ ಪ್ರಭಾವ ಬೀರಬೇಕು.

೯. ಆ ಗ್ರಾಮದಲ್ಲಿ ಹಾಗೂ ಹತ್ತಿರದ ಸಮುದಾಯದಲ್ಲಿ ಕಾರ್ಯನಿರತರಾಗಿರುವ ಸ್ವಯಂ ಸೇವಾ ಸಂಘ ಸಂಸ್ಥೆಗಳ ನೆರವು ಪಡೆಯಬೇಕು.

೧೦. ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಪಂಚಾಯಿತಿ ಪದಾಧಿಕಾರಿಗಳು, ಯುವಕ ಸಂಘಗಳು, ಮಹಿಳಾ ಸಮಾಜಗಳ ಪದಾಧಿಕಾರಿಗಳು ಹಾಗೂ ಕಾರ್ಯಕರ್ತರು ಸಕ್ರಿಯವಾಗಿ ಭಾಗವಹಿಸುವಂತೆ ಮಾಡಬೇಕು.

೧೧. ಈ ಬಗೆಯ ತಿಳುವಳಿಕೆಯನ್ನು ನಾನಾ ಸಮೂಹ ಮಾಧ್ಯಮಗಳ ಮೂಲಕ ನಿರಂತರವಾಗಿ ನೀಡಬೇಕು.

೧೨. ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳ ಯೋಜನೆಗಳ ಅನುಷ್ಠಾನ ಕಾರ್ಯವು ಒಂದು ಆಂದೋಲನ ಅಥವಾ ಚಳುವಳಿಯೋಪಾದಿಯಲ್ಲಿ ಸತತವಾಗಿ ನಡೆಯುವಂತೆ ಮಾಡಲು ಅಗತ್ಯ ಎಚ್ಚರಿಕೆ ವಹಿಸಬೇಕು.

# ಅನುಬಂಧಗಳು

## ೧. ವಕ್ತೃಗಳ ವಿವರ

| ಕ್ರ.ಸಂಖ್ಯೆ | ವಕ್ತೃವಿನ ಹೆಸರು | ವಯಸ್ಸು | ಊರು | ಲಿಂಗ |
|---|---|---|---|---|
| ೧ | ಮೂರ್ತಿ | ೩೮ | ಬಸವನಪುರ | ಪುರುಷ |
| ೨ | ಮಾದಯ್ಯ | ೬೦ | ಮತ್ತಿಕೆರೆ ಕಾಲೋನಿ | ,, |
| ೩ | ಪಾರ್ವತಮ್ಮ | ೫೬ | ಸೊಣ್ಣೇನಹಳ್ಳಿ | ಹೆಂಗಸು |
| ೪ | ಜಯಮ್ಮ | ೪೫ | ಜೋಡುಗಟ್ಟೆ | ,, |
| ೫ | ಚಿಕ್ಕಬೋರಯ್ಯ | ೪೪ | ಮತ್ತ | ಪುರುಷ |
| ೬ | ತಿಮ್ಮಯ್ಯ | ೭೫ | ಬಸವಲಿಂಗನದೊಡ್ಡಿ | ,, |
| ೭ | ಮಾದಯ್ಯ | ೬೮ | ,, | ,, |
| ೮ | ಶಿವಲಿಂಗಯ್ಯ | ೫೩ | ಮುಟಕಯ್ಯನದೊಡ್ಡಿ | ,, |
| ೯ | ಕಾಳಯ್ಯ | ೬೦ | ರಾಮಗಿರಿ | ,, |
| ೧೦ | ರುದ್ರಾಕ್ಷಿರಾಜು | ೪೩ | ಸುಭಾಶ್ ನಗರ<br>ಕೆಂಗೇರಿ ಉಪನಗರ | ,, |
| ೧೧ | ಕಲ್ಲೇಶಿ | ೨೧ | ,, | ,, |
| ೧೨ | ರಾಜು | ೫೦ | ಹಕ್ಕಿಪಿಕ್ಕಿ ಕಾಲೋನಿ(ಹೆಜ್ಜಾಲ) | ,, |
| ೧೩ | ಮಹಾದೇವಯ್ಯ | ೪೮ | ,, | ,, |
| ೧೪ | ಮಾದಮ್ಮ | ೫೮ | ,, | ಹೆಂಗಸು |
| ೧೫ | ಮುನಿರಾಮಯ್ಯ | ೪೨ | ಬನೇರುಘಟ್ಟ | ಪುರುಷ |
| ೧೬ | ಯಳವಯ್ಯ | ೬೪ | ,, | ,, |

| | | | | |
|---|---|---|---|---|
| ೧೭ | ದೊಡ್ಡಮಾರಯ್ಯ | ೫೮ | ಗವಿಪುರ | ,, |
| ೧೮ | ಮುನಿಮಾರಯ್ಯ | ೬೦ | ಬೂತ್ತಾನಹಳ್ಳಿ (ಹ.ಕಾ.) | ,, |
| ೧೯ | ಮಾದಮ್ಮ | ೫೯ | ಶಿವನಹಳ್ಳಿ | ಹೆಂಗಸು |
| ೨೦ | ಮಾದಯ್ಯ | ೬೪ | ರಾಗಿಹಳ್ಳಿ | ಪುರುಷ |
| ೨೧ | ವೆಂಕಟಯ್ಯ | ೬೨ | ,, | ,, |
| ೨೨ | ದೊಡ್ಡಭೈರಪ್ಪ | ೫೫ | ತಿಮ್ಮನದೊಡ್ಡಿ | ,, |
| ೨೩ | ಚಿಕ್ಕತಾಯಮ್ಮ | ೪೮ | ಸೊಳ್ಳೆಪುರ | ಹೆಂಗಸು |

## ೨. ರೇಖಾ ಚಿತ್ರಗಳು

## ೧. ಇರುಳಿಗ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳ ರೇಖಾನಕ್ಷೆ



೨. ಹಕ್ಕಿಪಿಕ್ಕಿ ಬುಡಕಟ್ಟು ಸಮುದಾಯದ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳ ರೇಖಾನಕ್ಷೆ.



## ೩. ಛಾಯಾಚಿತ್ರಗಳು



ಇರುಳಿಗರ ಆಶ್ರಯ ಯೋಜನೆಯ ಮನೆ



ಇರುಳಿಗರ ಕಾಲೋನಿಯ ಕುಡಿಯುವ ನೀರಿನ ಯೋಜನೆ



ಇರುಳಿಗರ ಮಕ್ಕಳಿಗೆ ನಿರ್ಮಾಣವಾಗುತ್ತಿರುವ ನೂತನ ಶಾಲೆ



ಅಕ್ಷರ ಕಲಿಕೆಯಲ್ಲಿ ಇರುಳಿಗರ ಮಕ್ಕಳು



ಕರಕುಶಲತೆಯಲ್ಲಿ ಬುಟ್ಟಿನೇಯುವಿಕೆ



ಉತ್ಪಾದನಾ ಚಟುವಟಿಕೆಯಲ್ಲಿ ಪಶುಪಾಲನೆ



ಋತುಮತಿಯಾದಾಗ ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾಗಿ ನಿರ್ಮಿಸಿರುವ ಗೂಡ್ಲು




ಸರ್ಕಾರವು ಒದಗಿಸಿರುವ ಆಶ್ರಮ ಶಾಲೆ



ಜೋಡುಗಟ್ಟೆ ಇರುಳಿಗರ ಕಾಲೋನಿಯ ಕುಡಿಯುವ ನೀರಿನ ವ್ಯವಸ್ಥೆ



ಇರುಳಿಗರ ಸಂಕ್ರಾಂತಮ್ಮನ ಗುಡಿ



ಬುಟ್ಟಿ ನೇಯುವಿಕೆಯಲ್ಲಿ ಇರುಳಿಗರು



ಇರುಳಿಗರ ವಿದ್ಯಾರ್ಥಿ ಸಮೂಹ (ಚಿಕ್ಕ ಸೂಲಿಕೆರೆ)



ಇರುಳಿಗರು ಜೀವನೋಪಾಯಕ್ಕಾಗಿ ಕಟ್ಟಿಗೆ ಮಾರಲು ಸಿದ್ಧಪಡಿಸುತ್ತಿರುವುದು



ಇರುಳಿಗರ ತಮಟೆ ಕಣಿ



ಕಣಿ ಹೇಳುವವರ ಮನೆ (ದೊಡ್ಡ ಗಂಗಾವಾಡಿ)



ಇರುಳಿಗರ ಮೊರದ ಕಣಿ



ಇರುಳಿಗರ ಗುಡಿಸಲು (ಸಿದ್ಧೇಶ್ವರ ಕಾಲೋನಿ)



ಇರುಳಿಗರ ಆಶ್ರಯ ಮನೆ (ಜೇನುಕಲ್ಲು ಪಾಳ್ಯ)




ತಮ್ಮ ಸಮುದಾಯದವರ ಅಭಿವೃದ್ಧಿಗೆ ಕಟ್ಟಿಕೊಂಡ ಕ್ಷೇಮಾಭಿವೃದ್ಧಿ ಸಂಘ



ಹಕ್ಕಿಪಿಕ್ಕಿ ಸಮುದಾಯದವರ ವೈದ್ಯ ಪದ್ಧತಿಯ ಬಗ್ಗೆ ಮಾಹಿತಿ ನೀಡುತ್ತಿರುವುದು



ಹಕ್ಕಿಪಿಕ್ಕಿಯವರ ಕವಡೆ ಕಣಿ



ಕೈಬಂದಿ ನಿರ್ಮಿಸುತ್ತಿರುವ ಹಕ್ಕಿಪಿಕ್ಕಿಗಳು

ಸೌರಶಕ್ತಿ ಯೋಜನೆ (ಕರ್ನಾಟಕ ಸರ್ಕಾರ) ಬೂತಾನಹಳ್ಳಿ ಹಕ್ಕಿಪಿಕ್ಕಿ ಕಾಲೋನಿ





ಹಕ್ಕಿಪಿಕ್ಕಿಗಳಿಗೆ ನಿರ್ಮಿಸಿರುವ ಆಶ್ರಮ ಶಾಲೆಯಲ್ಲಿ ಅಕ್ಷರ ಕಲಿಯುತ್ತಿರುವ ವಿದ್ಯಾರ್ಥಿಗಳು



ಬೂತಾನಹಳ್ಳಿಯ ಹಕ್ಕಿಪಿಕ್ಕಿ ಕಾಲೋನಿ




ಹಕ್ಕಿಪಿಕ್ಕಿ ಸಮುದಾಯದ ಆಶ್ರಮ ಶಾಲೆ



ನೂತನವಾಗಿ ನಿರ್ಮಾಣವಾಗಿರುವ ಹಕ್ಕಿಪಿಕ್ಕಿ ಸಮುದಾಯದ ವಸತಿ ನಿಲಯ



ಹಕ್ಕಿಪಿಕ್ಕಿಗಳ ಮುನಿ ಆಚರಣೆ



ಪ್ಲಾಸ್ಟಿಕ್ ಬುಟ್ಟಿ ತಯಾರಿಕೆಯಲ್ಲಿ ಹಕ್ಕಿಪಿಕ್ಕಿ ಮಹಿಳೆಯರು



ಪ್ಲಾಸ್ಟಿಕ್ ಹೂಗಳ ಮಾರಾಟದಲ್ಲಿ ಹಕ್ಕಿಪಿಕ್ಕಿಗಳು

## ೪. ಬೆಂಗಳೂರು ಗ್ರಾಮಾಂತರ ಪರಿಸರದ(ರಾಮನಗರ ಜಿಲ್ಲೆ) ನಕಾಶೆ



# ೫. ಗ್ರಂಥ ಋಣ


೧. ಡಾ. ಎಂ.ಬೈರೇಗೌಡ — ಇರುಳಿಗರು-ಜಾನಪದ ಅಧ್ಯಯನ, ಸಿ.ವಿ.ಜಿ.ಪ್ರಕಾಶಕರು, ಬೆಂಗಳೂರು, ೨೦೦೨.

೨. ಡಾ. ಮಧು ಗುಂಡ್ಲುಪೇಟೆ — ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ, ಅಕ್ಷತಾ ಪ್ರಕಾಶನ, ಮೈಸೂರು, ೨೦೦೨.

೩. ಡಾ.ಕೆ.ಎಂ.ಮೈತ್ರಿ — ಬುಡಕಟ್ಟುಕುಲಕಸುಬುಗಳು, ಪ್ರಸಾರಂಗ, ಕ.ವಿ.ವಿ.ಹಂಪಿ,೨೦೦೨.

೪. ಬಿ.ಸಿದ್ದಗಂಗಯ್ಯ ಕಂಬಾಳ — ಇಲ್ಲಿಗರ ಸಂಸ್ಕೃತಿ, ಕ.ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೫. ಡಾ. ಕೆ. ಎಂ. ಮೈತ್ರಿ ಡಾ. ಚಲುವರಾಜು — ಬುಡಕಟ್ಟು ಅಧ್ಯಯನ, ಪ್ರಸಾರಂಗ,ಕ.ವಿ.ವಿ.ಹಂಪಿ, ಸಂಪುಟ ೩ ಸಂಚಿಕೆ-೧,೨, ೨೦೦೬.

೬. ಡಾ. ಹಿ.ಚಿ.ಬೋರಲಿಂಗಯ್ಯ — ಬುಡಕಟ್ಟು ಅಧ್ಯಯನ,ಪ್ರಸಾರಂಗ,ಕ.ವಿ.ವಿ.ಹಂಪಿ. ಸಂಪುಟ೧,೨,೩,೪,೨೦೦೩,೨೦೦೪,೨೦೦೫.

೭. ಪ್ರೊ ಹೆಚ್.ಸಿ. ಲಕ್ಕಪ್ಪ ಗೌಡ — ಕರ್ನಾಟಕ ಬುಡಕಟ್ಟುಗಳು, ಕ.ಜಾ. ಹಾಗೂ ಯಕ್ಷಗಾನ ಅಕಾಡೆಮಿ, ಸಂಚಿಕೆ ೧,೨, ಬೆಂಗಳೂರು, ೧೯೯೮,೨೦೦೦.

೮. ಡಾ. ಸಿದ್ದಲಿಂಗಯ್ಯ — ಗ್ರಾಮ ದೇವತೆಗಳು, ಅಕ್ಷರ ಪ್ರಕಾಶನ, ಬೆಂಗಳೂರು, ೨೦೦೦.

೯. ಡಾ. ಹಿ. ಚಿ. ಬೋರಲಿಂಗಯ್ಯ — ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ. ಪ್ರಕಾಶಕರು, ಬೆಂಗಳೂರು, ೨೦೦೧.

೧೦. ಡಾ. ಹಿ. ಚಿ. ಬೋರಲಿಂಗಯ್ಯ — ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧.

೧೧. ಪ್ರೊ. ಕಾಳೇಗೌಡ ನಾಗವಾರ ಎನ್. ಹುಚ್ಚಪ್ಪ ಮಾಸ್ತರ್ — ಗಿರಿಜನ ಸಂಸ್ಕೃತಿ, ಕ. ಜಾ. ಹಾಗೂ ಯ. ಅಕಾಡೆಮಿ, ಬೆಂಗಳೂರು, ೨೦೦೦.

೧೨. ಪ್ರೊ ಕಾಳೇಗೌಡ ನಾಗವಾರ ಡಾ. ಹಿ. ಚಿ. ಬೊರಲಿಂಗಯ್ಯ — ಗಿರಿಜನ ಕಾವ್ಯ, ಕ. ಜಾ. ಹಾಗೂ ಯ. ಅಕಾಡೆಮಿ, ೨೦೦೦.

೧೩. ಡಾ. ಹಿ. ಚಿ. ಬೋರಲಿಂಗಯ್ಯ — ಕಾಡು ಕಾಂಕ್ರಿಟ್ ಮತ್ತು ಅಕ್ಷರ ಪ್ರಕಾಶನ, ೧೯೯೬.

೧೪. ಡಾ. ಹಿ. ಚಿ. ಬೋರಲಿಂಗಯ್ಯ — ಕರ್ನಾಟಕ ಜಾನಪದ ಕಲೆಗಳ ಕೋಶ, ಪ್ರಸಾರಂಗ, ಕ.ವಿ.ವಿ ಹಂಪಿ, ೧೯೯೬.

೧೫. ಡಾ. ಸ. ಚಿ. ರಮೇಶ್ — ಅಲೆಮಾರಿಗಳ ಸ್ಥಿತಿಗತಿಗಳು, ಪ್ರಸಾರಂಗ, ಕ. ವಿ. ವಿ. ಹಂಪಿ, ೨೦೦೫.

೧೬. ಚ. ನ. ಶಂಕರರಾವ್ — ಭಾರತೀಯ ಸಮಾಜ ಜೈಭಾರತ್ ಪ್ರಕಾಶನ,

ಮಂಗಳೂರು.
೧೭. ಎ. ಎಸ್. ಪ್ರಭಾಕರ — ಆದಿವಾಸಿ ಆಖ್ಯಾನ, ಸಿದ್ದಾರ್ಥ ಪ್ರಕಾಶನ,
೧೮. ಡಾ. ಡಿ. ಕೆ. ರಾಜೇಂದ್ರ — ಜಾನಪದ ಶಿಷ್ಟಪದ, ಕನ್ನಡಪುಸಕ್ತ ಪ್ರಾಧಿಕಾರ, ಹೊಸಪೇಟೆ. ಬೆಂಗಳೂರು.
೧೯. ಎಸ್. ರಾಜಶೇಖರ್, ಡಾ. ಆರ್. ರಾಜೇಶ್ — ಜನಸಂಖ್ಯಾ ಶಾಸ್ತ್ರ, ಭ್ರಮರ ಪ್ರಕಾಶನ, ಶಿವಮೊಗ್ಗ.
೨೦. ಚ. ನ. ಶಂಕರ ರಾವ್ — ಸಮಾಜಶಾಸ್ತ್ರದ ಕಿರು ವಿಶ್ವಕೋಶ, ಜೈ ಭಾರತ್ ಪ್ರಕಾಶನ, ಮಂಗಳೂರು.
೨೧. ಡಾ. ಹಿ. ಚಿ. ಬೊರಲಿಂಗಯ್ಯ — ಉಪಸಂಸ್ಕೃತಿ ಅಧ್ಯಯನ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
೨೨. ಪ್ರೊ ರಂಗಸ್ವಾಮಿ ಬೆಳಕವಾಡಿ — ಸಾಮಾಜಿಕ ಮಾನವಶಾಸ್ತ್ರ, ಸತ್ಯಶ್ರೀ, ಬೆಂಗಳೂರು.
೨೩. ಪ್ರೊ ಕೆ. ಭೈರಪ್ಪ — ಸಮಾಜ ಸುಧಾರಕರು, ಸ್ವಪ್ನ ಬುಕ್ ಹೌಸ್, ಬೆಂಗಳೂರು.
೨೪. ಜಿ. ಆರ್. ಸತ್ಯಲಿಂಗರಾಜು — ಪುರಾತನ ತತ್ವ ಮಾನವಶಾಸ್ತ್ರ ಲಕ್ಷ್ಮಿ ಪ್ರಿಂಟಿಂಗ್, ಮೈಸೂರು.
೨೫. Pro. B.M. Das — Physical AnthropolgyKitab Mahal Allabad. Practical.
೨೬. Dr. Kumar — Social Anthropology , Lakshmi Narain Agarwal, Agra.
೨೭. ಡಾ. ಅರವಿಂದ ಮಾಲಗತ್ತಿ — ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶೀವಾದ ಚಂದನ ಪ್ರಿಂಟರ್ಸ್, ಬೆಂಗಳೂರು ೧೯೯೮.
೨೮. ಡಾ. ಹಿ.ಚಿ. ಬೋರಲಿಂಗಯ್ಯ — ಬುಡಕಟ್ಟು ದೈವಾರಾಧನೆ, ಶಕ್ತಿ ಪ್ರಿಂಟರ್ಸ್, ಬೆಂಗಳೂರು, ೨೦೦೮.
೨೯. ಡಾ. ಚಂದ್ರಶೇಖರ ದಾಮ್ಲೆ — ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶ, ರಶ್ಮಿ ಮುದ್ರಣ, ಬೆಂಗಳೂರು, ೨೦೦೩.
೩೦. ಡಾ. ಜಿ. ಆರ್. ತಿಪ್ಪೇಸ್ವಾಮಿ, ಡಾ.ರಂಗಾರೆಡ್ಡಿ ಕೋಡಿರಾಂಪುರ — ಜಾನಪದ ಅನ್ವಯಿಕತೆ, ಜಾಣಗೆರೆ ಮುದ್ರಣ, ಬೆಂಗಳೂರು- ೨೦೦೩.
೩೧. ಡಾ.ರಂಗಾರೆಡ್ಡಿ ಕೋಡಿರಾಂಪುರ — ಜಾನಪದ ಸಿದ್ಧಾಂತಗಳು, ಜಾಣಗೆರೆ ಮುದ್ರಣ, ಬೆಂಗಳೂರು-೨೦೦೩.
೩೨. ಬಿ. ಎಸ್. ಚಂದ್ರಶೇಖರ್ — ಸಮಾಜ ವಿಜ್ಞಾನಗಳಲ್ಲಿ ಸಂಶೋಧನಾ ವಿಧಾನಗಳು, ತ್ವರಿತ ಮುದ್ರಣ, ಗದಗ-೨೦೦೧.
೩೩. ಡಾ. ಹಿ. ಚಿ. ಬೋರಲಿಂಗಯ್ಯ — ಉಜ್ಜನಿ ಚೌಡಮ್ಮ, ಶಕ್ತಿ ಪ್ರಿಂಟರ್ಸ್, ಬೆಂಗಳೂರು- ೧೯೭೯, ೨೦೦೧.
೩೪. ಡಾ. ಶೈಲಜಾ ಹಿರೇಮಠ — ಮಹಿಳಾ ಅಧ್ಯಯನ, ಪ್ರಸಾರಂಗ, ಕ. ವಿ. ವಿ. ಹಂಪಿ. ೨೬೩

ಸಂಪುಟ ೮, ಸಂಚಿಕೆ ೧, ೨೦೦೬.

೩೫. ಟಿ.ಆರ್.ಚಂದ್ರಶೇಖರ್ ಎಂ.ಚಂದ್ರಪೂಜಾರಿ — ಅಭಿವೃದ್ಧಿ ಅಧ್ಯಯನ, ಸಂಪುಟ ೧,ಸಂಚಿಕೆ ೨, ಪ್ರಸಾರಂಗ, ಕ. ವಿ. ವಿ. ಹಂಪಿ, ೨೦೦೨.

೩೬. ಡಾ. ಶೈಲಜಾ ಹಿರೇಮಠ — ಮಹಿಳಾ ಅಧ್ಯಯನ, ಪ್ರಸಾರಂಗ, ಕ. ವಿ. ವಿ. ಹಂಪಿ, ಸಂಪುಟ ೯, ಸಂಚಿಕೆ ೧, ೨೦೦೭.

೩೭. ಡಾ. ಶೈಲಜಾ ಹಿರೇಮಠ — ಮಹಿಳಾ ಅಧ್ಯಯನ, ಪ್ರಸಾರಂಗ, .ಕ. ವಿ. ವಿ. ಹಂಪಿ, ಸಂಪುಟ ೮, ಸಂಚಿಕೆ ೨, ೨೦೦೬.

೩೮. ಡಾ. ಶೈಲಜಾ ಹಿರೇಮಠ — ಮಹಿಳಾ ಅಧ್ಯಯನ, ಪ್ರಸಾರಂಗ .ಕ. ವಿ. ವಿ. ಹಂಪಿ, ಸಂಪುಟ ೯, ಸಂಚಿಕೆ ೨, ೨೦೦೭.

೩೯. ಎಂ.ಚಂದ್ರಪೂಜಾರಿ — ಅಭಿವೃದ್ಧಿ ಅಧ್ಯಯನ, ಪ್ರಸಾರಂಗ, .ಕ. ವಿ. ವಿ. ಹಂಪಿ, ಸಂಪುಟ ೭, ಸಂಚಿಕೆ ೧, ಸಂಚಿಕೆ ೨, ೨೦೦೯.

೪೦. ಎಂ.ಚಂದ್ರಪೂಜಾರಿ — ಅಭಿವೃದ್ಧಿ ಅಧ್ಯಯನ, ಪ್ರಸಾರಂಗ .ಕ. ವಿ. ವಿ. ಹಂಪಿ, ಸಂಪುಟ ೬, ಸಂಚಿಕೆ ೨, ೨೦೦೭.

೪೧. ಡಾ. ಶಿವಾನಂದ, ಎನ್.ವಿ ರಕ್ತ ಮಠ — ಮಹಿಳಾ ಅಧಯ್ಯನ, ಪ್ರಸಾರಂಗ ಕ. ವಿ. ವಿ. ಹಂಪಿ, ಸಂಪುಟ ೬, ಸಂಯುಕ್ತ ಸಂಚಿಕೆ ೧+೨, ೨೦೦೪.

೪೨. ಎ.ಶ್ರೀಧರ್ — ಅಭಿವೃದ್ಧಿ ಅಧ್ಯಯನ, ಪ್ರಸಾರಂಗ, ಕ. ವಿ. ವಿ. ಹಂಪಿ, ಸಂಪುಟ ೪, ಸಂಚಿಕೆ ೨ ಸಂಖ್ಯೆ ೬, 2005.

೪೩. ಎ.ಶ್ರೀಧರ್, ಸಿದ್ದಗಂಗಮ್ಮ — ಅಭಿವೃದ್ಧಿ ಅಧ್ಯಯನ, ಪ್ರಸಾರಂಗ, ಕ. ವಿ. ವಿ. ಹಂಪಿ, ಸಂಪುಟ ೪, ಸಂಚಿಕೆ ೧, ೨೦೦೫.

೪೪. ಟಿ.ಆರ್.ಚಂದ್ರಶೇಖರ್ ಎಂ.ಚಂದ್ರಪೂಜಾರಿ — ಅಭಿವೃದ್ಧಿ ಅಧ್ಯಯನ, ಪ್ರಸಾರಂಗ, ಕ. ವಿ. ವಿ. ಹಂಪಿ, ಸಂಪುಟ ೨, ಸಂಚಿಕೆ ೨, ೨೦೦೩.

೪೫. ಟಿ.ಆರ್.ಚಂದ್ರಶೇಖರ್ ಎಂ.ಚಂದ್ರಪೂಜಾರಿ — ಅಭಿವೃದ್ಧಿ ಅಧ್ಯಯನ, ಪ್ರಸಾರಂಗ, ಕ. ವಿ. ವಿ ಹಂಪಿ, ಸಂಪುಟ ೨, ಸಂಚಿಕೆ ೧, ೨೦೦೩.

೪೬. ಡಾ.ಹಿ.ಚಿ.ಬೋರಲಿಂಗಯ್ಯ — ಗೊಂಡರ ರಾಮಾಯಣ, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು-೧೮, ೨೦೦೯.

೪೭. ಪ್ರೊ.ಕೃಷ್ಣೇಗೌಡ — ಸಮಾಜಶಾಸ್ತ್ರದ ಮೂಲ ತತ್ವಗಳು, ಶ್ರೇಯಸ್ ಪಬ್ಲಿಕೇಷನ್ಸ್, ಬೆಂಗಳೂರು-೮೫, ೨೦೦೮.

೪೮. C.N Shankar Rao — Sociology Primary Principles, S.CHAND&COMPANY LTD, New Delhi-55, 2001.

೪೯. ಪ್ರೊ.ಕೆ. ಭೈರಪ್ಪ — ಭಾರತದ ಸಮಾಜದ ಪರಂಪರೆ ಮತ್ತು ಪರಿವರ್ತನೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು-೦೯, ೨೦೦೬.

೫೦. ಡಾ. ಎಂ.ಪಿ. ಭುವನೇಶ್ವರ್ ಪ್ರಸಾದ್ ಭಾರತದ ಸಂವಿಧಾನ, ಶಬರಿ ಮಲಯನ್ ಬುಕ್ ಡಿಸ್ಟ್ರೀಬ್ಯುಟರ್ಸ್, ಬೆಂಗಳೂರು-೦೨, ೨೦೦೬.

೫೧. ಜಿ. ಕುಮಾರಪ್ಪ ಸಂಶೋಧನೆಯ ಹಾದಿ, ನವ ಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-೦೧, ೨೦೦೪.

೫೨. ಪಾಲಾಕ್ಷ ಸ್ವತಂತ್ರ ಭಾರತ, ಟೆಕ್ ಪ್ರಿಂಟ್ಸ್, ಮೈಸೂರು-೦೫, ೨೦೦೭.

೫೩. ಡಾ. ಎನ್. ಚಿನ್ನಸ್ವಾಮಿ ಸೋಸಲೆ ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೧೦.

೫೪. ಡಾ. ಐ.ಜಿ. ಮ್ಯಾಗೇರಿ ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮, ೨೦೦೮.

೫೫. ಪಿ. ಮಲ್ಲಪ್ಪ ಕರ್ನಾಟಕದ ಭೂಗೋಳಶಾಸ್ತ್ರ, ಚೇತನ ಬುಕ್‌ಹೌಸ್, ಮೈಸೂರು-೨೪, ೨೦೦೪.

೫೬. ಡಾ. ಮಲ್ಲಣ್ಣ ಶಂಕರಣ್ಣ ನಾಗರಾಳ ಒಣ ಬೇಸಾಯ ಪದ್ಧತಿಗಳು, ಪ್ರಸಾರಾಂಗ, ಕ.ವಿ.ವಿ, ಹಂಪಿ,೨೦೧೦.

೫೭. ಎಂ. ಚಂದ್ರ ಪೂಜಾರಿ ಸಮುದಾಯ ಮತ್ತು ಸಹಭಾಗಿತ್ವ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೨.

೫೮. ಡಾ.ಎಸ್.ಎಂ. ಅಂಗಡಿ ಕುರುಬ ಸಮುದಾಯ ಭಾಷೆ, ಮಾನವಭಾಷಾಶಾಸ್ತ್ರ ಅಧ್ಯಯನ, ವಿಶ್ವಾಸ್ ಪ್ರಿಂಟರ್ಸ್, ಬೆಂಗಳೂರು-೧೮, ೨೦೦೯.

೫೯. ಕೆ.ಸಿ. ವೆಂಕಟೇಶ್ ಸರ್ಕಾರಿ ಸೌಲಭ್ಯಗಳ ಮಾಹಿತಿ ಪುಸ್ತಕ, ವರ್ಣ ಸಲ್ಯೂಷನ್ಸ್, ಬೆಂಗಳೂರು-೧೦, ೨೦೧೦.

೬೦. ಕೆ.ಎನ್. ಅಶ್ವತ್ಥಪ್ಪ ಪ್ರಾಚೀನ ಭಾರತದ ಇತಿಹಾಸ, ಆದಿತ್ಯ ಪ್ರಿಂಟರ್ಸ್, ಬೆಂಗಳೂರು-೧೯, ೨೦೦೭.

೬೧. ಪ್ರೊ. ಸಿ. ಪಾರ್ವತಮ್ಮ ಆದಿವಾಸಿ ಸಮುದಾಯಗಳ ಅಭಿವೃದ್ಧಿ, ರಾಜೇಶ್ ಪ್ರಿಂಟರ್ಸ್, ಮೈಸೂರು-೦೧, ೨೦೦೭.

೬೨. ಡಾ. ಗಂಗಾಧರ್ ದೈವಜ್ಞ ಸಣ್ಣಾಟಗಳು ಹುಟ್ಟು ಬೆಳವಣಿಗೆ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೬.

೬೩. ಡಾ. ಹೆಚ್.ಡಿ. ಪ್ರಶಾಂತ್ ಶೈಕ್ಷಣಿಕ ಪ್ರೇರಕಾಂಶಗಳ ಸಾಮಾಜಿಕ ಆಯಾಮಗಳು, ಕ.ವಿ.ವಿ, ಹಂಪಿ, ೨೦೧೦.

೬೪. ಡಾ. ಸಿ. ಮಹದೇವ ನೇಕಾರ ಸಮಾಜ ಸಂಸ್ಕೃತಿ ಆರ್ಥಿಕ ಸ್ಥಿತಿಗತಿ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೯.

೬೫. ಪಿ. ವೀರಭದ್ರ ನಾಯಕ್ ಶಿಕ್ಷಣ ವಂಚಿತ ಬುಡಕಟ್ಟು ಮಕ್ಕಳು, ಪ್ರಸಾರಾಂಗ ಕ.ವಿ.ವಿ, ಹಂಪಿ, ೨೦೧೦.

೬೬. ಡಾ. ಬಿ.ಎಂ. ಪುಟ್ಟಯ್ಯ — ಸಂಶೋಧನೆ ತಾತ್ವಿಕ ಆಯಾಮಗಳು, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೧೦.

೬೭. ಡಾ. ನಲ್ಲೂರ್ ಪ್ರಸಾದ್ — ಗಂಗಡಿಕಾರ ಒಕ್ಕಲಿಗರು, ಅಪ್ರಧೀನ ಪ್ರಕಾಶನ ಬೆಂಗಳೂರು-೬೧, ೨೦೦೧.

೬೮. ಡಾ. ಕೆ. ರಮಾನಂದ — ಕೆಂಪೇಗೌಡ, ಈಶ್ವರಿ ಪ್ರಿಂಟರ್ಸ್, ಬೆಂಗಳೂರು-೨೯, ೨೦೧೦.

೬೯. ಪ್ರೊ. ಕೆ. ಭೈರಪ್ಪ — ವೈದ್ಯಕೀಯ ಸಮಾಜಶಾಸ್ತ್ರ, ಸ್ವಪ್ನ ಬುಕ್‌ಹೌಸ್, ಬೆಂಗಳೂರು-೦೯, ೨೦೦೭.

೭೦. ಡಾ. ಲಕ್ಷ್ಮೀದೇವಿ ಎಲ್. — ಬೇಟೆ ಪರಂಪರೆ, ಬೇಡರ ಸಂಸ್ಕೃತಿ, ಪ್ರಸಾರಾಂಗ ಕ.ವಿ.ವಿ, ಹಂಪಿ, ೨೦೧೦.

೭೧. ಡಾ. ಗುರುಲಿಂಗಯ್ಯ — ಸಾಮಾಜಿಕ ಹೊರ ತಳ್ಳುವಿಕೆಯ ಪರಿಕಲ್ಪನೆ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೧೦

೭೨. ತೋಟದ ಮನೆ ಕೃಷ್ಣೇಗೌಡ — ಸಂಕ್ರಾಂತಿ, ಮತ್ತಿಕೆರೆ ಪ್ರಕಾಶನ, ಚನ್ನಪಟ್ಟಣ-೦೧, ೨೦೧೦.

೭೩. ಡಾ. ಟಿ.ಆರ್. ಚಂದ್ರಶೇಖರ್ — ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೮.

೭೪. ಡಾ. ಎಸ್.ಎನ್. ಶಿವರುದ್ರಸ್ವಾಮಿ — ಕರ್ನಾಟಕದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸ, ಸತ್ಯಶ್ರೀ ಪ್ರಿಂಟರ್ಸ್, ಬೆಂಗಳೂರು, ೨೦೦೮.

೭೫. ಡಾ. ಟಿ. ಗೋವಿಂದಯ್ಯ — ಮಾಗಡಿ ಕೆಂಪೇಗೌಡ ರಾಜ ವಂಶಸ್ಥ, ಯಲಹಂಕ ನಾಡ ಪ್ರಭುಗಳ ಭವ್ಯ ಐತಿಹಾಸಿಕ ಪರಂಪರೆ, ಸೂರ್ಯವಂಶಿ, ಬೆಂಗಳೂರು-೪೦, ೨೦೦೮.

೭೬. ಡಾ. ಸೋಮಣ್ಣ — ವ್ಯವಸಾಯ ಸಂಬಂಧಿ ಆಚರಣೆಗಳು, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೧೦.

೭೭. ಡಾ. ಟಿ.ಆರ್. ಚಂದ್ರಶೇಖರ್ — ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ಅಧ್ಯಯನಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩.

೭೮. ಡಾ. ರಾಜಾರಾಮ ಹೆಗಡೆ — ವಸಾಹತುಪೂರ್ವ ಕರ್ನಾಟಕದ ರಾಜ್ಯಪದ್ಧತಿ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೮.

೭೯. ಪ್ರೊ. ರಂಗಸ್ವಾಮಿ ಬೆಳಕವಾಡಿ — ಸಾಮಾಜಿಕ ಸಂಶೋಧನಾ ವಿಧಾನಗಳು ಮತ್ತು ತಂತ್ರಗಳು, ಸುಭಾಸ್ ಬುಕ್ ಸ್ಟೋರ್ಸ್, ಬೆಂಗಳೂರು-೦೨, ೨೦೦೬,

೮೦. ಚ.ನ. ಶಂಕರ್‌ರಾವ್ — ಸಮಾಜಶಾಸ್ತ್ರದ ಪ್ರಾಥಮಿಕ ಪತ್ರಗಳು, ಜೈ

ಭಾರತ್ ಪ್ರಕಾಶನ, ಮಂಗಳೂರು, ೨೦೦೮.
೮೧. ಡಾ. ಕೆ. ಮೋಹನ್‌ಕೃಷ್ಣ ರೈ ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೭.
೮೨. ಪ್ರೊ. ಎನ್. ಚಂದ್ರಪ್ಪ ಮುಂಡ ಸಂಸ್ಕೃತಿ, ಮುಂಡ ಪ್ರಕಾಶನ, ಬೆಂಗಳೂರು. ೨೦೦೨.

೮೩. ಎಂ. ಚಂದ್ರ ಪೂಜಾರಿ ಸಂಶೋಧನೆ ಏನು? ಏಕೆ? ಹೇಗೆ?, ಪ್ರಸಾರಾಂಗ, ಕ.ವಿ.ವಿ, ಹಂಪಿ, ೨೦೦೯.
೮೪. ಸುರೇಶ್ ಮೂನ ಇದು ನಮ್ಮ ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯.
೮೫. ಅ.ನ. ಕೃಷ್ಣರಾಯ ಚಿತ್ರಕಲೆ, ವಿದ್ಯಾನಿಧಿ ಬುಕ್ ಡಿಪೋ, ಮೈಸೂರು-೧, ೧೯೭೦.
೮೬. ಕೃಷ್ಣಾನಂದ ಕಾಮತ ಮಹಿಷಾಧಿಪತಿ ತೋಡ, ಸುಧಾ ೧೯೮೩.
೮೭. ಕೃಷ್ಣಾನಂದ ಕಾಮತ ಕರಾವಳಿಯ ಕಾವಿಚಿತ್ರಗಳು, ತರಂಗ ೧೯೮೪.
೮೮. ಗುಲ್ವಾಡಿ-ವಾರ್ಲಿ ಗಿರಿಜನರ ಚಿತ್ರಕಲೆ, ಪ್ರಜಾವಾಣಿ, ೧೯೭೫.
೮೮. ಪಿ.ಆರ್. ತಿಪ್ಪೇಸ್ವಾಮಿ ಕಲಂಕಾರಿ ಚಿತ್ರಕಲೆ, ಕನ್ನಡ ಪ್ರಭ.
೮೯. ಪಿ.ಆರ್. ತಿಪ್ಪೇಸ್ವಾಮಿ ಸಾಹಿತ್ಯ ಮತ್ತು ಚಿತ್ರಕಲೆ, ಕನ್ನಡ ಸಾಹಿತ್ಯ ಪರಿಷತ್ತು, ೧೯೮೪.
೯೦. ಪಿ.ಆರ್. ತಿಪ್ಪೇಸ್ವಾಮಿ ಕರ್ನಾಟಕ ಚಿತ್ರಕಲೆ, ಅವಲೋಕನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೮೫.
೯೧. ಪಿ.ಆರ್. ತಿಪ್ಪೇಸ್ವಾಮಿ ವ್ಯಂಗ್ಯ ಚಿತ್ರಕಲೆ-ಒಂದು ಸಮೀಕ್ಷೆ, ಮಾನವಿಕ ಕರ್ನಾಟಕ, ಮೈಸೂರು ವಿಶ್ವವಿದ್ಯಾಲಯ, ೧೯೮೬.
೯೨. ಪಿ.ಆರ್. ತಿಪ್ಪೇಸ್ವಾಮಿ ಮುಖವಾಡಗಳು, ಬಾಲಭಾರತಿ, ವಿಜಾಪುರ, ೧೯೮೩.
೯೩. ಡಾ. ಜೀ.ಶಂ. ಪರಮಶಿವಯ್ಯ ಜನಪದ ಕಲಾವಿಹಾರ, ಮಿಂಚಿನಬಳ್ಳಿ, ಗ್ರಂಥಮಾಲೆ, ಧಾರವಾಡ, ೧೯೮೪.
೯೪. ಮಾಧವ ಜಾತ್ರೆಯಲ್ಲಿ ಧ್ವಜದ ಪಾತ್ರ, ಪ್ರಜಾಮತ, ಬೆಂಗಳೂರು, ೧೯೮೪.
೯೫. ರಂಗಾರೆಡ್ಡಿ ಕೋಡಿರಾಂಪುರ ಜನಪದ ಕರಕುಶಲ ಕಲೆಗಳು, ವಿಶ್ವ ಕನ್ನಡ ಸಮ್ಮೇಳನ, ಸಾಹಿತ್ಯಮಾಲೆ (ಕರ್ನಾಟಕ ಜಾನಪದ ಸಮೀಕ್ಷೆ ಗ್ರಂಥದಿಂದ) ೧೯೮೩.
೯೬. ಡಾ. ಡಿ.ಕೆ. ರಾಜೇಂದ್ರ ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ, ಪ್ರಸಾರಾಂಗ, ಮೈಸೂರು, ವಿಶ್ವವಿದ್ಯಾನಿಲಯ, ೧೯೮೦.

೯೭. ಸುಧೇಷ್ಣಾ — ಕರಾವಳಿಯ ಭೂತಗಳು, ತರಂಗ, ೧೯೮೩.

೯೮. ಶ್ರೀ ಮಂಜುನಾಥ — ಸಂಸ್ಕೃತಿ ಸಂಶೋಧನ-ಪ್ರತಿಷ್ಠಾನ-ಉದ್ಧರಣಿಯ ಪಟಲಗಳು.

೯೯. ಡಾ. ಎಚ್.ಎಂ. ಮಹೇಶ್ವರಯ್ಯ — ಕ್ರಿಯಾಶೀಲ ಜಾನಪದ (ಲೇಖನ), ಕರ್ನಾಟಕ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೦೨.

